|| ಶ್ರೀಃ ||

ಶ್ರೀಮನ್ನಿಗಮಾಂತಮಹಾದೇಶಿಕವಿರಚಿತ

# ರಹಸ್ಯಶಿಖಾಮಣಿ




ಅನುವಾದಕರು :

ದೇಶಿಕದರ್ಶನಚೂಡಾಮಣಿ

ವೇದಭೂಷಣ, ಸ್ವಚ್ಛಂದಂ, ಅನಂತ ನರಸಿಂಹಾಚಾರ್, ಎಂ.ಎ.

ಶ್ರೀಕಾರ್ಯಂ, ಶ್ರೀಮದಾಂಡವನ್ ಪೌಂಡರೀಕಪುರಂಸ್ವಾಮಿ-
ಆಶ್ರಮಮ್, ಶ್ರೀರಂಗಮ್.

ಸಂಸ್ಕೃತ ವಿಭಾಗದ ಮುಖ್ಯಸ್ಥರು, ಎ.ಪಿ.ಎಸ್. ವಾಣಿಜ್ಯ ಕಾಲೇಜು,
ಬೆಂಗಳೂರು – 560019.

*The Author and Publisher of this book is ever greatful to The Editor, T. T. Devasthanams, who has helped for the Publication of this book by sanctioning the financial Aid.*

॥ ಶ್ರೀಃ ॥

ಶ್ರೀಮನ್ನಿಗಮಾಂತಮಹಾದೇಶಿಕವಿರಚಿತ

# ರಹಸ್ಯಶಿಖಾಮಣಿ

ಅನುವಾದಕರು :

ದೇಶಿಕದರ್ಶನಚೂಡಾಮಣಿ

ವೇದಭೂಷಣ, ಸ್ವಚ್ಛಂದಂ, ಅನಂತ ನರಸಿಂಹಾಚಾರ್, ಎಂ.ಎ.
ಶ್ರೀಕಾರ್ಯಂ, ಶ್ರೀಮದಾಂಡವನ್ ಪೌಂಡರೀಕಪುರಂಸ್ವಾಮಿ-
ಆಶ್ರಮಮ್, ಶ್ರೀರಂಗಮ್.
ಸಂಸ್ಕೃತ ವಿಭಾಗದ ಮುಖ್ಯಸ್ಥರು, ಎ.ಪಿ.ಎಸ್. ವಾಣಿಜ್ಯ ಕಾಲೇಜು,
ಬೆಂಗಳೂರು – 560 019.

ಅನಂತ ಪ್ರಕಾಶನ

ನಂ. 33, 2ನೇ ಕ್ರಾಸ್, ಸಮಿೂರಪುರಂ
ಬೆಂಗಳೂರು-560 018.

"RAHASYASIKHAMANI"
(Original Manipravala Text of Vedantadesikar with Kannada Translation and Running Commentary in Kannada Script. —by Sri A. Anantha Narasimhachar



*Pages* : 168+2+4=174



*Copies* : 1000

*Price* : 20-00

*Printed at* : SRI LAKSHMI PRINTING WORKS
Gandhi Bazaar, Bangalore-560 004

*Published by* :
"ANANTHA PRAKASHANA"
No. 33, II Cross, Samirapuram,
Bangalore-560 018

श्रीमते रामानुजाय नमः ।



।। श्रीमते निगमान्तमहादेशिकाय नमः ।।

।। श्रीमते श्रीनिवासमहादेशिकाय नमः ।।

[श्रिमद्वेदमार्गप्रतिष्ठापनाचार्याणां सर्वतन्त्रस्वतन्त्रोभयवेदान्ताचार्याणां श्रीरामानुजसिद्धान्तनिर्धारणसार्वभौमानां श्रीमन्नाथमुनि - श्रिमद्यामुनमुनि - श्रीमद्रामानुजमुनि - मुनिरूप - मुनित्रयसिद्धान्तस्थापनाचार्याणां श्रीमतां श्रीश्रीनिवासमहादेशिकसंयमि सार्वभौमकटाक्षलब्ध-सार्वज्ञनां श्रीरङ्ग-श्री मदाण्डवन्-पौण्डरीकपुरंस्वामि-आश्रमस्थितानां श्रिमतां श्री गोपालदेशिक-महादेशिकानां स्वमिनां अनुग्रहलेखनम्। ]

लोके जनिमन्तस्सर्वेऽपि सुखमेवानुभवितुं अभिलषन्ति नेतरत् । तच्च सुखं द्विविधं ऐहिकं पारत्रिकंचेति । अनादेः जीवस्य अनन्तकोटिजन्मकृतपुण्यपापकर्मवशात्सुखमिवदुःखमपि पर्यायेण अनुभवनीयं भवति । यदि वयं दुःखानुभवं निराचिकीर्षामः तदा धर्मशास्त्रोक्त प्रतिपदोक्त प्रायश्चित्तानि अवश्यानुष्टेयानि । जन्मान्तरीयकर्मणां अज्ञानात् पूर्वकृतपापानां

प्रतिपदोक्तप्रायश्चित्तानुष्ठनासम्भवात् तानिनापनेयानि भवन्ति। ऐहलौकिकदुष्कर्मणामपि प्रायश्चित्तानुष्ठनं अकिञ्चनानां दुष्करं। अत इह दुःखानुभवः अनिवार्यएव। पुण्यकर्माधीन सुखानुभवोऽप्यल्पः दुःखसंवलितश्चेति अकिंचित्कर एव। स्वर्गसुखमपि इन्द्रादि देवतापरिचरणात्मकं नश्वरं च। पारत्रिकं ब्रह्मानन्दात्मकं सुखंतु अप्राकृतं अमन्दानन्दतुन्दिलं अनश्वरं नित्यं च।

इदं च सुखं भक्तिप्रपत्त्यन्यतरोपायलभ्यं। तथा चोक्तं अहिर्बुध्न्यसंहितायां :-

भक्त्या परमयावाऽपि प्रपत्त्या वा महामुने।
प्राप्योऽहं नान्यथा प्राप्यः मम कैङ्कर्यलिप्सुभिः॥ इति

भक्तिश्च तैलधारावदविच्छिन्नस्मृतिसन्ततिरुपा आदेहपातं अनुष्ठेया। सा च कलिग्राहग्रस्तैरस्माभिः सर्वथा सर्वदा च नानुष्ठेया। तदुक्तं कुलशेखरैः "प्राणप्रयाणसमये कफवातपित्तैः कण्ठावरोधनविधौ स्मरणं कुतस्ते" इति। अतश्चरमश्लोक विहिता प्रपत्तिरेव अस्मादृशैरनुष्ठेया भवति। सा च अनन्तकोटिजन्मकृतनानाविधपाप्मनाशनचणा, सर्वपापप्रायश्चित्तरूपा।

प्रपत्तिविधायक चरमश्लोकश्च अर्जुनव्याजेन गीतायां श्रीकृष्णपरमात्मना उपदिष्ट एव आचार्यपरम्परा समागतः

उपदेशैकसमधिगम्यः रहस्य त्रयेष्वन्यतमः सुप्रसिद्धः। परन्तु अन्यदपि श्लोकद्वयं महद्भिरङ्गीकृतं वरीवर्ति। तयोरन्यतरः रामचरमश्लोकः। अन्यः वराहचरमश्लोकः।

"सकृदेव प्रपन्नाय तवास्मीति च याचते।
अभयं सर्वभूतेभ्यः ददाम्येतद्व्रतं मम॥" अयं रामचरमश्लोकः अभयप्रदानसारनामकेन ग्रन्थेन सम्यक् विवृतः आचार्येण। वराहचरमश्लोकस्तु प्रकृतग्रन्थप्रतिपाद्यःविचारविषयीभूतः। अत्र त्रयाणामपि चरमश्लोकानां वक्तृवैलक्षण्यं एकरूपमेव, यतः वक्तारः वराहरामकृष्णाः त्रयोपि भगवतो नारायणस्य विभवावतार एव। तथाऽपि भूवराहस्यैव अवतारेषु दशस्वपि औत्कृष्ट्यं मनोरञ्जकतया अत्यद्भुतं प्रतिपाद्य, रहस्यशिखामणेः (वराह) चरमश्लोकस्यैव वक्तृवैलक्षण्यं विशिषन्ति वेदान्तगुरवः। इदं च रहस्यं वेदन्ताचार्यानुगृहीतेषु उपलभ्यमानेषु सप्तविंशतिसंख्याकेषु चिल्लरै रहस्येषु अन्यतमम्। वराहचरमश्लोकात्मकस्यास्य रहस्यत्रयादपि श्रैष्ठ्यप्रतिपादनायैव रहस्य शिखामणिरिति शीर्षकमदुरितिप्रतिभाति। अस्य इतर चरमश्लोकाभ्यां पूर्वत्वंच ज्ञानवराहस्य (ज्ञानप्पिरान्) अवतारेषु पूर्वत्वात्।

कृष्णचरमश्लोकस्य श्रोता प्रपन्नः सखा शिष्यश्चअर्जुनः। अयं राजकुलप्रसूतः। रामचरमश्लोकस्य श्रोता सुग्रीवः कपिकुल-

पतिः सखा च। वराहचरमश्लोकस्य श्रोत्री वराहमहिषी भूदेवी। एषा अज्ञातनिग्रहा जगन्माता प्रजावत्सला क्षमाघना सुग्रीवार्जुनाभ्यां देवदेवदिव्यमहिषी अतिविलक्षणा। अतः श्रोतृवैलक्षण्यं वराहचरमश्लोकस्येवेत्यत्र न कमपि संशीतिः।

श्रीकृष्णेन सर्वपापविमोचनं, रामेण सर्वाभयप्रदानं भूवराहेण परमगतिनयनं च तेषां करुणयैव भवति। परंतु वराह चरमश्लोके भगवतिः करुणा यथा निरर्गलं प्रवहति न तथाऽन्ययोः। अतः विषयवैलक्षण्यमपि रहस्य शिखामणेरेव।

अतः वक्तृतः श्रोतृतः विषयतश्च विलक्षणः वराह-चरमश्लोकः। अत एव पार्थक्येन रहस्यशिखामणिरिति प्रबन्धः कृतः वेदान्तगुरुभिः, न तु रहस्यचतुष्टय सारान्यतमत्वेन।

ईदृशं रहस्यशिखामणिं कर्नाटक भाषायां यावदपेक्षितं उपपिपादयिषुः अस्मत्प्रियशिष्यः अस्मदाश्रम श्रीकार्यपदभाजः, अस्मत्सन्निधावेव एतद्ग्रन्थमधीतवान्, अनन्तनरसिंहनामा मुद्रणाय कृतप्रयत्नः इति श्रुत्वा अतीव सन्तुष्टान्तरंगा वयं अस्मद्देशिकसत्सम्प्रदायप्रचारशीलस्याऽस्य प्रयत्नः फलेग्रहिः भूयात्। तथा अस्मै दीर्घायुष्मत्ता, अरोगदृढगात्रता सर्वाभीष्ट-सिद्धिश्च भूयासुरिति अस्मदाचार्यसन्ततिं सम्प्रार्थ्य नारायण-स्मरणपूर्वकं शुभान्याशास्महे ॥

नारायण नारायण

— इती शम् —

॥ ಶ್ರೀರಸ್ತು ॥

॥ ಶ್ರೀಮತೇ ಶ್ರೀ ಗೋಪಾಲದೇಶಿಕ ಮಹಾದೇಶಿಕಾಯ ನಮಃ ॥
॥ ಶ್ರೀಮತೇ ಶ್ರೀನಿವಾಸಮಹಾದೇಶಿಕಾಯ ನಮಃ ॥
॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

ಶ್ರೀವಾಸರಂಗೆ ಪರಕಾಲಮುನಿತ್ರಯಾಪ್ತ-
ಲಕ್ಷ್ಮಾತ್ಮರಕ್ಷಣ ಯತಿತ್ವಯುಗಾಗಮಾಂತಮ್।
ಆಚಾರ್ಯಭಕ್ತಿಪರಿಪೂತ ಮನರ್ಘಶೀಲಂ
ಗೋಪಾಲದೇಶಿಕಮುನಿಂ ಗುರುಮಾಶ್ರಯಾಮಃ ॥

ಶ್ರಿಯಃಪತಿಯಾದ ಶ್ರೀಮನ್ನಾರಾಯಣನು ಶ್ರೀದೇವಿ, ಭೂದೇವಿ ಮತ್ತು ನೀಳಾದೇವಿಯರೆಂಬ ಮೂರು ಮಹಿಷಿಯರೊಡನೆ ಸದಾ ನಿತ್ಯ-ವಿಭೂತಿಯಾದ ಶ್ರೀವೈಕುಂಠಲೋಕದಲ್ಲಿ ಪ್ರಕಾಶಿಸುತ್ತಿದ್ದಾನೆ. ನಾರಾಯಣನೂ ಈ ದೇವಿಯರೂ ಪ್ರಪಂಚದಲ್ಲಿನ ಚೇತನವರ್ಗಗಳೆಲ್ಲಕ್ಕೂ ಮಾತಾಪಿತೃಗಳು. ಸಂಸಾರಸಾಗರವೆಂಬ ದುಃಖಸಾಗರದಲ್ಲಿ ಮುಳುಗಿರುವ ಚೇತನರನ್ನುದ್ಧರಿಸಿ, ಅವರು ಮತ್ತೆ ಈ ಸಂಸಾರ ಸಾಗರದಲ್ಲಿ ಸಿಲುಕಿಕೊಳ್ಳದಂತೆ ಮಾಡಿ, ಅವರನ್ನು ನಿತ್ಯ ವಿಭೂತಿಗೆ ಕೊಂಡೊಯ್ದು, ಅವರಿಗೂ, ತಮಗೆ ಸರಿಸಮಾನವಾದ ಪರಿಪೂರ್ಣ ಬ್ರಹ್ಮಾನಂದವನ್ನನುಗ್ರಹಿಸಬೇಕೆಂಬುದೇ ಈ ಜಗನ್ಮಾತಾ-ಪಿತೃಗಳ ಹೆಬ್ಬಯಕೆಯಾಗಿರುತ್ತದೆ. ಈ ರೀತಿಯಾದ ಆಸೆಯಿಂದಿದ್ದರೂ, ಎಲ್ಲ ಚೇತನವರ್ಗಕ್ಕೂ ಪರಮಾತ್ಮನು ಒಮ್ಮೆಲೆ ಮೋಕ್ಷವನ್ನನುಗ್ರಹಿಸಲು ಸಾಧ್ಯವಿಲ್ಲ. ಏಕೆಂದರೆ, ಈಗಾಗಲೇ ಕೆಲ ಚೇತನರು ಈ ಅನಾದಿಯಾದ ಸಂಸಾರದಲ್ಲಿದ್ದರೂ, ಪರಮಾತ್ಮನನ್ನು ಸೇರಲು ಅನೇಕ ಸಾವಿರಾರು ವರ್ಷಗಳ-ಕಾಲ ಸಾಧನವನ್ನೆಸಗಿದ್ದಾರೆ. ಕೆಲವರು ಕೆಲಕಾಲ ಮಾತ್ರ ಸಾಧನೆ ಮಾಡಿದ್ದಾರೆ, ಮತ್ತೆ ಕೆಲವರು ಯಾವ ಸಾಧನೆಯನ್ನೂ ಮಾಡಿಲ್ಲ. ಹೀಗಿರುವಲ್ಲಿ ಎಲ್ಲರಿಗೂ ಒಮ್ಮೆಲೆ ಮೋಕ್ಷವನ್ನನುಗ್ರಹಿಸಿದರೆ, ಸಾಧನೆ ಮಾಡಿ-

ದವರು, ಮಾಡದವರು ಇಬ್ಬರನ್ನೂ ಒಂದೇ ರೀತಿ ಕಂಡುದುದರಿಂದ, ಸಾಧನೆ ಮಾಡದವರ ವಿಷಯದಲ್ಲಿ ಭಗವಂತನು ಪಕ್ಷಪಾತಿಯೆಂದೂ, ಸಾಧನೆ ಮಾಡಿದವರ ವಿಷಯದಲ್ಲಿ ವಿಶೇಷವಾದ ಯಾವ ಕೃಪೆಯೂ ತೋರದುದರಿಂದ ಕರುಣಾಹೀನ 'ನಿರ್ಘೃಣ' ಎಂಬ ದೋಷಪೂರಿತವಾದ ಹೆಸರೂ ಬರುತ್ತದೆ. ಆದುದರಿಂದ, ಭಗವಂತನು ಎಲ್ಲರಿಗೂ ಏಕಕಾಲದಲ್ಲಿ ಮೋಕ್ಷವನ್ನನುಗ್ರಹಿಸಲು ಸಾಧ್ಯವಿಲ್ಲ.

ಪ್ರತಿಯೊಬ್ಬ ಚೇತನನಿಗೂ ಅವನವನ ಅನಾದಿಯಾದ ಕರ್ಮದಿಂದ ಈ ಸಂಸಾರವು ಪ್ರಾಪ್ತವಾಗಿ, ನಿರಂತರವಾದ ಜನ್ಮ ಮರಣ ಚಕ್ರದಲ್ಲಿ ಸಿಲುಕಿಕೊಳ್ಳುವಂತಾಗಿದೆ. ಭಗವಂತನು ಚೇತನನ, ಪೂರ್ವಾರ್ಜಿತವಾದ ಪುಣ್ಯಪಾಪರೂಪವಾದ ಕರ್ಮಫಲವನ್ನನುಭವಿಸಲು ಅನುಗುಣವಾದ ಶರೀರೇಂದ್ರಿಯಗಳಿಂದ ಕೂಡಿದ ಜನ್ಮವನ್ನು ಕೊಡುತ್ತಾನೆ. ಈ ಜನ್ಮದಲ್ಲಿ ಚೇತನನು ತನ್ನ ಪೂರ್ವಾರ್ಜಿತವಾದ ಕರ್ಮಫಲವನ್ನನುಭವಿಸುವುದರೊಡನೆ, ಮತ್ತೆ ಬಂಧಕ್ಕೊಳಗುಮಾಡುವ ಕರ್ಮವನ್ನೆಸಗದೆ, ಕರ್ಮಬಂಧದಿಂದ ಬಿಡುಗಡೆಹೊಂದಿ ಭಗವಂತನನ್ನು ಸೇರಿ, ನಿತ್ಯವಿಭೂತಿ ಅಥವಾ ಶ್ರೀವೈಕುಂಠ ಲೋಕದಲ್ಲಿ ಪರಿಪೂರ್ಣಾನಂದವನ್ನು ಹೊಂದಲು ಮಾಡಲೇಬೇಕಾದ ಉಪಾಯಗಳನ್ನು ಚೇತನರಿಗೆ ತಿಳಿಸಬೇಕೆಂಬ ಹೆಬ್ಬಯಕೆಯಿಂದ, ಪರಮಾತ್ಮನು ತನ್ನನ್ನು ಪಡೆಯಲು ಮಾಡಬೇಕಾದ ಉಪಾಯಾನುಷ್ಠಾನಗಳನ್ನು ತೋರುವ ತನ್ನ ನಿಶ್ವಾಸರೂಪವಾದ ವೇದಗಳನ್ನು, ತನ್ನನ್ನು ಸೇರಬೇಕೆಂದು ಅನೇಕ ವರ್ಷಗಳಕಾಲ ತಪಸ್ಸನ್ನಾಚರಿಸಿ ಹಾತೊರೆಯುತ್ತಿರುವ ಚೇತನರಾದ ಮಹರ್ಷಿಗಳಿಗೆ, ಅವರ ಸಮಾಧಿಸ್ಥಿತಿಯಲ್ಲಿ ಶಬ್ದಸ್ವರೂಪದಲ್ಲಿ ಸಾಕ್ಷಾತ್ಕರಿಸುವಂತೆ ಮಾಡುತ್ತಾನೆ. ಆ ವೇದಗಳಿಂದ ಪರಮಾತ್ಮನ ಮತ್ತು ಜೀವಾತ್ಮನ ಸ್ವರೂಪ, ಸ್ವಭಾವ, ಸಂಬಂಧ ಗುಣಗಳನ್ನರಿತ ಆ ಮಂತ್ರದ್ರಷ್ಟಾರರಾದ ಋಷಿಗಳು, ವೇದೋಕ್ತವಾದ ಉಪಾಯಗಳನ್ನು ತಾವು ಅನುಷ್ಠಿಸಿ ಪರಮಾತ್ಮನನ್ನು ಸೇರಿದುದೇ ಅಲ್ಲದೆ, ತಾವು ಸಾಕ್ಷಾತ್ಕರಿಸಿದ ಮಂತ್ರಗಳನ್ನೂ ತದರ್ಥಗಳನ್ನೂ, ಎಲ್ಲ ಚೇತನವರ್ಗವೂ ಉದ್ಧರಿಸಬೇಕೆಂಬ ಹೆಬ್ಬಯಕೆಯಿಂದ, ತಮ್ಮ ಶಿಷ್ಯ ಪ್ರಶಿಷ್ಯ ಪರಂಪರೆಯಲ್ಲಿ ಎಲ್ಲರಿಗೂ ತಲುಪುವಂತೆ ಮಾಡಿದ್ದಾರೆ. ಈ ರೀತಿ

ಪರಮಾತ್ಮನು ಚೇತನೋದ್ಧಾರದ ಸಲುವಾಗಿ ಮಾಡಿರುವ ಉಪದೇಶಾತ್ಮಕವಾದ ವೇದಮಂತ್ರಗಳಿಗೆ ಕೆಲವು ರಜೋಗುಣ ತಮೋಗುಣ ಭೂಯಿಷ್ಠರಾದ ಚೇತನರು ಅಪಾರ್ಥಗಳನ್ನು ಮಾಡಿ ಚೇತನರನ್ನು ದುಷ್ಟಹಾದಿಗೆ ಎಳೆಯುತ್ತಿರುವಲ್ಲಿ, ಪರಮಾತ್ಮನು ತಾನೇ ನೇರವಾಗಿ ಅವತರಿಸಿ ವೇದಪ್ರತಿಪಾದ್ಯವಾದ ಧರ್ಮವನ್ನು ಸ್ಥಾಪನೆಮಾಡುತ್ತಾನೆ. ಮತ್ತೆ, ಕೆಲ ಸನ್ನಿವೇಶಗಳಲ್ಲಿ ನಿತ್ಯವಿಭೂತಿಯಲ್ಲಿ ತನಗೆ ಕೈಂಕರ್ಯವೆಸಗುತ್ತಿರುವ, ಆದಿಶೇಷ, ಗರುಡ, ವಿಶ್ವಕ್ಸೇನ, ಕೌಸ್ತುಭವೇ ಮೊದಲಾದ ಆಭರಣಗಳ ರೂಪದಲ್ಲಿರುವ, ಹಾಗೆಯೇ ಶಂಖ, ಚಕ್ರ, ಗದಾದಿ ಆಯುಧಗಳ ರೂಪದಲ್ಲಿರುವ ನಿತ್ಯಾತ್ಮರನ್ನೂ, ಈ ಲೀಲಾವಿಭೂತಿಯಲ್ಲಿ ಅವತರಿಸುವಂತೆ ಸಂಕಲ್ಪಿಸಿ, ಅವರ ಮುಖಾಂತರ ವೇದಮಂತ್ರಗಳ ಸಾರವಾದ, ತನ್ನನ್ನು ಸೇರಲು ಅನುಷ್ಠಿಸಬೇಕಾದ ಉಪಾಯಗಳನ್ನು ಪ್ರಕಾಶಪಡಿಸುವಂತಹ ಸ್ಮೃತಿ ಇತಿಹಾಸ ಪುರಾಣಾದಿ ಶಾಸ್ತ್ರಗ್ರಂಥಗಳ ರಚನೆ ಮಾಡಿಸಿ, ಧರ್ಮಸ್ಥಾಪನೆಯನ್ನು ಮಾಡಿ ಚೇತನೋದ್ಧಾರವನ್ನು ಮಾಡುತ್ತಾನೆ. ಹೀಗೆ ಅವತರಿಸಿದ ನಿತ್ಯಾತ್ಮರೇ ಭಗವದ್ರಾಮಾನುಜರು, ೧೨ ಜನ ಆಳ್ವಾರುಗಳು, ಶ್ರೀಮದ್ವೇದಾಂತದೇಶಿಕರೇ ಮೊದಲಾದ ಆಚಾರ್ಯರುಗಳು.

ಕರ್ಮಬಂಧವನ್ನು ನೀಗಿ ಪರಮಾತ್ಮನನ್ನು ಸೇರಲು, ಶ್ರುತಿ ಸ್ಮೃತಿ ಇತಿಹಾಸ ಪುರಾಣಗಳಲ್ಲಿ ಉಕ್ತವಾಗಿರುವ ಉಪಾಯಾನುಷ್ಠಾನವು ಎರಡು ವಿಧವಾಗಿರುತ್ತದೆ. ಮೊದಲನೆಯದು, ಕರ್ಮಯೋಗ ಜ್ಞಾನಯೋಗ ಸಹಕೃತವಾದ 'ಭಕ್ತಿಯೋಗ', ಎರಡನೆಯದು 'ಶರಣಾಗತಿ', ಪ್ರಪತ್ತಿ ಅಥವಾ ಭರನ್ಯಾಸ.

ಷಡಂಗಸಹಿತವಾಗಿ ವೇದಾಧ್ಯಯನವನ್ನು ಮಾಡಿ, ಅದರಲ್ಲಿ ಪ್ರತಿಪಾದ್ಯವಾದ ನಿತ್ಯನೈಮಿತ್ತಿಕ ಕರ್ಮಗಳನ್ನು, ಜೀವಪರಮಾತ್ಮ ಸಂಬಂಧವನ್ನರಿತು, ಪರಮಾತ್ಮನ ಆರಾಧನಾರೂಪದಿಂದ ಅನುಷ್ಠಿಸುತ್ತಿರಬೇಕು. ಇದೇ ಕರ್ಮಯೋಗ. ಹೀಗೆ ಅನೇಕ ಕಾಲ ಕಳೆಯಲಾಗಿ ಇವನ ಕರ್ಮಗಳು ಪಕ್ವವಾಗಿ ಇವನು ಜ್ಞಾನಯೋಗಕ್ಕೆ ಅಧಿಕಾರಿಯಾಗುತ್ತಾನೆ.[1] ಆಗ,

1. ಕಷಾಯೇ ಕರ್ಮಭಿಃ ಪಕ್ವೇ ತತೋಜ್ಞಾನಂ ಪ್ರವರ್ತತೇ |

ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಮೂವತ್ತೆರಡು ವಿಧವಾದ ಬ್ರಹ್ಮ ವಿದ್ಯೆಗಳಲ್ಲಿ ತನ್ನ ಇಷ್ಟಬಂದ ಯಾವುದಾದರೊಂದು ಬ್ರಹ್ಮವಿದ್ಯೆಯನ್ನು ಉಪಾಸನೆ ಮಾಡಬೇಕು. ಹೀಗಿರಲು ಕೆಲಕಾಲದಮೇಲೆ ಇವನಿಗೆ ಮೊದಲು ಜೀವಾತ್ಮ ಸಾಕ್ಷಾತ್ಕಾರವಾಗುತ್ತದೆ. ಆಗ ಇವನು ಇಷ್ಟರಲ್ಲೇ ನಿಲ್ಲದೆ, ಆ ಜೀವಾತ್ಮನಿಗೂ ಅಂತರ್ಯಾಮಿಯಾದ ಪರಮಾತ್ಮನನ್ನು ಸಾಕ್ಷಾತ್ಕ-ರಿಸಲು ಮತ್ತೆ ಇವನ ಉಪಾಸನೆಯನ್ನು ಮುಂದುವರಿಸಬೇಕು. ಆಗ ಪರಮಾತ್ಮನನ್ನು ಕಂಡೇತೀರಬೇಕೆಂಬ ಅಭಿನಿವೇಷದಿಂದ ತೈಲಧಾರೆಯಂತೆ ಅವಿಚ್ಛಿನ್ನವಾದ ಸ್ಮೃತಿಸಂತಾನ ರೂಪವಾಗಿ ಪರಮಾತ್ಮನನ್ನು ಧ್ಯಾನಿಸುತ್ತಾನೆ. –ಇದೇ 'ಭಕ್ತಿಯೋಗ'.[2] ಇದರಲ್ಲಿ ತೊಡಗಿದ ಸಾಧಕನಿಗೆ ಕೆಲಕಾಲದಮೇಲೆ ಮೊದಲು ಸ್ವತಃ ಪ್ರಕಾಶವುಳ್ಳ ರತ್ನವೊಂದನ್ನು ತೆಳ್ಳಗಿರುವ ಬಟ್ಟೆಯಲ್ಲಿ ಸುತ್ತಿದ್ದಾಗ, ಅದು ಸ್ಪಷ್ಟವಾಗಿ ತಿಳಿಯದೆ ಮೊಬ್ಬು ಮೊಬ್ಬಾಗಿ ಕಾಣಿಸಿಕೊಳ್ಳುವಂತೆ, ಜೀವಾತ್ಮನ ಅಂತರ್ಯಾಮಿ-ಯಾದ ಪರಮಾತ್ಮನು ಮಸುಕು ಮಸುಕಾಗಿ ಕಾಣುತ್ತಾನೆ. ಆಗ ಸಾಧಕನಿಗೆ ಆ ಪರಮಾತ್ಮನನ್ನು ಸ್ಫುಟವಾಗಿ ಸಾಕ್ಷಾತ್ಕರಿಸಬೇಕೆಂಬ ಹಂಬಲ ಇನ್ನೂ ಅಧಿಕವಾಗಿ, ಉಪಾಸನೆಯನ್ನು ಮುಂದುವರಿಸುತ್ತಾನೆ. ಇದನ್ನೇ 'ಪರಭಕ್ತಿ'[3] ಎಂದು ಕರೆಯುತ್ತಾರೆ. ಮತ್ತೇ ಹೀಗೆ ಉಪಾಸನೆ ಮಾಡುತ್ತಿರಲು ಕೆಲಕಾಲದ ಮೇಲೆ ಅಂತರ್ಯಾಮಿಯಾದ ಪರಮಾತ್ಮನು ಸ್ಪಷ್ಟವಾಗಿ ಕಾಣುತ್ತಾನೆ. ಆದರೆ ನಿರಂತರವಾಗಿ ಕಾಣಿಸಿಕೊಳ್ಳದೆ, ಒಂದು ಕ್ಷಣ ಕಾಣಿಸಿಕೊಳ್ಳುವುದು ಮತ್ತೆ ಮರೆಯಾಗುವುದು–ಹೀಗೆ ಮಾಡುತ್ತಿರಲು ಅವನನ್ನು ಸ್ಪಷ್ಟವಾಗಿಯೂ ನಿರಂತರವಾಗಿಯೂ ಕಂಡೇಕಾಣಬೇಕೆಂಬ ತೀವ್ರತೆ ಅಧಿಕವಾಗಿ ಮತ್ತೆ ಉಪಾಸನೆಯನ್ನು ಮುಂದುವರಿಸುತ್ತಾನೆ. –ಈ ಹಂತವನ್ನೇ "ಪರಜ್ಞಾನ"[4]–ಎನ್ನುತ್ತಾರೆ. ಉಪಾಸನೆ ಮುಂದುವರಿಯಲು

---

2. ತೈಲಧಾರಾವತ್ ಅವಿಚ್ಛಿನ್ನಸ್ಮೃತಿ ಸಂತಾನರೂಪಾಭಕ್ತಿಃ ।

3. ಪರಭಕ್ತಿಃ ಪುರಾದೃಷ್ಟ ಪ್ರತ್ಯಕ್ಷಾಭಿನಿವೇಶನಮ್ ।

4. ಪರಜ್ಞಾನಂತು ತತ್ರೈವ ಸಾಕ್ಷಾತ್ಕಾರ ಪರಿಸ್ಫುಟಃ ॥

ಕೆಲಕಾಲದ ಮೇಲೆ ಪರಮಾತ್ಮನು ಸ್ಫುಟವಾಗಿಯೂ ನಿರಂತರವಾಗಿಯೂ ಕಾಣಿಸಿಕೊಂಡಾಗ, ಅವನ ದಿವ್ಯಮಂಗಳ ವಿಗ್ರಹವನ್ನು ಸಾಕ್ಷಾತ್ಕರಿಸಿದ ಸಾಧಕನು, ಮತ್ತೆ ಆ ಪರಮಾತ್ಮನ ರೂಪ ಎಲ್ಲಿ ಮರೆಯಾಗುತ್ತದೆಯೋ ಎಂಬ ಭಯದಿಂದ, ಅವನನ್ನು ಬಿಟ್ಟು ಒಂದು ಕ್ಷಣಕಾಲವೂ ಇರಲಾರದ ಸ್ಥಿತಿಯನ್ನು ಪಡೆದು, ಭಗವಂತನ ಅಡಿದಾವರೆಯಲ್ಲಿ ವಿಶೇಷವಾಗಿ ಶರಣಾಗತಿ ಮಾಡಿ, ತನ್ನನ್ನು ಒಂದು ಕ್ಷಣವೂ ಬಿಡದಂತೆ, ತನಗೆ ನಿರಂತರವಾಗಿ ಪರಮಾತ್ಮನ ದಿವ್ಯ ಮಂಗಳದರ್ಶನವಿತ್ತು ರಕ್ಷಿಸಬೇಕೆಂದು ಪ್ರಾರ್ಥಿಸುತ್ತಾನೆ. ಇದನ್ನೇ 'ಪರಮ ಭಕ್ತಿ'[5] – ಎನ್ನುತ್ತಾರೆ. ಇಷ್ಟರಲ್ಲಿ ಸಾಧಕನ ಕರ್ಮವೆಲ್ಲವೂ ಅವನ ತಪಃ ಪ್ರಭಾವದಿಂದ ಪರಿಪೂರ್ಣವಾಗಿ ಸವೆದಿರುವುದರಿಂದ ಭಗವಂತನು ಅವನನ್ನು ಆ ಕ್ಷಣದಲ್ಲಿಯೇ ಸಂಸಾರ ಬಂಧದಿಂದ ಮುಕ್ತನನ್ನಾಗಿಸಿ ಶ್ರೀವೈಕುಂಠಲೋಕಕ್ಕೆ ಕರೆದೊಯ್ದು ಅಲ್ಲಿ ನಿರಂತರವಾದ ಬ್ರಹ್ಮಾನಂದವನ್ನನುಗ್ರಹಿಸುತ್ತಾನೆ. ಇದೇ ಕರ್ಮಯೋಗ ಜ್ಞಾನ-ಯೋಗ ಸಹಕೃತವಾದ 'ಭಕ್ತಿಯೋಗ'– ಎಂಬ ಉಪಾಯ.

ಈ ಮೇಲೆ ಹೇಳಿದ ಕರ್ಮಯೋಗಾದಿಗಳಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ –ತ್ರೈವರ್ಣಿಕರು ಮಾತ್ರವೇ ಅಧಿಕಾರಿಗಳು. ಅವರಲ್ಲಿಯೂ ಷಡಂಗಸಹಿತವಾಗಿ ವೇದಾಧ್ಯಯನವನ್ನು ಮಾಡಿದ ಪುರುಷರು ಮಾತ್ರವೇ ಅಧಿಕಾರಿಗಳು. ಆದುದರಿಂದ ಎಲ್ಲ ಚೇತನರನ್ನೂ ಉದ್ಧರಿಸಬೇಕೆಂಬ ಹೆಬ್ಬಯಕೆಯುಳ್ಳ ಪರಮಕಾರುಣಿಕನಾದ ಪರಮಾತ್ಮನು, ಜಾತಿ, ವರ್ಣ, ಲಿಂಗ, ವಯಸ್ಸು, ಕಾಲ –ಮೊದಲಾದ ಯಾವ ಭೇದವೂ ಇಲ್ಲದೇ, ಸರ್ವ ಚೇತನರೂ ಅನುಷ್ಠಿಸಲು ಯೋಗ್ಯವಾದ, ಅತಿ ಸುಲಭವಾಗಿ ಕರ್ಮಬಂಧ-ವನ್ನು ನೀಗಿ ಮತ್ತೆ ಜನ್ಮಮರಣಚಕ್ರಕ್ಕೆ ಸಿಲುಕಿಕೊಳ್ಳದಂತೆ, ಪರಮಾತ್ಮನನ್ನು ಸೇರಿ, ಶ್ರೀವೈಕುಂಠಲೋಕದಲ್ಲಿ ನಿರಂತರವಾಗಿ ಪರಿಪೂರ್ಣ-ಬ್ರಹ್ಮಾನಂದವನ್ನು ಅನುಭವಿಸಲು, ಮತ್ತೊಂದು ಉಪಾಯವನ್ನೂ ಹೇಳಿದ್ದಾನೆ. ಇದೇ 'ಶರಣಾಗತಿ' – 'ಪ್ರಪತ್ತಿ', 'ಭರನ್ಯಾಸ', 'ಭರಸಮ-

---

5. ಪುನರ್ವಿಶ್ಲೇಷ ಭೀರುತ್ವಂ ಪರಮಾಭಕ್ತಿರುಚ್ಯತೇ ।

ರ್ಪಣ' – ಅಥವಾ 'ನ್ಯಾಸ' –ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟಿರುವ ಉಪಾಯ.

ಕರ್ಮಯೋಗಾದಿಗಳಿಗೆ ಅನಧಿಕಾರಿಯಾದ ಚೇತನನು, ತಾನು ಯೋಗಾದಿಗಳಿಗೆ ಅನಧಿಕಾರಿಯೆಂದೂ, ತನ್ನನ್ನು ತಾನು ರಕ್ಷಿಸಿಕೊಳ್ಳಲು ಅಸಮರ್ಥನೆಂದೂ, ತನ್ನನ್ನು ರಕ್ಷಿಸುವ ಸಾಮರ್ಥ್ಯ ಸರ್ವಸ್ವಾಮಿಯಾದ ಪರಮಾತ್ಮನೊಬ್ಬನಿಗೇ ಇರುವುದೆಂದೂ ಮನಗಂಡು, ತನಗಿನ್ನಾರೂ ರಕ್ಷಕರಿಲ್ಲ-ವೆಂದೂ, ಪರಮಾತ್ಮನೇ ರಕ್ಷಿಸಬೇಕೆಂದೂ, ತಾನು ಕರ್ಮಯೋಗಾದಿಗಳನ್ನು ಮಾಡಲು ಅಶಕ್ತನೆಂದೂ ಪರಮಾತ್ಮನಲ್ಲಿ ತನ್ನ ಅಶಕ್ತತೆಯನ್ನು ಅರುಹಿ, ಭಗವಂತನು ಏನಾದರೂ ಮಾಡಿ, ತನಗೆ ಜನ್ಮ ಮರಣ ಚಕ್ರದಿಂದ ಕೂಡಿದ ಕರ್ಮಬಂಧವನ್ನು ತಪ್ಪಿಸಿ, ತನ್ನನ್ನು ಶ್ರೀವೈಕುಂಠಲೋಕಕ್ಕೆ ಕರೆದೊಯ್ದು, ತನ್ನ ಪರಿಪೂರ್ಣ ಬ್ರಹ್ಮಾನಂದವನ್ನು ಅನುಗ್ರಹಿಸಬೇಕೆಂದು ಕೇಳಿಕೊಳ್ಳು-ವುದೇ –'ಶರಣಾಗತಿ' ಮೊದಲಾದ ಶಬ್ದಗಳಿಂದ ಹೇಳಲ್ಪಟ್ಟ ಸರ್ವ ಸುಲಭ-ವಾದ ಉಪಾಯ.

ಪರಮಾತ್ಮನು ಪರಮಕಾರುಣಿಕನಾದರೂ, ಚೇತನ (ಪುರುಷ) ರಿಂದ ಪ್ರಾರ್ಥಿಸಿ ಪಡೆಯಲ್ಪಡಬೇಕಾದ ಪುರುಷಾರ್ಥವಾದ ಮೋಕ್ಷವನ್ನು, ಅವನಲ್ಲಿ ಯಾಚಿಸದವರಿಗೆ ಅನುಗ್ರಹಿಸಿಕೊಡುವುದಿಲ್ಲ.

**"ಸರ್ವಜ್ಞೋಽಪಿ ಹಿ ವಿಶ್ವೇಶಃ ಸದಾಕಾರುಣಿಕೋಽಪಿಸನ್ ।**
**ಸಂಸಾರ ತಂತ್ರವಾಹಿತ್ವಾತ್ ರಕ್ಷಾಽಪೇಕ್ಷಾಂ ಪ್ರತೀಕ್ಷತೇ" ॥**

[ಈ ಶರಣಾಗತಿಯ ವಿಷಯವಾಗಿ ಅನುಷ್ಠಾನಾದಿ ಕ್ರಮಗಳನ್ನು ಇನ್ನೂ ವಿವರವಾಗಿ ತಿಳಿಯಬೇಕೆಂಬ ಆಶಯವುಳ್ಳವರು, ದಾಸನು ಬರೆದು ಅಚ್ಚುಹಾಕಿರುವ ವಾತ್ಸ್ಯವರದಾಚಾರ್ಯರ 'ಪರತ್ವಾದಿ ಪಂಚಕಸ್ತುತಿಃ ಮತ್ತು ಪರಮಾರ್ಥಸ್ತುತಿಃ' –ಪುಸ್ತಕದ ಉಪೋದ್ಘಾತ ಭಾಗವನ್ನು ಪರಾಂಬರಿಸಿರಿ.]

ಈ ಶರಣಾಗತಿಯ ವಿಷಯವು 'ಮುಮುಕ್ಷುರ್ವೈ ಶರಣಮಹಂ

ಪ್ರಪದ್ಯೇ' –ಶ್ವೇತಾಶ್ವತರ, 'ಓಂ ಇತ್ಯಾತ್ಮಾನಂಯುಂಜೀತ' –ತೈತ್ತಿರೀಯ, 'ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯ ಮುಚ್ಯತೇ । ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್' ।–ಕಠ, ಮೊದಲಾದ ಉಪನಿಷದ್ವಾಕ್ಯಗಳಲ್ಲಿಯೂ, ಶ್ರೀಮದ್ರಾಮಾಯಣದಲ್ಲಿನ–'ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ' । ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ॥' ಮತ್ತು ಭಗವದ್ಗೀತೆಯ "ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ" –ಮೊದಲಾದ ಭಗವದ್ವಾಣಿಗಳಿಂದಲೂ ಸರ್ವವೇದ್ಯವಾಗಿ ತಿಳಿದುಬಂದಿದೆ.

ತಂದೆ ಮಗುವಿಗೆ ಎಷ್ಟೇ ಕೊಟ್ಟಿದ್ದರೂ, ತಾಯಿಯಾದವಳು ತನ್ನ ಕೈಯಿಂದಲೂ ತನ್ನ ಮಗುವಿಗೆ –ತಾನು ಏನಾದರೂ ಕೊಟ್ಟೇಕೊಡಬೇಕೆಂಬ ಹೆಬ್ಬಯಕೆ ಇರುತ್ತದೆ. ಮತ್ತು ಎಷ್ಟುಕೊಟ್ಟರೂ ತೃಪ್ತಿಯಿಲ್ಲದೆ ಮಕ್ಕಳಿಗೆ ಇನ್ನೂ ಕೊಡಬೇಕೆಂಬ ಆಸೆಯಿರುತ್ತದೆ. ಇದು ಕೇವಲ ಇಹಲೋಕದಲ್ಲಿನ ತಾಯಂದಿರ ಆಸೆ ಮಾತ್ರವಲ್ಲ. ಜಗತ್ತಿಗೇ ತಾಯಿಯರಾದ ಶ್ರೀದೇವಿ, ಭೂದೇವಿ, ನೀಳಾದೇವಿಯರಲ್ಲಿಯೂ ಇರುವ ಆಸೆಯಾಗಿರುತ್ತದೆ. ಈ ನಮ್ಮ ತಾಯಿಯವರ ಸ್ವಭಾವವನ್ನು ಪರಶರಭಟ್ಟರು ಈ ರೀತಿ ಅನುಭವಿಸಿದ್ದಾರೆ. ಒಮ್ಮೆ ಭಟ್ಟರು ಶ್ರೀರಂಗದಲ್ಲಿ ರಂಗನಾಥನನ್ನು ನಮಸ್ಕರಿಸಿ, ಅಮ್ಮನವರ ದರ್ಶನಕ್ಕಾಗಿ ರಂಗನಾಯಕಿಯ ಗುಡಿಯಲ್ಲಿ ಹೋಗಿ ನಿಂತು, ಆಕೆಯ ದರ್ಶನ ಮಾಡುತ್ತಿರುವಲ್ಲಿ, ಪ್ರತಿನಿತ್ಯಕ್ಕಿಂತಲೂ ಅಂದು ತಾಯಿ ಸ್ವಲ್ಪ ತಲೆಬಾಗಿ ಕುಳಿತಂತೆ ಭಟ್ಟರಿಗೆ ದರ್ಶನವಾಯಿತು. ಆಗ ಅವರು ಈ ಕೆಳಕಂಡಂತೆ ತಾಯಿಯನ್ನು ಸ್ತುತಿಸಿದ್ದಾರೆ :

**"ಐಶ್ವರ್ಯಮಕ್ಷರಗತಿಂ ಪರಮಂ ಪದಂವಾ ।**
**ಕಸ್ಮೈಚಿದಂಜಲಿಭರಂ ವಹತೇ ವಿತೀರ್ಯ ।**
**ಅಸ್ಮೈನ ಕಿಂಚಿದುಚಿತಂ ಕೃತ ಮಿತ್ಯಥಾಂಬ ।**
**ತ್ವಂ ಲಜ್ಜಸೇ ಕಥಯ ಕೋಽಯಮುದಾರ ಭಾವಃ॥"**

**–ಶ್ರೀಗುಣರತ್ನಕೋಶ ಶ್ಲೋಕ–೫೮.**

"ಎಲ್ಲೆ ! ರಂಗನಾಯಕಿ ತಾಯಿಯೇ ! ಕೈಗಳನ್ನು ಜೋಡಿಸಿ ಅಂಜಲಿಯನ್ನು ನಿನಗೆ ಮಾಡಿದ ಯಾವನ್ನೊಬ್ಬನಿಗಾದರೂ, ಐಹಿಕಾಮುಷ್ಮಿಕವಾದ ಸರ್ವವಿಧವಾದ ಐಶ್ವರ್ಯವನ್ನೂ, ಕೈವಲ್ಯವನ್ನೂ ಪರಮಪದವನ್ನೇ ಆದರೂ ಪರಿಪೂರ್ಣವಾಗಿ ಅನುಗ್ರಹಿಸಿಕೊಟ್ಟು, ಅವನು ಮಾಡಿದ ಅಂಜಲಿಗೆ ಉಚಿತ-ವಾದ ಉಪಕಾರವನ್ನು ಅವನಿಗೆ ನೀನು ಮಾಡಲಿಲ್ಲವೆಂದು ಲಜ್ಜೆಯಿಂದ ತಲೆ ಬಾಗಿಸಿಕೊಂಡಿದ್ದೀಯೆ. ಇದೆಂತಹ ನಿನ್ನ ಉದಾರ ಭಾವವು !"-ಎಂದು.

ಅಂತೆಯೇ, ಮೇಲೆ ಹೇಳಿದಂತೆ ಪರಮಾತ್ಮನು ತನ್ನ ರಾಮಕೃಷ್ಣಾದ್ಯವತಾರ ಕಾಲದಲ್ಲಿ ಚೇತನೋದ್ಧಾರದ ಸಲುವಾಗಿ ಭಕ್ತಿಪ್ರಪತ್ತಿಗಳ ವಿಷಯ-ಗಳನ್ನು ಕಂಠೋಕ್ತವಾಗಿ ತಿಳಿಸಿದ್ದರೂ, ಜಗನ್ಮಾತೆಯರಾದ ಶ್ರೀಭೂನೀಳಾ ದೇವಿಯರು ಮತ್ತೆ ಇದನ್ನೇ ತಾವೂ ತಮ್ಮ ಮಕ್ಕಳಿಗೆ ತಿಳಿಸಿ ಮಕ್ಕಳನ್ನು ಬಂಧನದಿಂದ ಬಿಡಿಸಿ ಉದ್ಧರಿಸಬೇಕೆಂಬ ಅಭಿಲಾಶೆಯಿಂದ ಕೂಡಿದ್ದಾರೆ.

ಅಮೂ ಅಲ್ಲದೆ ಒಬ್ಬ ತಾಯಿಗೆ ಅನೇಕ ಮಕ್ಕಳಿದ್ದು, ಅವರಲ್ಲಿ ಕೆಲವರು ಒಳ್ಳೆಯ ಸ್ಥಿತಿಯಲ್ಲಿದ್ದು, ಮತ್ತೆ ಕೆಲವರು ನೀಚಸ್ಥಿತಿಯಲ್ಲಿದ್ದರೆ, ಒಳ್ಳೆಯ ಸ್ಥಿತಿಯಲ್ಲಿನ ಮಕ್ಕಳನ್ನು ನೋಡಿ ಹರ್ಷಿಸುವುದಕ್ಕಿಂತಲೂ ಮಿಗಿಲಾಗಿ, ನೀಚಸ್ಥಿತಿಯಲ್ಲಿನ ಮಕ್ಕಳಿನ ವಿಷಯದಲ್ಲಿ ಕಳವಳಗೊಂಡು, ಹೇಗಾದರೂ ಆ ಮಕ್ಕಳನ್ನು ಉದ್ಧರಿಸಿ ಒಳ್ಳೆಯ ಸ್ಥಿತಿಗೆ ತರಬೇಕೆಂಬ ಆಶಯವಿರುತ್ತದೆ. ಅಂತೆಯೇ, ಭಗವಂತನ ನಿತ್ಯವಿಭೂತಿ ಮತ್ತು ಲೀಲಾವಿಭೂತಿಗಳಲ್ಲಿರುವ ಚೇತನರಲ್ಲಿ, ಎಂದೂ ಕರ್ಮದ ಸಂಕೋಲೆಗೆ ಸಿಕ್ಕಿಕೊಳ್ಳದೆ ಸದಾ ನಿತ್ಯವಿಭೂತಿಯಲ್ಲೇ ವಾಸಿಸುತ್ತಿದ್ದು, ಬ್ರಹ್ಮಾನುಭವರೂಪವಾದ ನಿರಂತರವಾದ ಆನಂದಾನುಭವಮಾಡುತ್ತಿರುವ ನಿತ್ಯಾತ್ಮರ ವಿಷಯದಲ್ಲಾ-ಗಲೀ, ಅಥವಾ ಹಿಂದೆ ಕರ್ಮಬಂಧದಿಂದ ನಾನಾತರಹ ಕಷ್ಟಗಳನ್ನು ಅನು-ಭವಿಸಿದ್ದರೂ, ಆದರಿಂದ ಮುಕ್ತರಾದ ಬಳಿಕ ನಿರಂತರವಾಗಿ ಪರಿಪೂರ್ಣ ಬ್ರಹ್ಮಾನಂದವನ್ನು ಅನುಭವಿಸುತ್ತಿರುವ – ಮುಕ್ತಾತ್ಮರ ವಿಷಯದಲ್ಲಾಗಲೀ, ಜಗನ್ಮಾತೆಯರಾದ ಶ್ರೀಭೂನೀಳಾದೇವಿಯರಿಗೆ ವಿಶೇಷವಾದ ಕಳವಳವಿಲ್ಲ. ಇನ್ನೂ, ಈಗಲೂ ಕರ್ಮಬಂಧದಿಂದ ನಿರಂತರವಾಗಿ, ನಾನಾತರಹದ

ಕಷ್ಟಗಳಲ್ಲಿ ಸಿಲುಕಿಕೊಂಡು ದುಃಖವನ್ನನುಭವಿಸುತ್ತಿರುವ ಬದ್ಧ ಚೇತನ-ರಲ್ಲಿಯೂ ಭಕ್ತಿಯೋಗಕ್ಕೆ ಅರ್ಹರಾಗಿ, ಅವರಲ್ಲಿ ತೊಡಗಿ ಪರಮಾತ್ಮೋ-ಪಾಸನೆ ಮಾಡುತ್ತಿರುವ ಭಕ್ತಿಯೋಗನಿಷ್ಠರೂ ಶಕ್ತರಾದುದರಿಂದ, ಇಂದು ಕಷ್ಟದಲ್ಲಿದ್ದರೂ ಮುಂದೆ ಹೇಗೆಯೋ ಶ್ರಮಪಟ್ಟು ತಮ್ಮ ಸಾಧನೆಯಿಂದ ಕರ್ಮದ ಸಂಕೋಲೆಯನ್ನು ನೀಗಿ, ಪರಮಾತ್ಮನನ್ನು ಅವರು ಸೇರುವುದ-ರಿಂದ, ಅವರ ವಿಷಯದಲ್ಲಿಯೂ ನಮ್ಮ ಜಗನ್ಮಾತೆಯರಿಗೆ ಅಷ್ಟಾಗಿ ಕಳವಳ ವಿಲ್ಲ. ಆದರೆ, ಎಂದೆಂದೂ ನಿರಂತರವಾದ ಕರ್ಮಬಂಧದಲ್ಲಿ ಬಿದ್ದು, ಭಕ್ತಿಯೋಗಾದಿಗಳಿಗೆ ಅನರ್ಹರಾಗಿ ಪರಮಾತ್ಮನನ್ನು ಸೇರಲು ಬೇರೆ (ಉಪಾಯ) ಹಾದಿಯನ್ನೇ ಅರಿಯದೆ, ನಿರಂತರವಾಗಿ ತೊಳಲುತ್ತಿರುವ, ಅಶಕ್ತರೂ, ಅಕಿಂಚನರೂ ಆದ ಬದ್ಧ ಚೇತನರ ವಿಷಯದಲ್ಲಿ ನಮ್ಮ ಜಗನ್ಮಾತೆಯರು ವಿಶೇಷವಾಗಿ ಕಳವಳಗೊಂಡು ಹೇಗಾದರೂ ಮಾಡಿ ಈ ಚೇತನರನ್ನು ಉದ್ಧರಿಸಿಯೇ ತೀರಬೇಕೆಂಬ ಹೆಬ್ಬಯಕೆಯಿಂದ ಕೂಡಿದ್ದಾರೆ. ಈ ವಿಷಯವನ್ನು ಒಂದು ವೇಳೆ ಪರಮಾತ್ಮನಿಗೆ ತಿಳಿಸಿದರೆ, ದಂಡಧರನೂ, ಸಂಸಾರತಂತ್ರವಾಹಿಯೂ ಆದ ಪರಮಾತ್ಮನು, ಯಾವಸಾಧನೆಯನ್ನೂ ಮಾಡದ ಆ ಜೀವಾತ್ಮರಿಗೆ ಮೋಕ್ಷವನ್ನು ಅನುಗ್ರಹಿಸಲು ಸಾಧ್ಯವಿಲ್ಲವೆನ್ನುತ್ತಾನೋ-ಎಂದು ಭಾವಿಸಿ, ನಮ್ಮ ತಾಯಿಯರು ಮೊದಲು ತಮ್ಮ ಮಕ್ಕಳಿಗೋಸ್ಕರ ಪರಮಾತ್ಮನನ್ನು ತಾವು ಮಾಡುವ ಪರಿಚರ್ಯಾದಿಗಳಿಂದ ಒಲಿಸಿಕೊಂಡು, ಅವನು ಏಕಾಂತದಲ್ಲಿ ಶಾಂತಚಿತ್ತನಾಗಿರಲು, ಅವನಲ್ಲಿ ತಮ್ಮ ಬಯಕೆ-ಯನ್ನು ಅರುಹಿ, ಏನಾದರೂ ಒಂದು ಲಘೂಪಾಯವನ್ನು (ತನ್ನ ಮಕ್ಕಳನ್ನು ಉದ್ಧರಿಸಲು) ಕೇಳಿ ತಿಳಿದುಕೊಂಡು, ಅದನ್ನು ತನ್ನ ಮಕ್ಕಳಿಗೆ ತಿಳಿಸಿ, ಅವರನ್ನು ಉದ್ಧರಿಸುತ್ತಾರೆ.

ಹಿಂದೊಮ್ಮೆ ಹಿರಣ್ಯಾಕ್ಷನು ಭೂಮಿಯನ್ನು ಅಪಹರಿಸಿಕೊಂಡು ಹೋಗಿ ಸಮುದ್ರದ ಅಡಿಯಲ್ಲಿ ಅವಿತಿಟ್ಟಾಗ, ವಿಷ್ಣುವು ವರಾಹರೂಪವನ್ನು ಧರಿಸಿ, ಹಿರಣ್ಯಾಕ್ಷನನ್ನು ಕೊಂದು ಭೂಮಿಯನ್ನು ಉದ್ಧರಿಸಿ, ಸಮುದ್ರದ ಅಡಿಯಿಂದ ಭೂಮಿಯನ್ನು ತನ್ನ ಕೋರೆ ಹಲ್ಲಿನಮೇಲೆ ಇಟ್ಟುಕೊಂಡು ಮೇಲೆ ತಂದನು. ನಿತ್ಯವಿಭೂತಿಯಾದ ಶ್ರೀವೈಕುಂಠದಲ್ಲಿ ಪರಮಾತ್ಮನ ಮಹಿಷಿಯರ

ಲ್ಲೊಬ್ಬಳಾದ ಭೂದೇವಿಯೇ, ಲೀಲಾವಿಭೂತಿಯಲ್ಲಿ ಭೂಮಿಯಾಗಿ ಅವತರಿಸಿದ್ದಾಳೆ. ವರಹಾರೂಪಿಯಾದ ಪರಮಾತ್ಮನು ಭೂಮಿಯನ್ನುದ್ಧರಿಸಿ ಮೇಲೆ ತಂದ ಸನ್ನಿವೇಷದಲ್ಲಿ – ಪರಮಾತ್ಮ ಮತ್ತು ಭೂದೇವಿಯರಿಬ್ಬರೇ ಏಕಾಂತದಲ್ಲಿದ್ದಾಗ, ಭೂದೇವಿಯು ಮುಂದೆ ತನ್ನಲ್ಲಿ ಜನ್ಮವೆತ್ತುವ, ವಿಶೇಷ-ವಾಗಿ ಭಕ್ತಿಯೋಗಾದಿಗಳಿಗೆ ಅನರ್ಹರಾಗಿ ಅಕಿಂಚನರೂ, ಅಶಕ್ತರೂ, ಅನನ್ಯಗತಿಕರೂ ಆದ ಚೇತನರನ್ನು ಉದ್ಧರಿಸುವ ಸಲುವಾಗಿ ವರಾಹಸ್ವಾಮಿ-ಯಲ್ಲಿ ಈ ಕೆಳಕಂಡಂತೆ ಪ್ರಾರ್ಥನೆ ಮಾಡುತ್ತಾಳೆ :

"ಅಹಂ ಶಿಷ್ಯಾ ಚ ದಾಸೀ ಚ ಭಕ್ತಾ ಚ ತ್ವಯಿ ಮಾಧವ ।
ಮತ್ಕೃತೇ ಸರ್ವಭೂತಾನಾಂ ಲಘೂಪಾಯಂ ವದ ಪ್ರಭೋ ॥"

'ಎಲೈ ! ಶ್ರಿಯಃಪತಿಯೇ ! ನಾನು ನಿನ್ನಲ್ಲಿ ಶಿಷ್ಯಳೂ, ದಾಸಿಯೂ, ಭಕ್ತೆಯೂ ಆಗಿದ್ದೇನೆ. ಎಲೈ ಪ್ರಭುವೇ ! ನನಗೋಸ್ಕರ (ನನ್ನಲ್ಲಿ ಜನ್ಮ ತಾಳುವ) ಎಲ್ಲ ಚೇತನರಿಗೂ (ನಿನ್ನನ್ನು ಸೇರಲು) ಸುಲಭವಾದ ಉಪಾಯ ವೊಂದನ್ನು ಹೇಳು' –ಎಂದು. ಅದಕ್ಕೆ ಭೂಮಿತಾಯಿಯ ಮೇಲಿನ ಪ್ರೇಮ ಅಭಿಮಾನದಿಂದ ಕೂಡಿದ ವರಾಹಸ್ವಾಮಿಯು ಈ ರೀತಿ ಹೇಳಿದನು :

"ಸ್ಥಿತೇ ಮನಸಿ ಸುಸ್ವಸ್ಥೇ ಶರೀರೇ ಸತಿ ಯೋ ನರಃ
ಧಾತುಸಾಮ್ಯೇಸ್ಥಿತೇ ಸ್ಮರ್ತಾ ವಿಶ್ವರೂಪಂ ಚ ಮಾಮಜಮ್ ।
ತಮೇವಂ ಮ್ರಿಯಮಾಣಂ ತು ಕಾಷ್ಠಪಾಷಾಣಸನ್ನಿಭಮ್
ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂಗತಿಮ್ ॥"

"ಯಾವ ಒಬ್ಬ ಮನುಷ್ಯನು, ತನ್ನ ಶರೀರವು ಸ್ವಾಸ್ಥ್ಯದಲ್ಲಿದ್ದು, ಸಪ್ತಧಾತುಗಳೂ ಸಮಸ್ಥಿತಿಯಲ್ಲಿರುವಲ್ಲಿ, ವಿಶ್ವದಲ್ಲೆಲ್ಲಾ ಅಂತರ್ಯಾಮಿ-ಯಾಗಿ, ಸ್ವತಃ ಸ್ಥಿತಿಯನ್ನು ಹೊಂದಿರುವ, (ಇತರರಂತೆ ಜನ್ಮಾದಿಗಳನ್ನು ಹೊಂದದ) ಸಕಲ ಕಲ್ಯಾಣಗುಣಾಕರನಾದ ನನ್ನನ್ನು ಸ್ಮರಣೆಮಾಡಿಕೊಳ್ಳು-ತ್ತಾನೆಯೋ (ಸ್ಮರಿಸಿಕೊಂಡು ಮೋಕ್ಷಾರ್ಥವಾಗಿ ಶರಣಾಗತಿಯನ್ನು ಅನುಷ್ಠಿ ಸುತ್ತಾನೆಯೋ,) ಆ ನನ್ನ ಭಕ್ತನನ್ನು ಅವನ ಅಂತಿಮದೆಶೆಯಲ್ಲಿ ಮರಣ

ವನ್ನಪ್ಪುವ ಸಮಯದಲ್ಲಿ ಕಟ್ಟಿಗೆ ಕಲ್ಲುಗಳಂತೆ (ಜಡಪ್ರಕೃತಿಯಂತೆ ಏನೂ ಅರಿಯದೆ) ಬಿದ್ದಿದ್ದಾಗ, ಅವನು ನನ್ನನ್ನು ನೆನಪು ಮಾಡಿಕೊಳ್ಳದಿದ್ದರೂ, ಅವನನ್ನು ನಾನಾಗಿ ಸ್ಮರಣೆಮಾಡಿಕೊಂಡು (ಪರಮಾಂಗತಿಂ) ಶ್ರೇಷ್ಠವಾದ ಅರ್ಚಿರಾದಿ ಮಾರ್ಗದಲ್ಲಿ ಕೊಂಡೊಯ್ದು ಶ್ರೀ ವೈಕುಂಠಲೋಕವನ್ನು ಸೇರಿಸುತ್ತೇನೆ".—ಎಂದು ವರಾಹಸ್ವಾಮಿಯು ಭೂಮಿತಾಯಿಗೆ ಉಪದೇಶಿಸಿದ ಈ ಶ್ಲೋಕಗಳೆರಡನ್ನೂ ವರಾಹಚರಮಶ್ಲೋಕವೆಂದು ಕರೆಯುತ್ತಾರೆ. ಈ ತಾಯಿಯು ತಾನು ಉಪದೇಶದಲ್ಲಿ ಪಡೆದ ಈ ಸುಲಭೋಪಾಯವನ್ನು ಚೇತನರೆಲ್ಲರಿಗೂ ತಿಳಿಸುವ ಸಲುವಾಗಿಯೇ, ಮುಂದೆ ತಾನು ಗೋದಾದೇವಿ ಅಥವಾ ಆಂಡಾಳಾಗಿ ಅವತರಿಸಿದಾಗ ತನ್ನ ಶ್ರೀಸೂಕ್ತಿಗಳ ಮುಖಾಂತರ ಚೇತನರಿಗೆ ಪ್ರಕಾಶಪಡಿಸಿದುದೇ ಅಲ್ಲದೆ, ಮುಂದೆ ಪರಮಾತ್ಮನ ಆಜ್ಞೆಯಿಂದ ಧರ್ಮ ಸಂಸ್ಥಾಪನೆ ಮಾಡಲು ಅವತರಿಸಿದ ನಿತ್ಯಾತ್ಮರಾದ ಆಳ್ವಾರುಗಳೂ, ಭಗವದ್ರಾಮಾನುಜರೂ, ವೇದಾಂತದೇಶಿಕರೇ ಮೊದಲಾದವರಿಗೂ ಪ್ರೇರಿಸಿ ಅವರುಗಳು ಸರ್ವರಿಗೂ ವೇದ್ಯವಾಗುವಂತೆ ಅವರವರ ಕೃತಿಗಳಲ್ಲಿ ಪ್ರಕಾಶ-ಪಡಿಸುವಂತೆ ಮಾಡಿದಳು.

ಕ್ರಿ. ಶ. ೧೨೬೮ನೇ ವರ್ಷದ ವಿಭವ ಸಂವತ್ಸರದ ಕನ್ಯಾ (ಭಾದ್ರಪದ) ಮಾಸದ ಶ್ರವಣ ನಕ್ಷತ್ರ ಕೂಡಿದ ಶುಭದಿನದಂದು ಶ್ರೀ ಉ.ವೇ. ಅನಂತ-ಸೂರಿ ಮತ್ತು ಶ್ರೀಮತಿ ತೋತಾರಂಬಾರವರ ಸುಪುತ್ರರಾಗಿ, ಕಂಚಿಯ ತೂಪ್ಪಿಲ್ ಅಗ್ರಹಾರದಲ್ಲಿ ಜನಿಸಿದ, ತಿರುಮಲೈ ಶ್ರೀನಿವಾಸನ ಘಂಟಾವ-ತಾರವಾದ ಶ್ರೀಮನ್ನಿಗಮಾಂತ ಮಹಾದೇಶಿಕರವರು, ಈ ಮೇಲೆ ಹೇಳಿದ ವರಾಹಾಚರಮಶ್ಲೋಕದ ಮಹಿಮೆ, ರಹಸ್ಯ, ಸ್ವಾರಸ್ಯ ಮುಂತಾದುವನ್ನು, ಎಲ್ಲ ಚೇತನರಿಗೂ ಸ್ಪಷ್ಟವಾಗಿ ತಿಳಿಯುವಂತೆ, ತಮಿಳು ಸಂಸ್ಕೃತ-ಮಿಶ್ರವಾದ ಮಣಿಪ್ರವಾಳ ಶೈಲಿಯಲ್ಲಿ **"ರಹಸ್ಯಶಿಖಾಮಣಿ"**—ಎಂಬ ಶೀರ್ಷಿಕೆಯನ್ನೊಳಗೊಂಡ ಚಿಕ್ಕದಾದ ಗ್ರಂಥವೊಂದನ್ನು ರಚಿಸಿಕೊಟ್ಟಿದ್ದಾರೆ. ಆ ಆಚಾರ್ಯರ ೭೨೨ನೆಯ ತಿರುನಕ್ಷತ್ರವಾದ ಪ್ರಜೋತ್ಪತ್ತಿನಾಮ ಸಂವತ್ಸರದ ಕನ್ಯಾಮಾಸದ ಶ್ರವಣ ನಕ್ಷತ್ರದಿಂದ ಕೂಡಿದ ಶುಭದಿನದಂದು,

ದಾಸನದಾದ ಕನ್ನಡ ಭಾಷಾಂತರ ಮತ್ತು ವಿವರಣೆಯನ್ನೊಳಗೊಂಡ ಆಚಾರ್ಯರ "ರಹಸ್ಯ ಶಿಖಾಮಣಿ" ಗ್ರಂಥವನ್ನು ಭಕ್ತಾದಿಗಳಲ್ಲಿ ಸಮರ್ಪಿಸಲು ದಾಸನು, ಭಗವಂತನಿಂದ ಪ್ರೇರಿತನಾಗಿ ಈ ಪುಸ್ತಕವನ್ನು ಅಚ್ಚುಹಾಕಿಸಿದ್ದಾನೆ.

ದಾಸನಿಗೆ ಈ ಗ್ರಂಥವನ್ನು ಸಂಪ್ರದಾಯಬದ್ಧವಾಗಿ ಬಂದಿರುವ ವಿಶೇಷಾರ್ಥಗಳೊಡನೆ, ಬಹಳ ಕೃಪೆಯಿಂದ, ದಾಸನ ಗುರುಗಳಾದ, ಶ್ರೀರಂಗದ ಶ್ರೀಮದಾಂಡವನ್ ಪೌಂಡರೀಕಪುರಂ ಆಶ್ರಮದಲ್ಲಿ ಬಿಜಯ ಮಾಡಿಸಿರುವ, ಶ್ರೀಮದ್ವೇದಮಾರ್ಗ ಪ್ರತಿಷ್ಠಾಪನಾಚಾರ್ಯ ಪರಮಹಂಸ ಪರಿವ್ರಾಜಕಾಚಾರ್ಯ ಸರ್ವತಂತ್ರ ಸ್ವತಂತ್ರೋಭಯ ವೇದಾಂತಾಚಾರ್ಯ ಭಗವದ್ರಾಮಾನುಜಸಿದ್ಧಾಂತ ನಿರ್ಧಾರಣ ಸಾರ್ವಭೌಮ ಶ್ರೀಮನ್ನಾಥಮುನಿ ಶ್ರೀಮದ್ಯಾಮುನಮುನಿ ಶ್ರೀಮದ್ರಾಮಾನುಜಮುನಿ ಮುನಿರೂಪ ಮುನಿತ್ರಯ ಸಿದ್ಧಾಂತ ಸ್ಥಾಪನಾಚಾರ್ಯಾದಿ ಬಿರುದಾಂಕಿತರಾದ ಶ್ರೀ ಶ್ರೀ ಗೋಪಾಲದೇಶಿಕ ಮಹಾದೇಶಿಕ ಸ್ವಾಮಿಗಳು ಕಾಲಕ್ಷೇಪವನ್ನು ಹೇಳಿದರು. ಅವರ ಕಾಲಕ್ಷೇಪದ ಸಾರವನ್ನೇ ದಾಸನು ಈ ಪುಸ್ತಕದ ರೂಪದಲ್ಲಿ ಬರೆದು ಪ್ರಕಾಶ ಪಡಿಸಿದ್ದಾನೆ. ಈ ರೀತಿ ಕಾಲಕ್ಷೇಪ ಮಾಡಿಸಿ, ದಾಸನನ್ನು ಸ್ವಾಮಿಗಳು ಕೃತಾರ್ಥನನ್ನಾಗಿಸಿದುದೇ ಅಲ್ಲದೆ, ದಾಸನು ಈ ಗ್ರಂಥವನ್ನು ಅಚ್ಚುಹಾಕುತ್ತಿದ್ದಾನೆಂದು ತಿಳಿದ ಕೊಡಲೆ ಬಹಳ ಕೃಪೆ-ಯಿಂದ ಈ ಪುಸ್ತಕಕ್ಕೆ ರಕ್ಷಾಕವಚದಂತೆ ಸಂಸ್ಕೃತ ಭಾಷೆಯಲ್ಲಿ ಅನುಗ್ರಹ ಲೇಖನವನ್ನೂ ದಯಪಾಲಿಸಿ ಆಶೀರ್ವದಿಸಿದ್ದಾರೆ. ಹೀಗೆ ನಾನಾ ರೀತಿ ಕೃಪೆಮಾಡಿದ ಸ್ವಾಮಿಗಳಿಗೆ ದಾಸನು ಎಂದೆಂದೂ ಚಿರಋಣಿಯಾಗಿದ್ದಾನೆ.

ಈ ಪುಸ್ತಕವನ್ನು ಮುದ್ರಿಸಿ ಪ್ರಕಾಶಿಸಲು, ಹಿಂದೆ ನಮ್ಮ ಕರ್ನಾಟಕದ ಹೈಕೋರ್ಟಿನ ಮುಖ್ಯನ್ಯಾಯಾಧೀಶರಾಗಿದ್ದು, ಈಗ ದಿವಂಗತರಾಗಿರುವ, ಶ್ರೀಮಾನ್ ಗೋಪೀವಲ್ಲಭೈಯಂಗಾರ್ಯರವರ ಸವಿ ನೆನಪಿನಲ್ಲಿ, ಅವರ ಕುಟುಂಬದವರು ಆರ್ಥಿಕನೆರವನ್ನು ನೀಡಿದ್ದಾರೆ.

ಅವರೆಲ್ಲರಿಗೂ ಭಗವಂತನು, ಆಯುರಾರೋಗ್ಯ ಐಶ್ವರ್ಯಾದಿಗಳನ್ನು ಕರುಣಿಸಲೆಂದು ದಾಸನು ಭಗವಂತನಲ್ಲಿ ಪ್ರಾರ್ಥಿಸುತ್ತಾನೆ.

ಈ ಪುಸ್ತಕವನ್ನು ಶ್ರದ್ಧೆವಹಿಸಿ ಅಂದವಾಗಿ ಮುದ್ರಿಸಿಕೊಟ್ಟು ಸಹಕರಿಸಿರುವ, ದಾಸನ ಸ್ನೇಹಿತರುಗಳಾದ, ಲಕ್ಷ್ಮೀಪ್ರಿಂಟರ್ಸ್‌ನ ಮಾಲಿಕರಾದ ಶ್ರೀಮಾನ್ ಶೇಷಾದ್ರಿಯವರಿಗೂ, ಶ್ರೀ ರಾಘವೇಂದ್ರ ಪ್ರಿಂಟರ್ಸ್‌ನ ಮಾಲಿಕರಾದ, ಶ್ರೀಮಾನ್ ಬಿ. ಜಿ. ಮಳಲಿಗೌಡರಿಗೂ, ಮತ್ತು ಅವರಿಬ್ಬರ ಸಹೋದ್ಯೋಗಿಗಳೆಲ್ಲರಿಗೂ ದಾಸನು ಚಿರಋಣಿಯಾಗಿದ್ದಾನೆ.

–ಇತಿ ಸಜ್ಜನವಿಧೇಯ

**ಸ್ವಚ್ಛಂದಂ ಅನಂತನರಸಿಂಹಾಚಾರ್**

[ಭೂವರಾಹಸ್ವಾಮಿಯ ದಿವ್ಯಮಂಗಳಮೂರ್ತಿಯನ್ನು ಧ್ಯಾನಿಸಲನುಕೂಲವಾಗುವಂತೆ, ಶ್ರೀಮದ್ವೇದಾಂತದೇಶಿಕರು ಹಾಡಿಕೊಟ್ಟಿರುವ ಶ್ಲೋಕವನ್ನೂ ಮತ್ತು ಆ ಶ್ಲೋಕದಲ್ಲಿ ಹೇಳಿರುವಂತೆಯೇ ಬರೆಯಲ್ಪಟ್ಟಿರುವ ಚಿತ್ರಪಟವನ್ನೂ ಈ ಮುಂದೆ ಕೊಡಲಾಗಿದೆ.]

**ಪತ್ಯುರ್ದಕ್ಷಿಣಪಾಣಿಪಂಕಜಪುಟೇ ವಿನ್ಯಸ್ತಪಾದಾಂಬುಜಾ**
**ವಾಮಂ ಪನ್ನಗಸಾರ್ವಭೌಮಸದೃಶಂ ಪರ್ಯಂಕಯಂತೀಭುಜಮ್ ।**
**ಪೋತ್ರಸ್ಪರ್ಶಲಸತ್ಕಪೋಲಫಲಕಾ ಫುಲ್ಲಾರವಿಂದೇಕ್ಷಣಾ**
**ಸಾ ಮೇ ಪುಷ್ಯತು ಮಂಗಳಾನ್ಯನುದಿನಂ ಸರ್ವಾಣಿ ಸರ್ವಂಸಹಾ ॥**

-(ವೇದಾಂತ ದೇಶಿಕರ ಭೂಸ್ತುತಿ-೩೦ನೆಯ ಶ್ಲೋಕ)

**ಪತ್ಯುಃ** = ಪತಿಯಾದ ವರಾಹಸ್ವಾಮಿಯ, **ದಕ್ಷಿಣಪಾಣಿಪಂಕಜಪುಟೇ** = ಕಮಲದಂತಿರುವ ಬಲ ಅಂಗೈಯಲ್ಲಿ, **ವಿನ್ಯಸ್ತ ಪಾದಾಂಬುಜಾ** = (ತನ್ನ) ಅಡಿದಾವರೆಗಳನ್ನಿಟ್ಟವಳೂ, **ಪನ್ನಗಸಾರ್ವಭೌಮ ಸದೃಶಂ** =

ಸರ್ಪರಾಜನಾದ ಅನಂತನಂತಿರುವ, **ವಾಮಂಭುಜಂ**=(ವರಾಹನ) ಎಡ ತೋಳನ್ನು, **ಪರ್ಯಂಕಯಂತೀ**=ಮಂಚವನ್ನಾಗಿ ಮಾಡಿಕೊಂಡವಳೂ, **ಪೋತ್ರಸ್ಪರ್ಶಲಸತ್ ಕಪೋಲಫಲಕಾ**=(ನೀಳವಾದ) ವರಾಹಸ್ವಾಮಿಯ ಕಪೋಲದ ತಗಲುವಿಕೆಯಿಂದ ರೋಮಾಂಚಿತವಾದ ಹಲಗೆಯಂತೆ ವಿಶಾಲ-ವಾದ ಕೆನ್ನೆಗಳುಳ್ಳವಳೂ, **ಫುಲ್ಲಾರವಿಂದೇಕ್ಷಣಾ**=ಅರಳಿದ ಕಮಲದಂತೆ ಸುಂದರವಾದ ನೋಟವುಳ್ಳವಳೂ ಆದ, **ಸಾ ಸರ್ವಂಸಹಾ**=ಆ (ಚೇತನ-ರೆಲ್ಲರ ಅಪರಾಧವೆಲ್ಲವನ್ನೂ ಸಹಿಸುವ ಕ್ಷಮಾಗುಣಮೂರ್ತಿಯಾದ) ಭೂದೇವಿಯು. **ಮೇ**=ನನಗೆ, **ಸರ್ವಾಣಿ ಮಂಗಳಾನಿ**=ಎಲ್ಲ ತೆರನಾದ ಶುಭವನ್ನೂ, **ಅನುದಿನಂ**=ನಿತ್ಯವೂ, **ಪುಷ್ಯತು**=ಅಭಿವೃದ್ಧಿಗೊಳಿಸಲಿ.

ವರಾಹಾವತಾರಕಾಲದಲ್ಲಿ, ವರಾಹಸ್ವಾಮಿಯು ಹಿರಣ್ಯಾಕ್ಷನನ್ನು ಸಂಹರಿಸಿ ಭೂದೇವಿಯನ್ನು ಬಹಳ ಪ್ರೀತಿಯಿಂದ ತಾನೇ ಮೇಲೆತ್ತಿಕೊಂಡು ಬರುತ್ತಾನೆ. ಆ ಸನ್ನಿವೇಶದಲ್ಲಿ ತನ್ನ ಪತಿಯ ಬಲಗಡೆಯ ಕರಕಮಲದಲ್ಲಿ ತನ್ನೆರಡು ಅಡಿದಾವರೆಗಳನ್ನೂ ಇಟ್ಟುಕೊಂಡು, ಶೇಷಶಯನಕ್ಕೆ ಸಮಾನವಾದ ತನ್ನ ಪ್ರಿಯನ ಎಡತೋಳಿನ ಮೇಲೆ ಮಲಗಿಕೊಂಡು, ಆ ವರಾಹನ ನೀಳ-ವಾದ ಕೆನ್ನೆಯ ಸ್ಪರ್ಶದಿಂದ ಪುಲಕಿತವಾದಕೆನ್ನೆಗಳುಳ್ಳವಳಾಗಿ, ಅನೇಕಕಾಲ ವಿರಹವ್ಯಥೆಯಲ್ಲಿ ತೊಳಲಿ, ಮತ್ತೆ ಪಡೆದ ಶರೀರ ಸಂಬಂಧದಿಂದಾದ ಆನಂದ ದಿಂದ ಅರಳಿ, ಕಿವಿಯವರೆಗೆ ಹರಡಿಕೊಂಡ ತಾವರೆಯಂತಿರುವ ಕಣ್ಣುಗಳುಳ್ಳ ವಳಾಗಿದ್ದ ಭೂದೇವಿಯು ಚೇತನರೆಲ್ಲರ ಅಪರಾಧವೆಲ್ಲವನ್ನೂ ಸಹಿಸುವ ಕ್ಷಮಾಗುಣಮೂರ್ತಿಯಾಗಿ **'ಸರ್ವಂಸಹಾ'** -ಎಂಬ ಬಿರುದಾಂಕಿತಳಾದುದ-ರಿಂದ (ನಮ್ಮ ಅಪರಾಧವನ್ನು ಬದಿಗೊತ್ತಿ), ನಿರಂತರವಾಗಿ ನಮಗೆ ದಿನೇ ದಿನೇ ಸರ್ವವಿಧವಾದ ಮಂಗಳವನ್ನೂ ಅಭಿವೃದ್ಧಿಗೊಳಿಸಲೆಂದು -ಈ **ಶ್ಲೋಕದಲ್ಲಿ ಆಚಾರ್ಯರು ಪ್ರಾರ್ಥಿಸಿದ್ದಾರೆ.**

**॥ ಇತಿಶಮ್ ॥**

|| ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ||

ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ |
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾಹೃದಿ ||

ಶ್ರೀಮಾನ್ = ನಿರಂತರವಾದ ಭಗವಂತನ ಕೈಂಕರ್ಯಶ್ರೀಯಿಂದ ಕೂಡಿದ, ಕವಿತಾರ್ಕಿಕಕೇಸರೀ = ಕವಿಗಳ ಮಧ್ಯದಲ್ಲಿಯೂ, ತಾರ್ಕಿಕರ ಮಧ್ಯದಲ್ಲಿಯೂ ಸಿಂಹದಂತೆ ಪರಾಕ್ರಮಶಾಲಿಯಾದ, ವೇದಾಂತಾಚಾರ್ಯವರ್ಯಃ = ವೇದದ ಕೊನೆಯ ಭಾಗವಾದ ಉಪನಿಷದರ್ಥಗಳನ್ನು ತನ್ನ ಅನುಷ್ಠಾನದಿಂದ ಸಾಕ್ಷಾತ್ಕರಿಸಿ ಉಪದೇಶಿಸಿದ ಆಚಾರ್ಯರುಗಳಲ್ಲಿ ಶ್ರೇಷ್ಠರಾದ, ವೇಂಕಟನಾಥಾರ್ಯಃ = 'ವೆಂಕಟನಾಥ'ರೆಂಬ ಹೆಸರಿನಿಂದ ಕೂಡಿದ (ಆಚಾರ್ಯರು) ಮೇ = ನನ್ನ, ಹೃದಿ = ಹೃದಯ (ಕಮಲ) ದಲ್ಲಿ ಸದಾ = ಎಲ್ಲ ಕಾಲದಲ್ಲಿಯೂ, ಸನ್ನಿಧತ್ತಾಂ = ಸಾನ್ನಿಧ್ಯದಿಂದಿರಲಿ.

ಸ್ಥಿರಚರ ಜಗನ್ಮಾತುಃ ಕ್ಷೋಣ್ಯಾಃಕ್ವಚಿಚ್ಚತುರರ್ಣವೀ-
ವಿಪದಿ ಸಪದಿ ಕ್ರೋಡ ಕ್ರೀಡಾಂ ವಿಭಾವಯತಃ ಪ್ರಭೋಃ |
ಶ್ರುತಿ ಪರಿಪಣ ಶ್ಲೋಕದ್ವಂದ್ವಾತ್ಮನಾ ಪರಿಪಕ್ರಿಮೋ
ರಮಯತು ಮನಃ ಸತ್ವಸ್ಥಾನಾಂ ರಹಸ್ಯಶಿಖಾಮಣಿಃ ||

ಸ್ಥಿರಚರಜಗನ್ಮಾತುಃ = ಸ್ಥಿರವಾಗಿ ಒಂದೇಕಡೆ ನಿಂತಿರುವ, (ಚರ) ಸಂಚರಿಸುವ ಜಗತ್ತಿಗೆಲ್ಲ ತಾಯಿಯಾದ, ಕ್ಷೋಣ್ಯಾಃ = ಭೂದೇವಿಗೆ, ಕ್ವಚಿತ್ = ಒಂದು ಸಲ, ಚತುರರ್ಣವೀವಿಪದಿ = ನಾಲ್ಕು ಸಮುದ್ರಗಳ ಮಧ್ಯದಲ್ಲಿ(ಸಿಲುಕಿಕೊಂಡು) ತೊಳಲುವ ವಿಪತ್ತೊದಗಿದ ಕಾಲದಲ್ಲಿ, ಸಪದಿ = ಕೂಡಲೆ, ಕ್ರೋಡ ಕ್ರೀಡಾಂ ವಿಭಾವಯತಃ = (ಪ್ರೇಮ ಅಥವಾ ಕಾಮ-ಭಾವನೆಯಿಂದ) ಕೋರೆಹಲ್ಲಿನಿಂದ ತಿವಿಯುವ ಆಟವನ್ನಾಡಿದ, ಪ್ರಭೋಃ = ಪ್ರಭುವಾದ ಶ್ರೀಮನ್ನಾರಾಯಣನ, ಶ್ರುತಿಪರಿಪಣಶ್ಲೋಕ ದ್ವಂದ್ವಾತ್ಮನಾ = ವೇದಗಳಿಗೂ (ವೇದಾರ್ಥಗಳನ್ನು ಪಡೆಯಲು) ಅಡವಿಡುವ ವಸ್ತುವಾಗಿ ಎರಡು ಶ್ಲೋಕಗಳ ರೂಪದಲ್ಲಿ, ಪರಿಪಕ್ರಿಮಃ = ಉತ್ಪನ್ನವಾದ,

**ರಹಸ್ಯ ಶಿಖಾಮಣಿಃ** = [ಆ ಎರಡು ಶ್ಲೋಕಗಳ ರಹಸ್ಯವನ್ನು ಬೋಧಿಸುವ] ರಹಸ್ಯಗಳಲ್ಲಿ ಶ್ರೇಷ್ಠವಾದ, 'ರಹಸ್ಯ ಶಿಖಾಮಣಿ' ಎಂಬ ಈ ಗ್ರಂಥವು **ಸತ್ತ್ವಸ್ಥಾನಾಂ** = ಸತ್ತ್ವಗುಣ ಭೂಯಿಷ್ಠರಾದ ಸತ್ಪುರುಷರ, **ಮನಃ** = ಮನಸ್ಸನ್ನು, **ರಮಯತು** = ಸಂತೋಷಪಡಿಸಲಿ.

ಚರಾಚರಾತ್ಮಕವಾದ ಚೇತನಾಚೇತನವರ್ಗವನ್ನು ಲೀಲಾವಿಭೂತಿ-ಯಲ್ಲಿ ನಿರಂತರವಾಗಿ ಹೊತ್ತು ರಕ್ಷಿಸುತ್ತಿರುವ ತಾಯಿಯೇ –'ಭೂದೇವಿ'. ಒಂದು ಕಾಲದಲ್ಲಿ ಹಿರಣ್ಯಾಕ್ಷನು ಭೂಮಂಡಲದ ಸ್ವರೂಪದಲ್ಲಿದ್ದ ಭೂದೇವಿ-ಯನ್ನು ಸಮುದ್ರದ ಅಡಿಯಲ್ಲಿ ತೆಗೆದುಕೊಂಡುಹೋಗಿ ಅವಿತಿಟ್ಟನು. ಆಗ ವ್ಯಷ್ಟಿಸೃಷ್ಟಿಯಲ್ಲಿ, ಚೇತನರ ಕರ್ಮಾನುಗುಣವಾಗಿ, ಅವರವರಿಗೆ ತಕ್ಕ ದೇಹೇಂದ್ರಿಯಾದಿಗಳನ್ನು ಸೃಷ್ಟಿಸಿಕೊಡಲು ಭಗವಂತನಿಂದ ನಿಯೋಜಿಸ-ಲ್ಪಟ್ಟ ಬ್ರಹ್ಮದೇವನು, ತಾನು ಸೃಷ್ಟಿಸಿದ ಭೂಮಂಡಲವು ತನ್ನ ಕಣ್ಣಿಗೇ ಕಾಣದಂತಾಗಲು ಭಗವಂತನಲ್ಲಿ ಮೊರೆಯಿಡುತ್ತಾನೆ. ಆಗ ಸಮುದ್ರದ ಮಧ್ಯದಲ್ಲಿ ಸಿಲುಕಿಕೊಂಡು ವಿಪತ್ತಿಗೀಡಾದ ಭೂದೇವಿಯನ್ನು ಉದ್ಧರಿಸುವ ಸಲುವಾಗಿ, ಶ್ರೀಮನ್ನಾರಾಯಣನು ಕೂಡಲೆ, ವರಾಹರೂಪವನ್ನು ತಾಳಿ ಹಿರಣ್ಯಾಕ್ಷನನ್ನು ಸಂಹರಿಸಿ, ತನ್ನ ಮಹಿಷಿಯಾದ ಭೂದೇವಿಯನ್ನು ಪಡೆದು-ಕೊಂಡು, ಅವಳಮೇಲಿನ ಅತಿಶಯವಾದ ಪ್ರೀತಿಯಿಂದ, ತನ್ನ ಅವತಾರ ಸ್ವರೂಪವಾದ ವರಾಹ ಅಥವಾ ಹಂದಿಯ ಸ್ವಭಾವಕ್ಕನುಗುಣವಾಗಿ, ಅಂದರೆ, ಪುರುಷ ಪ್ರಾಣಿಗಳು ತಮ್ಮಲ್ಲಿ ಕಾಮೋದ್ರೇಕವು ಅಧಿಕವಾದಾಗ ತಮ್ಮ ಪ್ರಿಯವಾದ ಸ್ತ್ರೀ ಪ್ರಾಣಿಗಳನ್ನು ಕಂಡರೇ, ಅಥವಾ ಅವುಗಳನ್ನು ಕಾಣದಿದ್ದಾಗ ಮಣ್ಣಿನ ದಿಬ್ಬವೇ ಮೊದಲಾದುವನ್ನು ತನ್ನ ಕೊಂಬು ಕೋರೆ ಹಲ್ಲುಗಳ ಮುಖಾಂತರ ತಿವಿಯುತ್ತಾ ಆನಂದವನ್ನು ಪಡೆಯುವಂತೆ, ವರಾಹ-ಸ್ವರೂಪಿಯಾದ ಪರಮಾತ್ಮನೂ ತನ್ನಿಂದ ಅಗಲಿದ್ದ ಭೂಮಿತಾಯಿಯನ್ನು ಕಾಣಬೇಕೆಂದು ಹಾತೊರೆಯುತ್ತಿದ್ದ ಮನಸ್ಸಿನಿಂದ ಕೂಡಿ, ಅವಳನ್ನು ಕಂಡೊಡನೆ ಅವಳ ವಿಷಯದಲ್ಲಿ ಪ್ರೇಮವು ಉಕ್ಕುತ್ತಾ, ತನ್ನ ವರಾಹ ಸ್ವಭಾವಕ್ಕೆ ಅನುಗುಣವಾಗಿ ಆಕೆಯನ್ನು ತನ್ನ ಕೋರೆಯ ಹಲ್ಲುಗಳಿಂದ ತಿವಿಯುತ್ತಾ ಸಂತೋಷಿಸಿ ಆಕೆಯನ್ನು ತನ್ನ ಕೋರೆಯ ಹಲ್ಲುಗಳ ಮೇಲೆ

ಕುಳ್ಳಿರಿಸಿಕೊಂಡು, ಆಕೆಯೊಡನೆ ಸರಸ ಸಲ್ಲಾಪಗಳನ್ನು ಮಾಡಿದನು. ಆಗ ಏಕಾಂತದಲ್ಲಿ, ತನ್ನ ಮಕ್ಕಳ ಮೇಲೆ ವಿಶೇಷವಾದ ಮಾತೃವಾತ್ಸಲ್ಯದಿಂದ ಕೂಡಿದ ಭೂದೇವಿಯು **"ಮತ್ಕೃತೇ ಸರ್ವಭೂತಾನಾಂ ಲಘೂಪಾಯಂ ವದಪ್ರಭೋ"** "ನನಗೋಸ್ಕರ(ನನ್ನಲ್ಲಿ ಮುಂದೆ ಜನ್ಮತಾಳುವ)ಎಲ್ಲ ಪ್ರಾಣಿ-ವರ್ಗವೂ ಸುಲಭವಾಗಿ ನಿಮ್ಮನ್ನು ಬಂದು ಸೇರಲು ಉಪಾಯವೊಂದನ್ನು ತಾವು ತಿಳಿಸಬೇಕು" ಎಂದು ತನ್ನ ಪತಿಯಲ್ಲಿ ಪ್ರಾರ್ಥಿಸಿದಳು. ಆಗ ಅತಿ ರಹಸ್ಯವಾಗಿರುವ, ತನ್ನನ್ನು ಬಂದು ಸೇರಲು ಬಹಳ ಸುಲಭವಾದ ಉಪಾಯ-ವಾದ 'ಶರಣಾಗತಿ'ಯ ಕ್ರಮವನ್ನು ಭೂದೇವಿಗೆ ಅವನು ಉಪದೇಶಿಸು-ತ್ತಾನೆ. ಈ ಉಪಾಯವು ಮೊದಲೇ ವೇದಗಳಲ್ಲಿಯೂ ಭಗವಂತನಿಂದಲೇ ಉಪದೇಶಿಸಲ್ಪಟ್ಟಿದ್ದರೂ, ಅಲ್ಲಿ ಗುರೂಪಾಯಗಳಾದ ಕರ್ಮಯೋಗ, ಜ್ಞಾನ-ಯೋಗ, ಭಕ್ತಿಯೋಗಾದಿಗಳನ್ನು ಉಪದೇಶಿಸಿ ಅವುಗಳ ನಡುವೆ ಇದನ್ನೂ ಉಪದೇಶಿಸಿರುವುದರಿಂದ, ಸಂಕೀರ್ಣವಾಗಿ – ಸ್ಪಷ್ಟವಾಗಿ ತಿಳಿಯುವಂತಿಲ್ಲ. ಆದರೆ, ವೇದಗಳಲ್ಲಿಯೂ ಸಾರತಮವಾದ ಉಪಾಯ ಇದೇ ಆಗಿದೆ ಮತ್ತು ಇದು ಇಲ್ಲಿ ಹೇಳುವ ಕೇವಲ ಎರಡು ಶ್ಲೋಕ-ಗಳಲ್ಲಿಯೇ ಬಹಳ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಆದುದರಿಂದ ವೇದಾ-ರ್ಥಗಳನ್ನೂ ತಿಳಿದು ಅವುಗಳ ಸಾರವನ್ನೂ ತಿಳಿದುಕೊಳ್ಳಬೇಕಾದರೆ, ಈ ವರಾಹಸ್ವಾಮಿಯ ಉಪದೇಶವಾಣಿಯಿಂದ ತಿಳಿದುಕೊಳ್ಳಬೇಕಾಗಿದೆ. ಆದುದ-ರಿಂದ ವೇದಗಳಿಗೂ ಅಂದರೆ ವೇದಾರ್ಥಗಳನ್ನು ಪಡೆಯುವುದಕ್ಕೂ ಇದನ್ನು ಅಡವಾಗಿಟ್ಟು ಪಡೆಯಬೇಕಾಗಿದೆ. ಲೋಕದಲ್ಲಿ ಒಂದು ವಸ್ತುವನ್ನು ಪಡೆ-ಯಲು, ಮತ್ತೊಂದನ್ನು ಅಡವಿಟ್ಟಾಗ, ಅಡವಿಡುವ ವಸ್ತುವು ಅದರಿಂದ ನಾವು ಪಡೆಯುವ ವಸ್ತುವಿಗಿಂತಲೂ ಅಧಿಕವಾದ ಬೆಲೆಯುಳ್ಳದ್ದಾಗಿರುತ್ತದೆ. ಅಂತೆಯೇ ವರಾಹನ ಉಪದೇಶವಾಣಿಯೂ ವೇದಾರ್ಥಗಳನ್ನು ಪಡೆಯಲು ಅಡವಿಡುವ ವಸ್ತುವಾಗಿರುವುದರಿಂದ ವೇದಕ್ಕಿಂತಲೂ ಅತಿಶಯವಾದುದೆಂದೂ ಸ್ಪಷ್ಟವಾಗುತ್ತದೆ.

ವೇದಪ್ರತಿಪಾದ್ಯವಾದ ಕೆಲ ವಿಷಯಗಳು ರಹಸ್ಯವಾಗಿರುತ್ತದೆ. ವೇದವು ಆ ವಿಷಯಗಳನ್ನು ನೇರವಾಗಿ ಹೇಳದೆ ಮರೆಸಿ ಹೇಳುತ್ತದೆ. ಆದುದ-

ರಿಂದಲೇ ವೇದಗಳನ್ನು ತಮಿಳು ಭಾಷೆಯಲ್ಲಿ 'ಮರೈ' ಎಂದೂ, ಸಂಸ್ಕೃತದಲ್ಲಿ 'ಛದಿರ್ ಆವರಣೇ' ಎಂಬ ಧಾತುವಿನಿಂದ ನಿಷ್ಪನ್ನವಾದ, 'ಹೊದ್ದಿಕೆಯಿಂದ ಕೂಡಿದುದು' –ಎಂಬ ಅರ್ಥದಲ್ಲಿ 'ಛಂದಸ್' –ಎಂದೂ ಕರೆಯುತ್ತಾರೆ. ವೇದಪ್ರತಿಪಾದ್ಯವಾದ ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗ ಮತ್ತು ಶರಣಾಗತಿ – ಎಲ್ಲವೂ ರಹಸ್ಯವೇ ಆದರೂ, ಈ 'ಶರಣಾಗತಿ' ಎಂಬ ಉಪಾಯವು ಆ ರಹಸ್ಯಗಳಲ್ಲೆಲ್ಲಾ ಸುಲಭೋಪಾಯವಾಗಿ ಶ್ರೇಷ್ಠತಮವಾದುದರಿಂದ "ರಹಸ್ಯ ಶಿಖಾಮಣಿ" ಎಂದು ಕರೆಯಲ್ಪಡುತ್ತದೆ. ಆ 'ರಹಸ್ಯ ಶಿಖಾಮಣಿ' ಯನ್ನು ಎಲ್ಲರಿಗೂ ತಿಳಿಯುವಂತೆ ವಿವರಿಸುವ ಗ್ರಂಥಕ್ಕೂ ಸ್ವಾಮಿ ವೇದಾಂತ ದೇಶಿಕರು "ರಹಸ್ಯ ಶಿಖಾಮಣಿ"–ಎಂದೇ ನಾಮಕರಣ ಮಾಡಿದ್ದಾರೆ. ವೇದಾಂತ ದೇಶಿಕರು ಅನೇಕ ರಹಸ್ಯ ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳೆಲ್ಲದರ ಮಧ್ಯದಲ್ಲಿಯೂ ಇದು ಬಹಳ ಶ್ರೇಷ್ಠವಾದುದಾಗಿರುವುದರಿಂದಲೂ "ರಹಸ್ಯ ಶಿಖಾಮಣಿ" –ಎಂಬ ಈ ಹೆಸರು ಅನ್ವರ್ಥವಾಗಿದೆ.

ಸತ್ತ್ವಗುಣಪ್ರಚುರರಾಗಿ, ಆದಷ್ಟು ಜಾಗ್ರತೆ ಪರಮಾತ್ಮನನ್ನು ಸೇರಬೇಕೆಂದು ಹಾತೊರೆಯುತ್ತಿರುವ ಮುಮುಕ್ಷುಗಳಿಗೆ, ಬಹಳ ಸುಲಭೋಪಾಯವಾಗಿದ್ದು, ಭಕ್ತಿಯೋಗಾದಿಗಳಂತೆ ಕಾಲವಿಳಂಬವಿಲ್ಲದೆ ಏತದ್ದೇಹಾವಸಾನದಲ್ಲಿಯೇ ಪರಮಾತ್ಮನನ್ನು ಸೇರಲು ಅವಕಾಶವನ್ನು ಕಲ್ಪಿಸುವ, ಈ ವರಾಹ ಚರಮ ಶ್ಲೋಕವು ಮತ್ತು ಅದನ್ನು ಸವಿವರವಾಗಿ ತಿಳಿಸುವ 'ರಹಸ್ಯ ಶಿಖಾಮಣಿ'ಯೂ, ಅವುಗಳನ್ನು ಅಧ್ಯಯನಮಾಡಿ ಸತ್ತ್ವಗುಣ ಭೂಯಿಷ್ಠರಾದ ಸತ್ಪುರುಷರು ಪರಮಾತ್ಮನಲ್ಲಿ ಶರಣಾಗತಿ ಮಾಡಿ ನಿರ್ಭರರೂ, ನಿರ್ಭಯರೂ ಆಗಿ ಸಂತೋಷವಾಗಿ ಬಾಳುವಂತೆ ಮಾಡಲಿ –ಎಂದು ಆಶಿಸಿದ್ದಾರೆ.

**ಕ್ವಾಪಿ ಕಲ್ಪಾಂತವೇಶಂತೇ ಖುರದಘ್ನೇ ಸಮುದ್ಧೃತಾಮ್ |**
**ವಹತೇ ಮೇದಿನೀಮುಸ್ತಾಂ ಮಹತೇ ಪೋತ್ರಿಣೇ ನಮಃ ||೨||**

ಕ್ವಾಪಿ = ಒಂದೆಡೆಯಲ್ಲಿ (ವರಾಹಾವತಾರ ಮಾಡಿದ ಸನ್ನಿವೇಶದಲ್ಲಿ) ಯಾವ ಮಹಾವರಾಹನ, ಕಲ್ಪಾಂತ ವೇಶಂ = ಪ್ರಳಯಾಂತವಾದ

ವೇಷದಲ್ಲಿಯಾದರೋ, (ಸಮುದ್ರವು), **ಖುರದಘ್ನೇ** = ಗೊರಸುಗಳಿಗೆ ಸಮಾನವಾದ ಪ್ರಮಾಣವುಳ್ಳದುದಾಗಿಯೂ, **ಸಮುದ್ಧೃತಾವ್** = (ಆ ಸಮುದ್ರದಿಂದ) ಮೇಲೆತ್ತಲ್ಪಟ್ಟ, **ಮೇದಿನೀಮುಸ್ತಾಂ** = ಭೂಮಿಯೇ 'ಮುಸ್ತಾಫ್' ಗೆಡ್ಡೆ ಯ ರೂಪವನ್ನೂ, **ವಹತೇ** = ಹೊಂದಿತೋ, **ಮಹತೇ** = ಆ ಅತಿ ದೊಡ್ಡದಾದ, **ಪೋತ್ರಿಣೇ** = ವರಾಹರೂಪಿಯಾದ, **ತೇ** = ನಿನಗೆ, **ನಮಃ** = ನಮಸ್ಕಾರವು.

ಭಗವಂತನು ವರಾಹಾವತಾರಕಾಲದಲ್ಲಿ, ಮೊದಲು ಒಂದು ಸಣ್ಣ ಹಂದಿಯ ರೂಪವನ್ನು ತಾಳಿದರೂ, ಕೊನೆಕೊನೆಯಲ್ಲಿ ಅತಿದೊಡ್ಡದಾದ ರೂಪವನ್ನು ತಾಳಿ ಹಿರಣ್ಯಾಕ್ಷನನ್ನೂ ಕೊಂದು ಭೂಮಿಯನ್ನು ತನ್ನ ಕೋರೆ ಹಲ್ಲುಗಳ ಮಧ್ಯದಲ್ಲಿ, ಸಾಮಾನ್ಯವಾದ ಹಂದಿಯು ಮುಸ್ತಾಫ್ ಗೆಡ್ಡೆಯನ್ನು ಹೊತ್ತುತರುವಂತೆ, ಹೊತ್ತುಕೊಂಡು ಸಮುದ್ರದಿಂದ ಮೇಲೆದ್ದು ನಿಂತನು. ಆಗ ಮಹದಾಕಾರವಾದ ರೂಪವನ್ನು ತಾಳಿದ ವರಾಹ ಸ್ವಾಮಿಗೆ ಕಲ್ಪಾಂತವಾದ ನಾಲ್ಕು ಸಮುದ್ರವೂ ಕೇವಲ, ಅವನ ಗೊರಸುಗಳ ಪ್ರಮಾಣದಷ್ಟಾಯಿತು. ಆ ರೀತಿ ಮಹತ್ ಪ್ರಮಾಣದಿಂದ ಕೂಡಿದ ವರಾಹಸ್ವಾಮಿಯನ್ನು ಧ್ಯಾನಿಸಿ, ಈ ಶ್ಲೋಕದ ಮುಖಾಂತರ ಅವನಿಗೆ ಆಚಾರ್ಯರು ನಮನವನ್ನರ್ಪಿಸಿದ್ದಾರೆ.

**ತಿರುತ್ತವ್ ಪೆರಿಯವರ್ ಶೇರುಂತು ರೈಯಿಲ್ ಶೆರಿವಿಲರ್ಕು**
**ವರುತ್ತಂ ಕ್ಕಳಿನ್ದ ವಳಿ ಅರುಳಿನ್ನ ನಮ್ಮಣ್ಮಹಳಾರ್**
**ಕರುತ್ತೊನ್ರ ಆದಿವರಾಹಂ ಉರೈತ್ತ ಗತಿ ಅರಿವಾರ್**
**ಪೊರುತ್ತುಂ ಕೆಳಿನ್ದು ಉರೈಕ್ಕ ಪೊಯ್ಯಿಲಾಮತಿ ಪೆತ್ತನಮೇ ||**

**ತಿರುತ್ತುಂ** = (ವೇದಾರ್ಥ ನಿರ್ಣಯಮಾಡಿ, ತಪ್ಪು ಹಾದಿಯಲ್ಲಿ ಹೋದ ಚೇತನರನ್ನು) ತಿದ್ದುವುದರಲ್ಲಿ, **ಪೆರಿಯವರ್** = ಹಿರಿಯರಾದ ಮಹರ್ಷಿಗಳು, **ಶೇರುಂ** = ಸೇರುವ, **ತುರೈಯಿಲ್** =(ಮೋಕ್ಷೋಪಾಯವಾದ ಭಕ್ತಿಯೋಗವೆಂಬ) ಸೋಪಾನದಲ್ಲಿ, **ಶೆರಿವಿಲರ್ಕು** = ಪ್ರವೇಶ

ಇಲ್ಲದವರಿಗೆ, **ವರುತ್ತಂ** = ಪ್ರಯಾಸವು, **ಕಳಿನ್ದ** = ಕಳೆದು ಹೋದ, **ವಳಿ** = ದಾರಿಯನ್ನು, (ಉಪಾಯವನ್ನು,) **ಅರುಳ್** = ಕೃಪೆಗೈದು ಹೇಳಬೇಕು, **ಎನ್ರ** = ಎಂದು (ಪ್ರಾರ್ಥಿಸಿದ), **ನಂ** = ನಮ್ಮ, **ಮಣ್ಮಹಳಾರ್** = ಭೂದೇವಿಯು, **ಕರುತ್ತೊನ್ರ** = ಅಭಿಪ್ರಾಯವನ್ನು-ಯುಕ್ತವೆಂದು ಭಾವಿಸಿ, **ಆದಿವರಾಹಂ** = ಆದಿವರಾಹಸ್ವರೂಪಿಯಾದ ಭಗವಂತನು, **ಉರೈತ್ತ** = ಉಪದೇಶಿಸಿದ, **ಗತಿ** = ಪ್ರಪತ್ತಿರೂಪದ ಉಪಾಯವನ್ನು, **ಅರಿವಾರ್** = ಅರಿತವರಾದ ನಮ್ಮ ಆಚಾರ್ಯರು, **ಪೊರುತ್ತಂ**=ಹೊಂದಿಕೆಯಾಗುವಂತೆ, **ತೆಳಿಂದು** = ತಿಳಿದು, **ಉರೈಕ್ಕ** = (ಆ ವರಾಹ ಚರಮಶ್ಲೋಕವೆಂಬ ರಹಸ್ಯ ಶಿಖಾಮಣಿಯನ್ನೂ ಅದರರ್ಥ-ವನ್ನೂ) ಉಪದೇಶಮಾಡಲು, **ಪೊಯ್ಯಿಲಾ** = ಸುಳ್ಳಿಲ್ಲದ (ಮಿಥ್ಯಾ-ಜ್ಞಾನವಲ್ಲದ, ಸತ್ಯಾತ್ಮಕವಾದ), **ಮತಿ** = ಬುದ್ಧಿಯನ್ನು, **ಪೆತ್ತನಂ** = ಪಡೆದೆವು.

ಷಡಂಗಸಹಿತವಾಗಿ ವೇದಾಧ್ಯಯನಮಾಡಿ, 'ಇದಮಿತ್ಥಂ' — ಎಂದು ವೇದಾರ್ಥವನ್ನು ನಿರ್ಣಯಮಾಡಿ, ಅಜ್ಞಾನ ಅನ್ಯಥಾಜ್ಞಾನಾದಿ ಮಿಥ್ಯಾ ಜ್ಞಾನಗಳನ್ನು ಹೋಗಲಾಡಿಸಿ, ಬುದ್ಧಿಯನ್ನು ತಿದ್ದುವ ಸಾಮರ್ಥ್ಯ-ವುಳ್ಳವರು ನಮ್ಮ ಹಿರಿಯರಾದ ಮಹರ್ಷಿಗಳು. ಅವರು, ಸಂಸಾರ ಬಂಧನದಿಂದ ಬಿಡಿಸಿಕೊಂಡು ಪರಮಾತ್ಮನನ್ನು ಪಡೆಯಲು, ಮೋಕ್ಷೋ-ಪಾಯವಾದ, ವೇದಪ್ರತಿಪಾದ್ಯವಾದ ಭಕ್ತಿಯೋಗವನ್ನು ಆಶ್ರಯಿಸಿದರು. ಈ ಭಕ್ತಿಯೋಗವು ಕರ್ಮಯೋಗ – ಜ್ಞಾನಯೋಗ ಸಹಕೃತವಾಗಿ; ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಮತ್ತು ಸಮಾಧಿಗಳೆಂಬ –ಎಂಟು ಅಂಗಗಳಿಂದ ಕೂಡಿದುದಾಗಿ, ಕೊನೆಯಲ್ಲಿ ಪರಭಕ್ತಿ, ಪರಜ್ಞಾನ ಮತ್ತು ಪರಮಭಕ್ತಿಗಳೆಂಬ ಹಂತಗಳಿಂದ ಕೂಡಿರುತ್ತದೆ. ಈ ರೀತಿ ಅನೇಕ ಹಂತದಿಂದ ಈ ಭಕ್ತಿಯೋಗವು ಅನೇಕ ಮೆಟ್ಟಿಲುಗಳಿಂದ ಕೂಡಿದ ಸೋಪಾನಮಾರ್ಗದಂತಿರುತ್ತದೆ. ಮಹರ್ಷಿಗಳೆಲ್ಲರೂ ಈ ಸೋಪಾನ-ವನ್ನು ಹತ್ತಿಯೇ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದರು. ಈ ಭಕ್ತಿ-ಯೋಗಕ್ಕೆ ಅನರ್ಹರಾದವರು, ಈ ಸೋಪಾನದಲ್ಲಿ ಹತ್ತಲಾರರು. ಅಂತಹ-

ವರಿಗೆ ನಿರಾಯಾಸವಾದ ಸುಲಭೋಪಾಯವನ್ನು ಕೃಪೆಮಾಡಿ ತಿಳಿಸಬೇಕೆಂದು, ಭೂದೇವಿಯು ವರಾಹಸ್ವಾಮಿಯಲ್ಲಿ ಪ್ರಾರ್ಥಿಸಿದಾಗ, ಭೂದೇವಿಯ ಅಭಿ-ಪ್ರಾಯವನ್ನು ಯುಕ್ತವಾದುದೆಂದು ಅರ್ಥಮಾಡಿಕೊಂಡ ವರಾಹಸ್ವಾಮಿಯು, ತನ್ನನ್ನು ಶರಣುಹೋಗುವ – ಶರಣಾಗತಿಯ ಮಾರ್ಗವನ್ನು ತಿಳಿಸುವ, ವರಾಹ ಚರಮಶ್ಲೋಕವೆಂದೂ, ರಹಸ್ಯಗಳಲ್ಲಿ ಶ್ರೇಷ್ಠವಾದುದರಿಂದ 'ರಹಸ್ಯ ಶಿಖಾಮಣಿ' –ಎಂದು ಕರೆಯಲಾಗುವ ಎರಡು ಶ್ಲೋಕಗಳನ್ನು ಭೂದೇವಿಗೆ ಉಪದೇಶಿಸಿದನು. ಇದನ್ನು ನಮ್ಮ ಆಚಾರ್ಯರು ತಾವು ಚನ್ನಾಗಿ ಅರಿತು, ನಮಗೆ ಉಪದೇಶ ಮಾಡಿದುದರಿಂದ, ನಾವೂ ಭ್ರಮಾದಿ ಜ್ಞಾನಶೂನ್ಯರಾಗಿ ಪರಮಾತ್ಮನನ್ನು ಪಡೆಯುವ ಹಾದಿಯನ್ನು ಸರಿಯಾದ ರೀತಿಯಲ್ಲಿ ಅರಿತು-ಕೊಂಡು ಬುದ್ಧಿವಂತರಾದೆವು.

'ಸ್ಥಿತೇಮನಸಿ' - ಇತ್ಯಾದಿ— "ಇತಿಹಾಸ ಪುರಾಣಾಭ್ಯಾಂ ವೇದ ಸಮುಪಬ್ರಂಹಯೇತ್ । ಬಿಭೇತ್ಯಲ್ಪಶ್ರುತಾದ್ವೇದಃ ಮಾಮಯಂ ಪ್ರತರಿಷ್ಯತಿ ॥" (ಬಾ.ಅ. ೧-೨೭-೫) ಎನ್ಗಿರಪಡಿಯೇ, ವೇದೋಪ-ಬೃಹ್ಮಣಾರ್ಥಮಾಕ ಪ್ರವೃತ್ತಂಗಳಾನ ಪುರಾಣಂಗಳಿಲ್ ಸಂಕೀರ್ಣ ರಾಜಸ ಪುರಾಣಂಗಳುಕ್ಕು ಕಾರಣದೋಷಮುಮು ಭಾಧಕ ಪ್ರತ್ಯಯ-ಮುಮ್ ಉಂಡಾನಪಡಿಯಾಲೇ, ಇವತ್ತೈ ಆದರಿಕ್ಕುಮವರ್ಹಳ್, "ಇಲಂಗತ್ತಿಟ್ಟ ಪುರಾಣತ್ತೀರುಂ ಶಮಣರುಂ ಶಾಕ್ಕಿಯರುಂ ವಲಿಂದು-ವಾದಶೆಯ್ ವೀರ್ಹಳುಂ" (ತಿರುವಾಳ್ಮೊಳಿ ೪-೧೦-೪) ಎನ್ರುವೇದ ಬಾಹ್ಯಕೋಟಿಯಿಲೇ ಕೋಪ್ಪುಂಡಾರ್ಹಳ್.

"ಸ್ಥಿತೇ ಮನಸಿ" –ಎಂದು ಪ್ರಾರಂಭವಾಗುವ ವರಾಹ ಚರಮ ಶ್ಲೋಕಗಳ ವೈಶಿಷ್ಟ್ಯವನ್ನು ತಿಳಿಸುತ್ತಾರೆ.

ವೇದಗಳು ವಿಷಯಗಳನ್ನು ನೇರವಾಗಿ ತಿಳಿಸುವುದಿಲ್ಲ. 'ಛದಿರ್'– ಆವರಣ (ಹೊದ್ದಿಕೆ) –ಎಂಬ ಧಾತುವಿನಿಂದ 'ಛಂದಸ್' ಶಬ್ದದಿಂದಲೂ ವೇದಗಳನ್ನು ಕರೆಯುತ್ತಾರೆ. 'ಛಂದಸ್' –ಎಂದರೆ ಹೊದ್ದಿಕೆಯಿಂದ ಕೂಡಿದುದು ಎನ್ನುವ ಅರ್ಥವೂ ಸೂಚಿಸಲ್ಪಡುತ್ತದೆ. ಈ ರೀತಿ ವಿಷಯ–

ಗಳನ್ನು ಮರೆಮಾಚಿ ಹೇಳುವುದರಿಂದ ವೇದಗಳನ್ನು ತಮಿಳು ಭಾಷೆಯಲ್ಲಿ 'ಮರೈ' –ಎಂದೂ ಕರೆಯುತ್ತಾರೆ. ವೇದಗಳಲ್ಲಿ ಅರ್ಥವು ಸ್ಪಷ್ಟವಾಗಿ ತಿಳಿಯದಿದ್ದಾಗ, ನಮ್ಮ ಊಹಾಪೋಹಗಳಿಂದ ನಮಗೆ ತೋರಿದ ಹಾಗೆ ಅರ್ಥಮಾಡುವುದರಿಂದ ಅಪಾರ್ಥಗಳುಂಟಾಗುತ್ತವೆ. ಆದುದರಿಂದ, ಸ್ಪಷ್ಟ–ವಾಗಿ ಅರ್ಥವು ತಿಳಿಯದಿದ್ದಲ್ಲಿ ಅದಕ್ಕೆ ಸಂಬಂಧಪಟ್ಟಂತೆ, ಉಪಬೃಂಹಣ–ಗಳೆಂದು ಶಿಷ್ಟರಿಂದ ಪರಿಗಣಿಸಲ್ಪಟ್ಟ ಪುರಾಣೇತಿಹಾಸಗಳಲ್ಲಿರುವ ವಿಷಯಗಳ ಸಹಾಯದಿಂದ, ವೇದದ ಅರ್ಥಗಳನ್ನು ತಿಳಿದುಕೊಳ್ಳಬೇಕು.

"ಉಪಬೃಂಹಣದ ಲಕ್ಷಣವನ್ನು ಭಗವದ್ರಾಮಾನುಜರು ತಮ್ಮ ಶ್ರೀಭಾಷ್ಯಗ್ರಂಥದಲ್ಲಿ ಈರೀತಿ ಹೇಳಿದ್ದಾರೆ: **"ಉಪಬೃಂಹಣಂನಾಮ ವಿದಿತ ಸಕಲವೇದ ತದರ್ಥಾನಾಂ, ಸ್ವಯೋಗ ಮಹಿಮ ಸಾಕ್ಷಾತ್ಕೃತ ವೇದ-ತತ್ತ್ವಾರ್ಥಾನಾಂ ವಾಕ್ಯೈಃ ಸ್ವಾವಗತ ವೇದವಾಕ್ಯಾರ್ಥ ವ್ಯಕ್ತೀಕರಣಮ್"** —ಎಂದು. ಅಂದರೆ, ಪರಿಪೂರ್ಣವಾಗಿ ಅರ್ಥಸಹಿತವಾಗಿ ಎಲ್ಲ ವೇದಗಳನ್ನೂ ಅಧ್ಯಯನಮಾಡಿ, ತನ್ನ ಯೋಗದ (ಉಪಾಸನೆಯ) ಮಹಿಮೆಯಿಂದ ವೇದದತತ್ತ್ವಾರ್ಥಗಳನ್ನು ಸಾಕ್ಷಾತ್ಕರಿಸಿಕೊಂಡು, ತಾನು ಅರಿತ ವೇದವಾಕ್ಯಾರ್ಥಗಳನ್ನು ತನ್ನ ವಾಕ್ಯಗಳಲ್ಲಿ ಸ್ಪಷ್ಟವಾಗಿ ತಿಳಿಸುವುದೇ–'ಉಪಬೃಂಹಣಗಳು' (ಶ್ರೀಭಾಷ್ಯ–ಜಿಜ್ಞಾಸಾಧಿಕರಣ–ಸ್ಮೃತಿಪುರಾಣಘಟ್ಟ) –ಎಂದು. ಈ ಲಕ್ಷಣವನ್ನು, ವ್ಯಾಸವಾಲ್ಮೀಕಿಗಳ ಗ್ರಂಥಗಳಲ್ಲಿ ಮಾತ್ರ ಕಾಣಬಹುದಾದುದರಿಂದ, ಅವರ ಗ್ರಂಥಗಳಾದ ಇತಿಹಾಸ ಪುರಾಣಗಳನ್ನು ಮಾತ್ರ 'ಉಪಬೃಂಹಣ' —ಎಂದು ಕರೆಯುತ್ತಾರೆ.

"ಉಪಬೃಂಹಣಗಳನ್ನು ಅಧ್ಯಯನಮಾಡದೆ, ಕೇವಲ ತನ್ನ ಊಹಾ-ಪೋಹದಿಂದ ವೇದಗಳಿಗೆ ಅರ್ಥಮಾಡಲು ತೊಡಗುವ ವ್ಯಕ್ತಿಗಳನ್ನು ಕಂಡು ವೇದಮಾತೆಯು – ಇವನು ನನ್ನನ್ನು ಹೊಡೆಯುತ್ತಾನೆಂದು ಬೆದರುತ್ತಾಳೆ." –ಎಂದು ಹೇಳಿರುವುದರಿಂದ, ವೇದದ ಸದರ್ಥಗಳನ್ನು ಉಪಬೃಂಹಣಗಳ ಸಹಾಯದಿಂದ ಅರಿತುಕೊಳ್ಳಬೇಕು.

ವೇದೋಪಬೃಂಹಣಗಳಾಗಿ ಹೊರಟ ಪುರಾಣಗಳಲ್ಲಿಯೂ, ಸಂಕೀರ್ಣ,

ರಾಜಸ ಮತ್ತು ತಾಮಸ ಪುರಾಣಗಳು – ಕಾರಣದೋಷದಿಂದ ಕೂಡಿದು–ದಾಗಿ ಬಾಧಕ ಪ್ರತ್ಯಯವುಳ್ಳದುದಾಗಿದೆ. ಕೆಲವು ಬ್ರಹ್ಮ ಕಲ್ಪಗಳು ಸಂಕೀರ್ಣವಾಗಿಯೂ, ಕೆಲವು ಸತ್ತ್ವಪ್ರಚುರವಾಗಿಯೂ, ಮತ್ತೆ ಕೆಲವು ರಜಃ ಪ್ರಚುರವಾಗಿಯೂ ಇರುತ್ತದೆ. ಸತ್ತ್ವಪ್ರಚುರವಾದ ಕಾಲದಲ್ಲಿ ಬ್ರಹ್ಮನಿಂದ ಸೃಷ್ಟವಾದ ಪುರಾಣಗಳು ಸಾತ್ತ್ವಿಕಪುರಾಣಗಳೆನಿಸಿಕೊಳ್ಳುತ್ತವೆ. ರಜಃ ಪ್ರಚುರವಾದ ಕಾಲದಲ್ಲಿ ಸೃಷ್ಟವಾದವು ರಾಜಸಿಕ ಪುರಾಣಗಳೆಂದೂ, ತಮಃ ಪ್ರಚುರವಾದ ಕಾಲದಲ್ಲಿ ಸೃಷ್ಟವಾದವು ತಾಮಸಿಕ ಪುರಾಣಗಳೆಂದೂ ಕರೆಯಲ್ಪಡುತ್ತವೆ. ಇವುಗಳಲ್ಲಿ ಸಾತ್ತ್ವಿಕಪುರಾಣವು ಪ್ರವೃತ್ತಿ ನಿವೃತ್ತಿ ಧರ್ಮಗಳನ್ನೂ, ಅವುಗಳ ಕಾರ್ಯಾಕಾರ್ಯಗಳನ್ನೂ, ಬಂಧ ಮೋಕ್ಷವನ್ನೂ ತಿಳಿಸಿ ವಿಶೇಷವಾಗಿ ಹರಿಯ ಮಾಹಾತ್ಮ್ಯವನ್ನು ತಿಳಿಸುತ್ತವೆ. ರಾಜಸಿಕ ಪುರಾಣಗಳು ಧರ್ಮಾಧರ್ಮಗಳನ್ನು ಸ್ಪಷ್ಟವಾಗಿ ತಿಳಿಸದೆ ವಿಶೇಷವಾಗಿ ಬ್ರಹ್ಮದೇವನ ಮಹಾತ್ಮ್ಯವನ್ನು ತಿಳಿಸುವುವುಗಳಾಗಿರುತ್ತವೆ. ತಾಮಸ ಪುರಾಣಗಳು/ಅಧರ್ಮವನ್ನು ಧರ್ಮವೆಂದೂ ಧರ್ಮವನ್ನು ಅಧರ್ಮವೆಂದೂ ಬೋಧಿಸುತ್ತಾ ಅಗ್ನಿ ಮತ್ತು ಶಿವನ ಮಾಹಾತ್ಮ್ಯವನ್ನು ವಿಶೇಷವಾಗಿ ತಿಳಿಸು-ತ್ತವೆ. ಸಂಕೀರ್ಣಪುರಾಣಗಳು ಎಲ್ಲ ಮಿಶ್ರವಾಗಿರುವುದರಿಂದ ನಿಷ್ಕೃಷ್ಟವಾದ ಯಾವ ಒಂದು ವಿಷಯವನ್ನೂ ತಿಳಿಸುವುದಿಲ್ಲ. ಇವುಗಳಲ್ಲಿ ಸಾತ್ವಿಕಪುರಾಣ ಗಳನ್ನು ಬಿಟ್ಟು ಉಳಿದವು ಸೃಷ್ಟವಾದ ಕಾಲದ ಕಾರಣದಿಂದ ದೋಷಪೂರಿತ-ವಾಗಿರುತ್ತವೆ. ಅದೂ ಅಲ್ಲದೆ ಇವು ಒಂದಕ್ಕೊಂದೂ, ಮತ್ತು ಒಂದೇ ಪುರಾಣದಲ್ಲಿಯೇ ಪ್ರತಿಪಾದಿತವಾದ ವಿಷಯಗಳೂ ಪರಸ್ಪರ ವಿರುದ್ಧವಾಗಿರು–ತ್ತದೆ. ಈ ದೋಷವನ್ನೇ ಭಾಧಕ ಪ್ರತ್ಯಯವೆನ್ನುತ್ತಾರೆ.

ಈ ರಾಜಸ ತಾಮಸ ಪುರಾಣಗಳನ್ನು ಆದರಿಸುವವರು:— **ಇಲಂಗತ್ತಿಟ್ಟಪುರಾಣತ್ತೀರುಂ**=ಲೈಂಗಾದಿ ತಾಮಸಪುರಾಣನಿಷ್ಠರೂ, **ಶಮಣರುಂ**=(ಬಾಹ್ಯಸ್ಮೃತಿನಿಷ್ಠರಾದ) ಶ್ರಮಣರೂ, **ಶಾಕ್ಕಿಯರುಮ್**= ಬೌದ್ಧರೂ, **ವಲಿನ್ದು**=ಶುಷ್ಕತರ್ಕಗಳಿಂದ (ಬಲಿಷ್ಠವಾಗಿ), **ವಾದುಶೆಯ್ದಾ-ರ್ಕಳುಂ**=ವಾದಿಸುವ (ವೈಶೇಷಿಕಾದಿಮತಸ್ಥರೂ)" **-ಎನ್ರು**=ಎಂದು

ಹೇಳಲಾಗುವವರು, ವೇದ ಬಾಹ್ಯಕೋಟೆಯಿಲೇ = ವೇದಬಾಹ್ಯವಾದ ಮತಗಳ ಗುಂಪಿನಲ್ಲಿ, ಕೋಳ್ಪುಂಡಾರ್‌ಹಳ್ = ಅಭಿನಿವೇಶವುಳ್ಳವರು.

**ಸಾತ್ವಿಕ ಪುರಾಣಂಗಳುಕ್ಕು ಕಾರಣದೋಷಮುಮ್ ಬಾಧಕ-ಪ್ರತ್ಯಯಮುಮ್ ಇಲ್ಲಾದಪಡಿಯಾಲುಮ್, ವೈದಿಕಪರಿಗ್ರಹಪ್ರಾಚು-ರ್ಯತ್ತಾಲುಮ್ ಇನ್ವೈಯೇ ಉಪಬೃಹ್ಮಣಂಗಳಿಲ್ ಉಪಾದೇಯ-ತಮಂಗಳ್.**

ಸಾತ್ವಿಕ ಪುರಾಣಗಳಿಗೆ ಕಾರಣದೋಷವೂ, ಪರಸ್ಪರ ವಿರೋಧಾಂಶ-ಗಳಿಂದ ಕೂಡಿದ ಬಾಧಕ ಪ್ರತ್ಯಯವೂ, ಇಲ್ಲದಿರುವುದರಿಂದಲೂ, ಮತ್ತು ವಿಶೇಷವಾಗಿ (ವೈದಿಕಮತದವರಿಂದ ಅಧಿಕವಾಗಿ ಪ್ರಮಾಣವಾಗಿ ಸ್ವೀಕರಿಸಲ್ಪ-ಟ್ಟಿರುವುದರಿಂದಲೂ) ವೈದಿಕಮತವನ್ನು ಅಧಿಕವಾಗಿ ಎತ್ತಿಹಿಡಿದು ತೋರು-ವುದರಿಂದಲೂ, ಈ ಸಾತ್ವಿಕ ಪುರಾಣಗಳೇ ಉಪಬೃಂಹಣಗಳಲ್ಲಿ ಅತಿಶಯವಾದ ಉಪಾದೇಯಗಳಾಗಿರುತ್ತವೆ.

**ಇನ್ವೈತನ್ನಿಲ್ ಶ್ರೀವರಾಹಪುರಾಣಮ್—**
**"ಪಾಶಿತೂರ್ತು ಕಿಡನ್ದ ಪಾರ್ ಮಗಳ್ಕು ಪಂಡೊರುನಾಳ್,**
**ಮಾಶುಡಂಬಿಲ್ ನೀರ್‌ವಾರಾ ಮಾನಮಿಲಾಪ್ಪನ್ರಿಯಾಮ್**
**ಶೇಶುಡೈಯ ದೇವರ್ ತಿರುವರಙ್ಗ ಚ್ಚೆಲ್ವನಾರ್**
**ಪೇಶಿಯಿರಪ್ಪನಗಳ್ ಪೇರ್ಕವುಂ ಪೇರಾವೇ ||**
—ನಾಚ್ಚಿಯಾರ್ ತಿರುಮೊಳಿ (೧೧-೮)

**-ಎನ್ಗಿರಪಡಿಯೇ ಒನ್ರಾಲುಂ ಚಲಿಪ್ಪಿಕ್ಕ ವೊಣ್ಣಾದಪಡಿ ತತ್ವಹಿತ-ಪುರುಷಾರ್ಥಂಗಳಿಲ್ ಸುಪ್ರತಿಷ್ಠಿತಂಗಳಾಯಿರುಕ್ಕುಮ್.**

ಈ ಸಾತ್ವಿಕ ಪುರಾಣಗಳಲ್ಲಿಯೂ ವರಾಹಪುರಾಣವು—

**"ಪಂಡೊರುನಾಳ್** = ಹಿಂದೊಮ್ಮೆ (ಭೂದೇವಿಯನ್ನು ಹಿರಣ್ಯಾ-ಕ್ಷನು ಸಮುದ್ರದಡಿಯಲ್ಲಿ ಅವಿತಿಟ್ಟಿದ್ದಾಗ), **ಪಾಶಿ** = ಪಾಚಿಯು, **ತೂರ್ತು-**

**ಕ್ಕಿಡನ್ದ** = ಸುತ್ತಲೂ ಅಂಟಿಕೊಂಡು ಬಿದ್ದಿದ್ದ, **ಪಾರ್ಮಗಳ್ಕು** = ಭೂದೇವಿಗೋಸ್ಕರ, **ಮಾಶು** = ಕೊಳೆಯಿಂದ ತುಂಬಿದ, **ಉಡಂಬಿನಿಲ್** = ದೇಹದಿಂದ ಕೂಡಿ, **ನೀರ್** = ನೀರು, **ವಾರಾ** = ಹರಿಯುತ್ತಿರುವಂತೆ, **ಮಾನಮಿಲಾ** = ತನ್ನ ಈಶ್ವರಾಭಿಮಾನವನ್ನೂ ಬಿಟ್ಟವನಾಗಿ, **ಪನ್ರಿ-ಯಾಮ್** = ಹಂದಿಯ ಅವತಾರವನ್ನು ಮಾಡಿದ, **ತೇಶುಡೈಯತೇವರ್** = ತೇಜಸ್ಸಿನಿಂದ ಕೂಡಿದ ಭಗವಂತನಾದ, **ತಿರುವರಂಗಚ್ಚೆಲ್ವನಾರ್** = ಶ್ರೀರಂಗದ ಸ್ವಾಮಿಯಾದ ಅಳಿಹಿಯಮಣವಾಳನು, **ಪೇಶಿಯಿರುಪ್ಪನಹಳ್** = (ವರಹಾವತಾರಕಾಲದಲ್ಲಿ ಭೂದೇವಿಗೆ) ಉಪದೇಶಿಸಿದ ವರಾಹ ಚರಮ ಶ್ಲೋಕವು, **ಪೇರ್ಕವುಂ ಪೇರಾ** = ಬಾಧಿಸಬೇಕೆಂದರೂ ಬಾಧಿತವಾಗು-ವುದಿಲ್ಲಾ".

ಹಿರಣ್ಯಾಕ್ಷನು ಭೂಮಿತಾಯಿಯನ್ನು ಸಮುದ್ರದಡಿಯಲ್ಲಿ ಅವಿತಿಟ್ಟಾಗ, ಆಕೆಯು ಒಂದೇ ಕೆಸರಿನಿಂದ ಕೂಡಿದ ನೀರಿನಲ್ಲಿ **ಪಾಚಿಯಿಂದ ಆವೃತವಾದ** ದೇಹದಿಂದ ಕೂಡಿದವಳಾಗಿ ಬಿದ್ದಿದ್ದಳು. ಆಗತಾನೆ ಸೃಷ್ಟಿಯಲ್ಲಿ ತೊಡಗಿದ ಬ್ರಹ್ಮದೇವನು, ಪರಮಾತ್ಮನಲ್ಲಿ ಮೊರೆಯಿಟ್ಟನು. ಆಗ ಭಗವಂತನು ಆಶ್ರಿತರ ಸಂರಕ್ಷಣೆಗೋಸ್ಕರ ತನ್ನ ಈಶ್ವರಾಭಿಮಾನವನ್ನೂ ತೊರೆದವನಾಗಿ ಒಂದು ಹಂದಿಯ ರೂಪವನ್ನು ಪಡೆದವನಾಗಿ, ತನ್ನ ದೇಹದಲ್ಲಿ ನೀರು ಹರಿಯುತ್ತಿರು-ವಂತೆಯೇ ಸಮುದ್ರವನ್ನು ಪ್ರವೇಶಿಸಿ, ಹಿರಣ್ಯಾಕ್ಷನನ್ನು ಕೊಂದು, ತಾನೂ ಕೆಸರಿನಲ್ಲಿ ಪ್ರವೇಶಿಸಿ, ಪಾಚಿಕಟ್ಟಿಕೊಂಡು ಬಿದ್ದಿದ್ದ ಭೂದೇವಿಯನ್ನು ಮೇಲೆತ್ತಿ ಉದ್ಧರಿಸಿದನು. ಮತ್ತು ಏಕಾಂತದಲ್ಲಿ ಭೂದೇವಿಯು, ಮುಂದೆ ತನ್ನಲ್ಲಿ ಜನ್ಮವೆತ್ತುವ ಮಕ್ಕಳಿಗೋಸ್ಕರ, ಪರಮಾತ್ಮನನ್ನು ಪಡೆಯಲು ಲಘೂಪಾಯವನ್ನು ಹೇಳಬೇಕೆಂದು ಪ್ರಾರ್ಥಿಸಿದ ಕೂಡಲೆ – 'ಶರಣಾಗತಿ' –ಎಂಬ ಉಪಾಯವನ್ನು ತಿಳಿಸುವ "ಚರಮ ಶ್ಲೋಕ"ವನ್ನೂ ಉಪದೇಶಿ-ಸಿದನು.

ಈ ಸಂದರ್ಭದಲ್ಲಿ ಭಗವಂತನ ಎರಡು ಗುಣಗಳು ಪ್ರಧಾನವಾಗಿ ಪ್ರಕಾಶಕ್ಕೆ ಬರುತ್ತದೆ. ಮೊದಲನೆಯದಾಗಿ, ಶರಣಾಗತರ ಸಂರಕ್ಷಣೆ-

ಗೋಸ್ಕರ ಪರಮಾತ್ಮನು ತನ್ನ ಈಶ್ವರಾಭಿಮಾನವನ್ನೂ ತೊರೆದು, ನಮ್ಮ-ದೃಷ್ಟಿಯಿಂದ ಅಸಹ್ಯವೆಂದು ತೋರುವ, ಎಷ್ಟೇ ಅಸಾಧ್ಯವಾದ ಕೆಲಸವಾದರೂ ಮಾಡಿ ಶರಣಾಗತರನ್ನು ರಕ್ಷಿಸುತ್ತಾನೆ. ಎರಡನೆಯದಾಗಿ, ತನ್ನ ಪ್ರಿಯ-ಳಾದ ಭೂದೇವಿಯು ಒಂದೇ ಪಾಚಿಯಿಂದ ಕೆಸರಿನಲ್ಲಿ ಬಿದ್ದಿದ್ದಾಗ, ಆಕೆ-ಯನ್ನು ಉದ್ಧರಿಸುವ ಸಲುವಾಗಿ ತಾನೂ ಕೆಸರಿನಲ್ಲಿ ಮುಳುಗಿ ಮಾಲಿನ್ಯದಿಂದ ಕೂಡಿದ ದೇಹದಿಂದ ಕೂಡಿದ್ದರೂ ಆಕೆಯನ್ನು ಭೋಗ್ಯಭೂತವಾಗಿ ತನ್ನ ಕೋರೆಹಲ್ಲಿನ ಮೇಲೆ ಕುಳ್ಳಿರಿಸಿಕೊಂಡು ಬಂದನು. ಪ್ರಿಯ ಪ್ರೇಯಸಿಯ-ರಲ್ಲಿ ಪರಸ್ಪರ ಪ್ರೇಮಬಂಧವು ಕೂಡಿದ್ದರೆ, ಮಾಲಿನ್ಯಾದಿಗಳಿಂದ ಕೂಡಿದ್ದರೂ, ಇತರರಿಗೆ ಅಸಹ್ಯವಾಗಿ ಕಂಡುಬಂದರೂ, ಆ ಪ್ರೇಮಿಗಳಿಗೆ ಪರಸ್ಪರ ಒಬ್ಬರ-ದೇಹವು ಮತ್ತೊಬ್ಬರಿಗೆ ಭೋಗ್ಯ ಭೂತವೇ ಆಗಿರುತ್ತದೆ. ಅಂತೆಯೇ ಶರಣಾಗತರಾದ ಚೇತನರೆಲ್ಲರೂ ಪರಮಾತ್ಮನಿಗೆ, ನಮ್ಮ ಆಚಾರ್ಯರು-ಗಳಿಂದ ಧಾರೆಯೆರೆದು ಕೊಡಲ್ಪಟ್ಟವರಾಗಿ, ಒಬ್ಬೊಬ್ಬರೂ ಭಗವಂತನ ಪತ್ನೀಸ್ಥಾನದಲ್ಲಿದ್ದಾರೆ. ಶರಣಾಗತರೂ, ಭೂದೇವಿಯಂತೆಯೇ, ಅವನಲ್ಲಿ ವಿಶೇಷವಾದ ಪ್ರೇಮವನ್ನು ತಾಳಿ, ಅವನ ಕೈಂಕರ್ಯದಲ್ಲಿ ಆಸಕ್ತರಾಗಿ, ಸಂಸಾರ ಸಾಗರದಲ್ಲಿ ಪುಣ್ಯ ಪಾಪ ಸಮ್ಮಿಶ್ರಣವಾದ ಕೆಸರಿನಲ್ಲಿ ಮುಳುಗಿ, ಪಾಂಚಭೌತಿಕ ದೇಹವೆಂಬ ಪಾಚಿಯಿಂದ ಸುತ್ತುವರಿಯಲ್ಪಟ್ಟು ಬಿದಿದ್ದರೂ, ಆತನನ್ನು ಕಾಣಬೇಕೆಂದು ವಿಶೇಷವಾಗಿ ಮೊರೆಯಿಟ್ಟರೆ, ನಮ್ಮನ್ನು ಈ ಸಾಗರದಿಂದ ಉದ್ಧರಿಸುವ ಸಲುವಾಗಿ ಪರಮಾತ್ಮನು, ತಾನು ರಾಮಕೃಷ್ಣಾದಿ ವಿಭವರೂಪದಲ್ಲಿಯೋ, ಶ್ರೀರಂಗಾದಿ ಕ್ಷೇತ್ರಗಳಲ್ಲಿ ಬಿಜಯಮಾಡಿಸಿರುವ ಅರ್ಚಾಮೂರ್ತಿ ಸ್ವರೂಪದಲ್ಲಿಯೋ, ಅಥವ ಪ್ರೇಯಸಿಯಾದ ಒಬ್ಬೊಬ್ಬ ಶರಣಾಗತನಿಗೂ ಏಕಾಂತದಲ್ಲಿ ಅವರವರ ಇಷ್ಟದಂತೆ ಸೇವೆ ನೀಡಿ, ಸಂಸಾರ ಸಾಗರದಿಂದುದ್ಧರಿಸಲು, ಈ ಪಾಂಚಭೌತಿಕ ದೇಹದಿಂದ ಕೂಡಿರುವಲ್ಲಿಯೋ, ಅವರವರ ಹೃದಯಕಮಲದಲ್ಲಿ ಅಂತರ್ಯಾಮ್ಯವತಾರ ಸ್ವರೂಪದಲ್ಲಿ-ಅವ-ತರಿಸಿ, (ತನ್ನ ಪರಸ್ವರೂಪದಿಂದ ಇಳಿದುಬಂದು) ತನ್ನ ಸ್ವಾಭಿಮಾನಗಳನ್ನು ಬಿಟ್ಟು; ನಾನಾತರಹದ ಮಾಲಿನ್ಯದಿಂದ ಕೂಡಿದ ದೇಹದಿಂದಿರುವ ಶರಣಾ-

ಗತರ ಭಕ್ತಿ (ಪ್ರೇಮ) ಭರಿತವಾದ ಸೇವೆಯನ್ನು ಭೋಗ್ಯತಮವಾಗಿ ಸ್ವೀಕ-ರಿಸಿ ಅನುಭವಿಸುತ್ತಾನೆ. –ಎಂಬ ಅಂಶವೂ ತೋರಿಬರುತ್ತದೆ.

**ಎನ್ಗಿರಪಡಿಯೇ** = ಈ ರೀತಿ ಮೇಲಿನ ಪದ್ಯ(ಪಾಶುರ)ವಲ್ಲಿ ಹೇಳಿ-ದಂತೆಯೇ, **ಒನ್ರಾಲುಂ** = ಯಾರೊಬ್ಬರಿಂದಲೂ, **ಚಲಿಪ್ಪಿಕ್ಕ ಒಣ್ಣಾದ-ಪಡಿ** = ಅಲುಗಾಡಿಸಲೂ ಸಾಧ್ಯವಿಲ್ಲದಂತೆ, **ತತ್ವಹಿತಪುರುಷಾರ್ಥಂಗಳಿಲ್** = ತತ್ವಹಿತ ಪುರುಷಾರ್ಥಗಳನ್ನು ತಿಳಿಸುವಲ್ಲಿ, ಈ ವರಾಹಪುರಾಣವು, **ಸುಪ್ರತಿಷ್ಠಿತಂಗಳಾಯಿರುಕ್ಕುಮ್** = ಪ್ರತಿಷ್ಠಿತಗಳಾಗಿರುತ್ತವೆ.

ಬದ್ಧ ಚೇತನರೆಲ್ಲರೂ ಸಂಸಾರ ಸಾಗರದಿಂದ ಬಿಡುಗಡೆ ಹೊಂದಲು ಸ್ವತಃ ಅಸಮರ್ಥರೆಂದೂ, ಅವರಿಗೆ ಮೋಕ್ಷವನ್ನನುಗ್ರಹಿಸುವ ಸಾಮರ್ಥ್ಯವು ಪರಮಾತ್ಮನೊಬ್ಬನಿಗೇ ಇರುವುದೆಂದೂ, ಅವನು ಶರಣಾಗತ ಸಂತ್ರಾಣನನೆಂದು ಅವನು ಭಕ್ತ ಪರಾಧೀನನಾಗಿ ಭಕ್ತರನ್ನನುಗ್ರಹಿಸುವ ಸಲುವಾಗಿಯೇ ಅವತಾರಾದಿಗಳನ್ನು ಎತ್ತುವನೆಂದೂ ಅವನೇ ನಮಗೆ ಸ್ವಾಮಿ – ಎಂಬ ತತ್ವ-ವನ್ನೂ, ಅವನನ್ನು ಪಡೆಯಲು ಅವನ ಚರಣಗಳಲ್ಲಿ ಶರಣಾಗತಿ ಮಾಡುವು-ದನ್ನು ಬಿಟ್ಟರೇ ಬೇರೆ ಉಪಾಯವಿಲ್ಲವೆಂಬ – ಹಿತವನ್ನೂ, ಅವನನ್ನು ಪಡೆ-ಯುವುದರಿಂದಲೇ ನಮಗೆ ಸರ್ವವಿಧವಾದ ಆನಂದವೂ ಲಭಿಸುವುದರಿಂದ, ಅವನನ್ನು ನಾವು ಬೇಡಿ ಪಡೆಯಬೇಕೆಂಬ ಪುರುಷಾರ್ಥವನ್ನೂ – ದೃಢವಾಗಿ ನಮ್ಮ ಮನಸ್ಸಿನಲ್ಲಿ ಮನದಟ್ಟಾಗುವಂತೆ, ಶ್ರೀ ವರಾಹಪುರಾಣವು, ಶ್ರೀ ವರಾಹಾವತಾರ ಸನ್ನಿವೇಶದ ಲೀಲಾಕೃತ್ಯಗಳು ಮತ್ತು ಅವನ ಉಪದೇಶದಿಂದನಮಗೆ ತಿಳಿಸುವುದರಿಂದ, ಸಾತ್ವಿಕ ಪುರಾಣಗಳಲ್ಲಿಯೂ ವರಾಹ ಪುರಾಣವು ಉಪಬೃಂಹಣಗಳಲ್ಲಿ ಉಪಾದೇಯತಮವಾಗಿರುತ್ತದೆ.

**ಇದುಕ್ಕು ವಕ್ತೃವೈಲಕ್ಷಣ್ಯತ್ತಾಲುಂ ಶ್ರೋತೃವೈಲಕ್ಷಣ್ಯತ್ತಾಲುಂ ಅತಿಶಯಮುಂಡು. ವಕ್ತೃವೈಲಕ್ಷಣ್ಯಂ ಏದೆನ್ನಿಲ್ ? — ಇತುಕ್ಕು-ವಕ್ತಾವಾನ ಜ್ಞಾನಪ್ಪಿರಾನ್ ಭ್ರಮವಿಪ್ರಲಂಭ ಪ್ರಮಾದಾಶಕ್ತಿ ಸಂಭಾವನೈಯ್ಯೈ ಉಡೈಯ ಕ್ಷೇತ್ರಜ್ಞರ್ಕೈ ಪ್ಪೋಲನ್ರಿಕ್ಕೇ, ಸ್ವತಃ**

ಸರ್ವಜ್ಞನಾಕ್ಕೈಯಾಲೇ, ಇವನುಕ್ಕು ಭ್ರಮುಮುಂ ಪ್ರಮಾದಮುಮ್ ಕೂಡಾದು. ಪ್ರತ್ಯುಪಕಾರಾದಿ ನಿರಪೇಕ್ಷ–ಪರಮಕಾರುಣಿಕನಾಕ್ಕೈ–ಯಾಲೇ ಆಶ್ರಿತರ್ ತಿರತ್ತಿಲ್ ಇವನುಕ್ಕು ವಿಪ್ರಲಂಭಕತ್ತ್ವಂ ಘಟಿಯಾತು. "ಸರ್ವಜ್ಞಃ ಸರ್ವಕೃತ್ ಸರ್ವಶಕ್ತಿಃ ಜ್ಞಾನ ಬಲರ್ದ್ಧಿ–ಮಾನ್" — ಇತ್ಯಾದಿ ಕಳಿರ್ಪಡಿಯೇ ಸರ್ವಶಕ್ತನಾಕ್ಕೈಯಾಲೇ ಇವನುಕ್ಕು ಅಶಕ್ತಿ ಪ್ರಸಂಗಮುಮ್ ಇಲ್ಲೈ.

ಒಂದು ವಿಷಯವನ್ನು ಹೇಳುವ ವ್ಯಕ್ತಿಯು, ತಾನು ಹೇಳುವ ವಿಷಯ–ವನ್ನು ತಾನು ಸರಿಯಾಗಿ ಮೊದಲು ಅರಿತಿರಬೇಕು. ಒಂದು ವಿಷಯವನ್ನು ಮತ್ತೊಂದು ವಿಷಯವಾಗಿ ಗ್ರಹಿಸುವಿಕೆಯೇ 'ಭ್ರಮೆ', ತಾನು ವಿಷಯ–ವನ್ನು ಹೇಳುವ ವ್ಯಕ್ತಿಯಿಂದ ತನಗೆ ಪ್ರತಿಯಾಗಿ ಬರುವ ಉಪಕಾರಾದಿ ಗಳಿಗನುಗುಣವಾಗಿ ಕೆಲವೆಡೆ ಸ್ಪಷ್ಟವಾಗಿ ಪೂರ್ಣವಾಗಿ ತಿಳಿಸುವಿಕೆ, ಕೆಲವೆಡೆ ಅಸ್ಪಷ್ಟವಾಗಿ ಹೇಳುವಿಕೆಯೇ-'ವಿಪ್ರಲಂಭ', ಎಚ್ಚರಿಕೆ ತಪ್ಪಿ-ತನಗೆ ತೋರಿದಂತೆ ಹೇಳುವಿಕೆಯೇ – 'ಪ್ರಮಾದ', ವಿಷಯವನ್ನು ಪೂರ್ಣವಾಗಿ ಅರ್ಥಮಾಡಿ ಕೊಳ್ಳುವ ಅಥವಾ ವಿಷಯವನ್ನು ಪ್ರತಿಪಾದನೆಮಾಡಿ ತಿಳಿಸುವ ಸಾಮರ್ಥ್ಯ–ವಿಲ್ಲದಿರುವಿಕೆಯೇ – 'ಅಶಕ್ತಿ'. ವಿಷಯವನ್ನು ಹೇಳುವ ವಕ್ತಾವಾದವನು ಈ ಮೇಲೆ ಹೇಳಿದ ಭ್ರಮೆ, ವಿಪ್ರಲಂಭ, ಪ್ರಮಾದ, ಅಶಕ್ತಿ – ಎಂಬ ನಾಲ್ಕು ದೋಷಗಳಿಂದ ದೂರನಾಗಿರಬೇಕು. ಈ ರೀತಿ ವಕ್ತಾವಾದವನು ದೋಷ–ರಹಿತನಾಗಿ, ವಿಶೇಷವಾದ ಗುಣಗಳಿಂದ ಕೂಡಿದವನಾಗಿ ವಿಲಕ್ಷಣನಾಗಿದ್ದು ವಿಷಯವನ್ನು ಹೇಳಿದರೆ, ಹೇಳಲ್ಪಟ್ಟ ವಿಷಯದ ವಕ್ತಾ ವಿಲಕ್ಷಣವಾಗಿರು–ವುದರಿಂದ, ಆ ವಿಷಯವು ವಕ್ತೃವೈಲಕ್ಷಣ್ಯದಿಂದ ಕೂಡಿದೆ – ಎನ್ನುತ್ತಾರೆ. ಅಂತೆಯೇ ವಿಷಯವನ್ನು ಕೇಳುವ ವ್ಯಕ್ತಿಯು – ವಿಷಯದಲ್ಲಿ ತಿಳಿದುಕೊಳ್ಳ ಬೇಕೆಂಬ ಆಸಕ್ತಿ, ಸರಿಯಾಗಿ ಅರಿತು ಗ್ರಹಿಸುವಿಕೆ, ಅರಿತುದನ್ನು ಮರೆಯದಂತೆ ಧರಿಸುವಿಕೆಯೇ ಮೊದಲಾದ ಗುಣಗಳಿಂದ ಕೂಡಿ, ಶ್ರೋತಾ ವಿಲಕ್ಷಣವಾಗಿರುವು ದರಿಂದ – ಕೇಳಲ್ಪಟ್ಟ ವಿಷಯವು ಶ್ರೋತೃವೈಲಕ್ಷಣ್ಯದಿಂದ ಕೂಡಿದೆ ಎನ್ನುತ್ತಾರೆ.

ಪ್ರಕೃತ (ಇದುಕ್ಕು) = ಈ ವರಾಹ ಚರಮಶ್ಲೋಕಕ್ಕೆ ವಕ್ತೃವೈಲಕ್ಷಣ್ಯದಿಂದಲೂ ಶ್ರೋತೃವೈಲಕ್ಷಣ್ಯದಿಂದಲೂ ಅತಿಶಯವುಂಟು. ವಕ್ತೃವೈಲಕ್ಷಣ್ಯವು (ಏದೆನ್ನಿಲ್) ಹೇಗೆಂದರೆ- ಈ ಶ್ಲೋಕಗಳಿಗೆ ವಕ್ತೃವಾದ (ಜ್ಞಾನಪ್ಪಿರಾನ್) ವರಾಹಸ್ವಾಮಿಯು, ಭ್ರಮವಿಪ್ರಲಂಭ ಪ್ರಮಾದಾಶಕ್ತಿಗಳನ್ನು ಹೊಂದಿರುವ ಪ್ರಾಕೃತಿಕ ದೇಹದಿಂದ ಕೂಡಿದ (ಕ್ಷೇತ್ರಜ್ಞರ್) ಬದ್ಧ ಚೇತನರಂತಿಲ್ಲ. ಇವನು ಸ್ವತಃ ಸರ್ವಜ್ಞನಾದುದರಿಂದ ಇವನಲ್ಲಿ ಭ್ರಮವೂ ಪ್ರಮಾದವೂ ಸಂಭವಿಸುವುದಿಲ್ಲ. ಪ್ರತ್ಯುಪಕಾರವನ್ನು ಎದಿರುನೋಡದೇ, ಇತರರ ದುಃಖವನ್ನು ದೂರಮಾಡಬೇಕೆಂಬ ಆಸೆಯಿಂದ (ಪರ ದುಃಖ ನಿರಾಚಿಕೀರ್ಷಾ ದಯಾ) ಕೂಡಿದ, ಅತಿಶಯವಾದ ಕರುಣೆ ಅಥವಾ ದಯಾಗುಣವನ್ನು ಹೊಂದಿರುವುದರಿಂದ ಆಶ್ರಿತರ ವಿಷಯದಲ್ಲಿ ಇವನಿಗೆ ವಿಪ್ರಲಂಭಕತ್ವವು ಉಂಟಾಗುವುದಿಲ್ಲ. **ಸರ್ವಜ್ಞಃ** = ಚರಾಚರ ಪ್ರಕೃತಿಯು ಮತ್ತು ಜೀವರುಗಳೆಲ್ಲರ ಸರ್ವ ವಿಧವಾದ ಜ್ಞಾನವನ್ನೂ ಹೊಂದಿರುವನು, **ಸರ್ವಕೃತ್** = ಸೃಷ್ಟಿ ಸ್ಥಿತಿಲಯಗಳಿಗೆ ಕಾರಣನಾಗಿರುವವನು, **ಸರ್ವಶಕ್ತಿಃ** = ಅಘಟಿತ ಘಟನಾಸಾಮರ್ಥ್ಯವೇ ಮೊದಲಾದ ಸರ್ವವಿಧವಾದ ಶಕ್ತಿಯನ್ನೂ ಹೊಂದಿರುವವನು, **ಜ್ಞಾನಬಲರ್ದ್ಧಿಮಾನ್** = ಜ್ಞಾನ, ಬಲ, ಮುಂತಾದ ಕಲ್ಯಾಣಗುಣಗಳಿಂದ ಕೂಡಿರುವವನು – ಇತ್ಯಾದಿಯಾಗಿ ವಿಷ್ಣುಪುರಾಣಾದಿಗಳಲ್ಲಿ ಸ್ತುತಿಸಲ್ಪಟ್ಟಿರುವಂತೆಯೇ ಆ ಭಗವಂತನು ಸರ್ವಶಕ್ತನಾದುದರಿಂದ, ಇವನಲ್ಲಿ 'ಅಶಕ್ತಿ' –ಎಂಬ ದೋಷದ ಪ್ರಸಂಗವು ಸಂಭವಿಸುದಿಲ್ಲ.

**ಇವ್ವವತಾರತ್ತುಕ್ಕು ಇವರ್ ತನ್ನುಡೈಯ ಅವಸ್ಥಾಂತರಂಗಳಿಲುಂ ಕಾಟ್ಟಿಲ್ ಏತ್ತಮುಂಡು. ಎಙ್ಗನೇ ಎನ್ನಿಲ್ ? - ಇವ್ವವತಾರಂ ಒರುವಳಿಯಾಲೇ ಕರೈಯೇರಿನವರ್ಕಳೈ ಕೂಟ್ಟಿಕ್ಕೊಂಡು ಇರುಕ್ಕಿರವಳವೇಯಾನ ಪರರೂಪಂಪೋಲ್ ಅನ್ರಿಕ್ಕೇ, ಅಳುನ್ದಿನವರ್‌ಕಳೈ ಕರೈಯಾದಪಡಿ ಅಡುತ್ತು ಕರೈಯೇರ ವಿಡುಂಪಡಿಯಾಯಿರುಕ್ಕುಮ್.**

**ಇವ್ವತಾರತ್ತುಕ್ಕು** = ಈ ವರಾಹಾವತಾರಕ್ಕೆ, **ಇವರ್** = ಇವನ, **ತನ್ನುಡೈಯ** = ತನ್ನದೇ ಆದ, **ಅವಸ್ಥಾಂತರಂಗಳಿಲುಂಕಾಟ್ಟಿಲುಂ** =

ಇತರ ಸ್ವರೂಪಗಳಿಗಿಂತಲೂ, **ಏತ್ತಮುಂಡು** = ವೈಶಿಷ್ಟ್ಯವುಂಟು. **ಎಙ್ಙನೇ ಎನ್ನಿಲ್** = ಹೇಗೆಂದರೆ, — **ಇವ್ವವತಾರಂ** = ಈ ವರಾಹಾ ತಾರವು, **ಒರುವಳಿಯಾಲೇ** = (ಭಕ್ತಿ ಅಥವಾ ಪ್ರಪತ್ತಿ-ಎಂಬ) ಯಾವು-ದಾದರೊಂದು ಮಾರ್ಗದಿಂದ **ಕರೈಯೇರಿನವರ್ಗಳೈ** = (ಸಂಸಾರ ಸಾಗರದ ಆಚೆ) ದಡವನ್ನು (ಶ್ರೀವೈಕುಂಠವನ್ನು) ಸೇರಿರುವ (ನಿತ್ಯ) ಮುಕ್ತಾತ್ಮ-ರನ್ನೂ, **ಕೂಟ್ಟಿಕೊಂಡು** = ಕೂಡಿಕೊಂಡು, **ಇರುಕ್ಕಿರವಳವೇಯಾನ** = ಇರುವ ಸ್ಥಿತಿಯಲ್ಲಿರುವ, **ಪರರೂಪಂ ಪೋಲ್** = ಪರಸ್ವರೂಪದಂತೆ, **ಅನ್ರಿಕ್ಕೇ** = ಇಲ್ಲದೆ, **ಅಳುಂದಿನವರ್ಗಳೈ** = (ಸಂಸಾರ ಸಾಗರದಲ್ಲಿ) ಮುಳುಗಿರುವ (ಬದ್ಧ ಚೇತನರನ್ನು), **ಕರೈಯಾದ ಪಡಿ** = ಅವರಿಗೆ ಯಾನ ಪ್ರಮಾದವೂ ಸಂಭವಿಸದಂತೆ, **ಅಡುತ್ತು** = ಮೇಲೆತ್ತಿಕೊಂಡು **ಕರೈಯೇರವಿಡುಂಪಡಿ** = ದಡವನ್ನು ಸೇರಿಸುವಂತೆ, **ಇರುಕ್ಕುಮ್** = ಇರುತ್ತದೆ.

ಪರಮಾತ್ಮನ ಈ ವರಾಹಾವತಾರಕ್ಕೆ, ಅವನ ಸ್ವರೂಪಗಳಾದ ಪರ, ವ್ಯೂಹ, ವಿಭವ, ಹಾರ್ದ ಮತ್ತು ಅರ್ಚೆಯೆಂದು ಹೇಳಲಾಗುವ, ಇತರ ಅವಸ್ಥೆಗಳಿಗಿಂತಲೂ ವೈಶಿಷ್ಟ್ಯ ಉಂಟು. ಹೇಗೆಂದರೆ, ಪರಮಾತ್ಮನ ಪರ-ಸ್ವರೂಪವು ಶ್ರೀವೈಕುಂಠಲೋಕದಲ್ಲಿ ಮಾತ್ರ ಸಾಕ್ಷಾತ್ಕೃತವಾಗುತ್ತದೆ. ಅಲ್ಲಿ ನಿತ್ಯರಿಂದಲೂ, ಮತ್ತು ಮುಕ್ತಾತ್ಮರಿಂದಲೂ ಮಾತ್ರ ಭಗವಂತನು ಸೇವಿ-ಸಲ್ಪಡುತ್ತಾನೆ. ಅಂದರೆ, ಕರ್ಮಬಂಧದಲ್ಲಿಲ್ಲದ ಕೇವಲ ಶುದ್ಧರಾದ ಚೇತನ-ರಿಂದ ಕೂಡಿಕೊಂಡಿರುತ್ತಾನೆ. ಆರೀತಿಯಾದ ಪರಸ್ವರೂಪದಿಂದ ಬದ್ಧ ಚೇತ-ನರಿಗೇನೂ ಪ್ರಯೋಜನವಿಲ್ಲ. ಸಂಸಾರ ಸಾಗರವನ್ನು ದಾಟಿ, ಶ್ರೀವೈಕುಂಠ-ಲೋಕವೆಂಬ ದಡವನ್ನು ಸೇರಿರುವ ಚೇತನರಿಂದ ಕೂಡಿದ ಆ ಪರಸ್ವರೂಪ-ದಂತಿಲ್ಲದೆ, ಈ ವರಾಹಾವತಾರವು, ಸಂಸಾರ ಸಾಗರದಲ್ಲಿಯೇ ಮುಳುಗಿರುವ-ವರನ್ನು ಅವರಿಗೆ (ಪುಣ್ಯಪಾಪರೂಪವಾದ ಅಲೆಗಳಿಂದಲೂ, ಜನ್ಮ ಮರಣ-ಗಳೆಂಬ ಸುಳಿಗಳಿಂದಲೂ) ಸ್ವಲ್ಪವೂ ತೊಂದರೆಯಾಗದಂತೆ ಮೇಲೆತ್ತಿಕೊಂಡು ಬಂದು ಶ್ರೀವೈಕುಂಠವೆಂಬ ಆಚೆಯ ದಡವನ್ನು ಸೇರಿಸುವುದಾಗಿರುತ್ತದೆ.

ವ್ಯೂಹಂಗಳ್ಳೈಪ್ಪೋಲೇ ಭಕ್ತರಾನವರ್‌ಹಳ್ ಆಶ್ರಯಿಕ್ಕ ಮೇಲಾನ ನಿರುತ್ತಿಲಿರುಕ್ಕುಕ್ಕೈಯನ್ರಿಕ್ಕೆ. [1]"ಪಾರ್‌ವಣ್ಣನುಡಮಂಗ್ಯೈ-ಪ್ಪತ್ತ" ರೆನ್ಗಿರಪಡಿಯೇ, ಆಶ್ರಿತರ್ ಪಕ್ಕಲ್‌ತನ್ ಭಕ್ತಿತ್ತೋನ್ರ [2]"ಕೇಳಲಾಯ್‌ಕ್ಕೀಳ್‌ಪುಕ್ಕಿಡನ್ದಿಡು" - ಎನ್ಗಿರಪಡಿಯೇ, ಅವರ್‌ಕಳ್ ಇರುನ್ದಕೀಳ್ ನಿಲತ್ತಿಲುಮ್ ಶೆನ್ರು [2]"ತಡಮ್ ಪೇರುನ್ತೋಳಾರ್‌ತಳುವುಂ"–ಎನ್ರುಂ ಪಡಿಯಿರುಕ್ಕುಮ್.

ಈರೀತಿ, ವ್ಯೂಹಂಗಳ್ಳೈ ಪ್ಪೋಲೆ = ವ್ಯೂಹಸ್ವರೂಪಗಳಂತೆ, ಭಕ್ತ-ರಾನವರ್‌ಹಳ್ = ಭಕ್ತಿಯೋಗನಿಷ್ಠರು ಮಾತ್ರ, ಆಶ್ರಯಿಕ್ಕ ಮೇಲಾನ = ಆಶ್ರಯಿಸಲು ಯೋಗ್ಯವಾದ, ನಿಲತ್ತಿಲ್ = ಸ್ಥಿತಿಯಲ್ಲಿ ಇರುಕ್ಕುಕ್ಕೈ ಅನ್ರಿಕ್ಕೆ = ಇರುವ ಸ್ಥಿತಿಯಲ್ಲಿಲ್ಲದೆ, "ಪಾರ್ವಣ್ಣನುಡಮಂಗ್ಯೈ ಪ್ಪತ್ತ"-ಎನ್ಗಿರಪಡಿಯೇ = "ಹಾಲಿನ ಬಣ್ಣವುಳ್ಳ ಪರಮಾತ್ಮನಾದ ಶ್ರೀತವರಾಹ-ನೋಡನೆ ಭೂದೇವಿಯು ಕೂಡಿದಂತೆ" —ಎಂದು ಹೇಳಿದಂತೆಯೇ, ಆಶ್ರಿತರ್ ಪಕ್ಕಲ್ = ತನ್ನನ್ನು ಆಶ್ರಯಿಸುವವರ ಪಕ್ಕದಲ್ಲಿ, ತನ್ ಭಕ್ತಿತ್ತೋನ್ರ = ತನ್ನ ವಿಷಯದಲ್ಲಿ ಭಕ್ತಿಯು ಅವರಿಗೆ ಉಂಟಾಗುವಂತೆ (ತೋರುವಂತೆ)

[1] ಈ ಸನ್ನಿವೇಶದಲ್ಲಿ ಆಚಾರ್ಯರು ಉದ್ಧರಿಸಿರುವ "ಪಾರ್ವಣ್ಣಮಡ-ಮಂಗ್ಯೈ ಪತ್ತರ್" ಪಾಶುರದ ಪೂರ್ಣರೂಪ ಇಂತಿದೆ :

ಕಾರ್ವಣ್ಣಮ್ ತಿರುಮೇನಿ ಕಣ್ಣುಮ್ ವಾಯುಮ್
ಕೈತ್ತಲಮುಮ್ ಅಡಿಯಿಣೈಯುಮ್ ಕಮಲವಣ್ಣಮ್,
ಪಾರ್ವಣ್ಣಮಡಮಂಗ್ಯೈ ಪತ್ತರ್ ಪಿತ್ತರ್
ಪನಿಮಲರ್ ಮೇಲ್ ಪಾವೈಕ್ಕು ಪ್ಪಾವಮ್ ಶೆಯ್ದೇನ್,
ಏರ್ವಣ್ಣವರ್ಪೇದೈ ಎನ್ಶೊಲ್ ಕೇಳಾಳ್
ಎಂಬೆರುಮಾನ್ ತಿರುವರಂಗಂ ಎಂಗೇ ಎನ್ನುಮ್
ನೀರ್ವಣ್ಣನ್ ನೀರ್ಮಲೈಕ್ಕೇ ಪೋವೇನೆನ್ನುಮ್
ಇದುವನ್ರೋ ನಿರೈವಳಿಂದಾರ್ ನಿರ್ಕುಮಾರೇ ||

ತಿರುನೆಡಂದಾಂಡಹ—೧೬.

'**ಕೇಳಲಾಯ್** = ವರಾಹರೂಪಿಯಾಗಿ, **ಕೀಳಾ** = ಮಹಾಪ್ರಲಯ ಜಲದ ಕೆಳಗೆ, **ಪುಕ್ಕು** = ಪ್ರವೇಶಿಸಿ, **ಇಡಂದಿಡುಂ** = ಭೂಮಿಯನ್ನು ಉದ್ಧರಿಸಿಯೂ', **ಎನ್ನಿರಪಡಿಯೇ** = ಎಂದು ಹೇಳುವಂತೆ, **ಅವರ್-ಕಳಿರುಂದ** = ಆಶ್ರಿತರು ಇರುವ, **ಕೀಳ್‌ನಿಲತ್ತಿಲುಮ್** = ಕೀಳಾದ ಸ್ಥಾನದಲ್ಲಿಯೂ, **ಶೆನ್ರು** = ತಾನಾಗಿ ಹೋಗಿ, "**ತಡಮ್** = ವಿಶಾಲವಾದ, **ಪೆರುಮ್ ತೋಳ್** = ಮಹಾಭುಜಗಳು, **ಆರ** = ತುಂಬುವಂತೆ, **ತಳುವುಂ** = (ಭೂಮಿ ದೇವಿಯನ್ನು) ಆಲಿಂಗನ ಮಾಡಿಕೊಂಡು' **ಎನ್ರುಂ ಪಡಿ** = ಎಂದು ಹೇಳುವಂತೆ, **ಇರುಕ್ಕುಮ್** = (ವರಾಹಾವತಾರದ ಕಾಲದಲ್ಲಿ ಸ್ಥಿತಿಯು) ಇರುತ್ತದೆ.

ಭಗವಂತನ 'ವ್ಯೂಹ' ಸ್ವರೂಪವು ಕ್ಷೀರಾಬ್ಧಿಯಲ್ಲಿ ಮಾತ್ರ ಕಾಣು-ವಂತಹುದು. ಭಗವಂತನು ಅನಂತ ಕಲ್ಯಾಣಗುಣಗಳಿಂದ ಕೂಡಿದ್ದರೂ, ವ್ಯೂಹಸ್ವರೂಪದಲ್ಲಿ ವಿಶೇಷವಾಗಿ ಪ್ರಧಾನವಾದ, ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ ಮತ್ತು ತೇಜಸ್ಸೆಂಬ – ಷಡ್ಗುಣಗಳಿಂದ ಕೂಡಿರುತ್ತಾನೆ. ಈ ಆರು ಗುಣಗಳಲ್ಲಿಯೂ, 'ಜ್ಞಾನಬಲ' –ಎಂಬ ಎರಡು ಗುಣಗಳಿಂದ ಕೂಡಿದವನಾಗಿದ್ದು 'ಸಂಕರ್ಷಣ' –ಎಂಬ ಹೆಸರಿನಿಂದ ಕರೆಯಲ್ಪಡುವವನಾಗಿ

---

[2] **ಕಿಡನ್ದಿರುನ್ದು ನಿನ್ರಳನ್ದು ಕೇಳಲಾಯ್-ಕ್ಕೀಳ್**
**ಪುಕ್ಕಿಡನ್ದಿಡುಮ್, ತನ್ನುಳ್- ಕರಕ್ಕುಮುಮಿಳುಮ್**
**ತಡಮ್ ಪೆರತ್ತೋಳಾರ ತಳುವುಮ್ ಪಾರೆನ್ನುಮ್**
**ಮಡನ್ದೈಯ್ಯೈ, ಮಾಲ್ ಶೆಯ್‌ಕಿನ್ರಮಾಲಾರ್ ಕಾಣ್ಪಾರೇ ॥**

—ನಮ್ಮಾಳ್ವಾರ್ ತಿರುವಾಯ್ಮೊಳಿ (೨-೮-೭)

**ಕಿಡನ್ದು** = ಸಮುದ್ರತೀರದಲ್ಲಿ (ದಾರಿಗೋಸ್ಕರ) ದರ್ಭಶಯನದಲ್ಲಿ ಮಲಗಿಯೂ, **ಇರುನ್ದು** = ಚಿತ್ರಕೂಟದಲ್ಲಿದ್ದು ವಾಸಮಾಡುತ್ತಲೂ, **ನಿನ್ರು** = ರಾವಣವಧಾನನ್ತರ ದೇವತಾಸಾನ್ನಿಧ್ಯದಲ್ಲಿ ಬಿಲ್ಲನ್ನು ಹಿಡಿದು-ಕೊಂಡು ನಿಂತೂ (ಅಥವಾ ಅರ್ಚಾವತಾರದಲ್ಲಿ ಶ್ರೀರಂಗಾದಿ ಕ್ಷೇತ್ರಗಳಲ್ಲಿ,

ಜಗತ್ತಿನ ಪ್ರಲಯ ಮತ್ತು ಶಾಸ್ತ್ರಕರಣಕ್ಕೆ ಕಾರಣನಾಗಿರುತ್ತಾನೆ. 'ಐಶ್ವರ್ಯವೀರ್ಯ' –ಎಂಬ ಎರಡು ಗುಣಗಳಿಂದ ಕೂಡಿದವನಾಗಿ 'ಪ್ರದ್ಯುಮ್ನ' –ಎಂಬ ಹೆಸರಿನಿಂದ ಕರೆಯಲ್ಪಡುವವನಾಗಿ ಜಗತ್ಸೃಷ್ಟಿ ಮತ್ತು ಧರ್ಮಪ್ರವರ್ತನೆ ಮಾಡುತ್ತಾನೆ. 'ಶಕ್ತಿ ತೇಜಸ್ಸೆಂಬ' ಎರಡು ಗುಣಗಳಿಂದ ಕೂಡಿದವನಾಗಿ 'ಅನಿರುದ್ಧ' –ಎಂಬ ನಾಮದಿಂದ ಕರೆಯಲ್ಪಡುತ್ತಾ ಜಗತ್ಪಾಲನ ಮತ್ತು ತತ್ತ್ವೋಪದೇಶವನ್ನು ಸಂಕಲ್ಪಮಾತ್ರದಿಂದ ನಡೆಯಿಸುತ್ತಾನೆ. ಷಾಡ್ಗುಣ್ಯಮೂರ್ತಿಯಾಗಿ ವಾಸುದೇವನೆಂಬ ಹೆಸರಿನಿಂದ ಕರೆಯಲ್ಪಡುವವನಾಗಿ ಕ್ಷೀರಾಬ್ಧಿಯಲ್ಲಿ ಆದಿಶೇಷನ ಮೇಲೆ ಪವಡಿಸಿಕೊಂಡಿರುತ್ತಾನೆ. ಈ ವ್ಯೂಹದ ಭಗವಂತನ ಸ್ವರೂಪಗಳನ್ನು ಭಕ್ತಿಯೋಗನಿಷ್ಠರಾದವರು ಮಾತ್ರ ತಮ್ಮ ವಿದ್ಯಾ ಉಪಾಸನೆ ಪೂರ್ಣವಾಗಿ ಸಿದ್ಧಿಯಾದ ಬಳಿಕ, ಕರ್ಮಬಂಧವು ನೀಗಿದ ನಂತರ ಸಾಕ್ಷಾತ್ಕರಿಸಿಕೊಳ್ಳಬಹುದು.

ಈ ರೀತಿಯಲ್ಲಿಲ್ಲದೇ ವರಾಹಾವತಾರಕಾಲದಲ್ಲಿನ ಪರಮಾತ್ಮ ಸ್ವರೂಪವು ವಿಶೇಷವಾದ ಆಶ್ರಿತವಾತ್ಸಲ್ಯದಿಂದ ಕೂಡಿದುದಾಗಿ, ಆಶ್ರಿತರಿಗೆ ತನ್ನಲ್ಲಿ ಮಹಾ

---

₂ ಶಯನಮಾಡಿಯೂ, ಕುಳಿತೂ, ನಿಂತೂ), **ಅಳಸ್ನು** = ತ್ರಿವಿಕ್ರಮನಾಗಿ ಲೋಕಗಳನ್ನು ಅಳೆದು, **ಕೇಳಲಾಯ್** = ವರಹಾರೂಪಿಯಾಗಿ, **ಕೀಳ್** = ಸಮುದ್ರದಡಿಯಲ್ಲಿ, **ಪುಕ್ಕು** = ಪ್ರವೇಶಿಸಿ, **ಇಡನ್ದಿಡುಂ** = ಭೂಮಿಯನ್ನು ಮೇಲೆತ್ತಿಯೂ, **ತನ್ನುಳ್** = ತನ್ನ ಉದರದಲ್ಲಿ, **ಕರಕ್ಕುಂ** = ಮರೆಸಿ ಇಟ್ಟುಕೊಂಡೂ, **ಉಮಿಳುಮ್** = ಸೃಷ್ಟಿಯ ಕಾಲದಲ್ಲಿ ಮತ್ತೆ ಆವಿರ್ಭವಿಸುವಂತೆ ಉಗಿದೂ, **ತಡಮ್** = ವಿಶಾಲವಾದ, **ಪೆರುಮ್‌ತೋಳ್** = ಮಹಾಭುಜಗಳು, **ಆರ** = ತುಂಬುವಂತೆ, **ತಳುವುಮ್** = ಆಲಿಂಗನಮಾಡಿಯೂ, (ಈ ಪ್ರಕಾರವಾಗಿ) **ಪಾರೆನ್ನುಮ್** = ಭೂಮಿಯೆಂಬ, **ಮಡನ್ದೈಯೈ** = ದೇವಿಯನ್ನು, **ಮಾಲ್** - ಈಶ್ವರನು, **ಶೈಯ್‌ಕಿನ್ರ** = ಮಾಡುವ, **ಮಾಲ್** = ಮೋಹನ ಕೃತ್ಯವನ್ನು, **ಕಾಣ್ಪಾರ್** = ತಿಳಿಯಬಲ್ಲವರು, **ಆರ್** = ಯಾರು ?

ವಿಶ್ವಾಸದಿಂದ ಕೂಡಿದ ಭಕ್ತಿಯುಂಟಾಗುವಂತೆ, (ಭೂಮಿತಾಯಿಯಿದ್ದಲ್ಲಿಗೆ ತಾನೇ ಬಂದು ಅವಳೊಡನೆ ಕೂಡಿಕೊಂಡಂತೆ), ಆಶ್ರಿತರಿದ್ದ ಸ್ಥಳಕ್ಕೆ ತಾನೇ ಬಂದು ಅನುಗ್ರಹಿಸುವನೆಂಬ ಗುಣವನ್ನೂ ಪ್ರಖ್ಯಾಪನಮಾಡಿಕೊಂಡು, ಸಮುದ್ರದಡಿಯಲ್ಲಿದ್ದ ಕೇವಲ ಭೂಮಿಯೊಬ್ಬಳನ್ನು ಉದ್ಧರಿಸಲು ವರಾಹ ಸ್ವರೂಪದ ಒಂದು ಅವತಾರವನ್ನೇ ಮಾಡಿ, ನೀರಿನೊಳಗಿಳಿದು ಭೂಮಿಯನ್ನುದ್ಧರಿಸಿ, ತನ್ನ ವಿಶಾಲವಾದ ತೋಳಿನಿಂದ ಆಕೆಯನ್ನು ಆಲಿಂಗನಮಾಡಿಕೊಂಡು ಆನಂದವನ್ನನುಗ್ರಹಿಸಿದಂತೆ, ತನ್ನಲ್ಲಿ ಶರಣಾಗತರಾಗಿ-ಭೂಮಿತಾಯಿಯಂತೆಯೇ ಪತ್ನೀಸ್ಥಾನದಲ್ಲಿರುವ ಚೇತನನು, ಸಂಸಾರ ಸಾಗರದಲ್ಲಿ – ಕರ್ಮಬಂಧವೆಂಬ ಕೆಸರಿನಲ್ಲಿ ಹೂತಿರುವಲ್ಲಿ, ಆ ಒಬ್ಬೊಬ್ಬ ಚೇತನನನ್ನೂ ಸಂರಕ್ಷಿಸುವ ಸಲುವಾಗಿ ಅವರವರ ಇಷ್ಟಬಂದ ಸ್ವರೂಪದಲ್ಲಿ, ಆಯಾಯ ಚೇತನರಿಗೆ (ಅಂತರ್ಯಾಮ್ಯವತಾರ ಸ್ವರೂಪದಲ್ಲಿ) ತೋರಿಕೊಂಡು, ಭೂಮಿಯನ್ನಪ್ಪಿಕೊಂಡಾಗ ಆಕೆ ಅವನ ವಿಶಾಲವಾದ ತೋಳಿನ ಮಧ್ಯದಲ್ಲಿ ಅಡಗಿಕೊಂಡು ಆನಂದವನ್ನು ಪಡೆದಂತೆ, ಪರಮಾತ್ಮನು ಶರಣಾಗತನಿಗೆ ವಿಶಾಲವಾದ ದಯಾಗುಣದಿಂದ ತನ್ನ ದಿವ್ಯ ಮಂಗಳ ಸ್ವರೂಪವನ್ನು ತೋರ್ಪಡಿಸಿಕೊಂಡು, ಪ್ರಪನ್ನನ ಮನಸ್ಸು ಆ ಸ್ವರೂಪದಲ್ಲಿಯೇ ಲೀನವಾಗಿ ಬೇರೆಲ್ಲಿಯೂ ಚಲಿಸದಂತಾಗಿ ಪರಿಪೂರ್ಣಾನಂದವನ್ನು ಅನುಗ್ರಹಿಸುತ್ತಾನೆ. ಈ ರೀತಿಯಾಗಿ ಒಬ್ಬೊಬ್ಬ ಚೇತನನಿಗೋಸ್ಕರವೂ ಅವನಿರುವಲ್ಲಿಗೆ ತಾನೇ ಬಂದು, ಒಂದೊಂದು ಅವತಾರವನ್ನೂ ಮಾಡಬಲ್ಲನೆಂದು ಕೇವಲ ಭೂಮಿಗೋಸ್ಕರ ಮಾತ್ರ ಅವತಾರವನ್ನೆತ್ತಿದ ವರಾಹಾತಾರವು ತೋರ್ಪಡಿಸುವುದರಿಂದ, ಪರಮಾತ್ಮನ ವ್ಯೂಹ ಸ್ವರೂಪಗಳಿಗಿಂತ ವರಾಹಾವತಾರವು ವೈಶಿಷ್ಟ್ಯಪೂರ್ಣವಾದುದು.

**ಮತ್ಸ್ಯಾವತಾರಂ ಪೋಲೇ ತಾ‌ ಪೆತ್ತ ಪ್ರಜೈಗಳ್ಳೆ ಉಲಾವಿತ್ತಿ-ರಿಯುಂ ಅಳವಿಲೆ, ಈಕ್ಷಣಮಾತ್ರತ್ತಾಲೆ ರಕ್ಷಿಕ್ಕುಂ ಅಳವನ್ರಿಕ್ಕೇ, ಇಙ್ಙೇ ಪ್ರಜೈಗಳ್ ನೀನೈಕ್ಕವುಮ್ ಮಾಟ್ಟಾದೇ ಕಾಷ್ಠಪಾಷಾಣ-ಸನ್ನಿಭನಾಯ್ ವಿಳುನ್ದು ಕಿಡಕ್ಕಿರ ಅಳವಿಲೇ, ಅವರ್ಕಳ್ ಅದ್ವೈತ್ತ-**

**ನಿನ್ನೈನ್ವೈತ್ತಾ್ ಅನುಷ್ಟಿತ್ತು ರಕ್ಷಿಕ್ಕಿರಾನ್ -ಎನ್ನುಂಪಡಿಕ್ಕು ತನ್ ಪಾಶು-ರಮೇ ಉಂಡು.**

**ಮತ್ಸ್ಯಾವತಾರಂ ಪೋಲೇ** = ಮತ್ಸ್ಯಾವತಾರದಂತೆ, **ತಾನ್‌ಪೆತ್ತ** = ತಾನೇ ಪಡೆದ, **ಪ್ರಜೈಗಳ್ಳೈ** = ಪ್ರಜೆಗಳನ್ನು, **ಉಲಾವಿತ್ತಿರಿಯುಂ**= ಆಡಿಸುತ್ತಾ ಅಲೆದಾಡುತ್ತಾ, **ಅಳವಿಲೇ** =ಇರುವಂತೆಯೇ, **ಈಕ್ಷಣಮಾತ್ರ-ತ್ತಾಲೆ** = ಕೇವಲ ವಾತ್ಸಲ್ಯಪೂರಿತವಾದ ದೃಷ್ಟಿಬೀರುವುದರಿಂದಲೇ, **ರಕ್ಷಿಕ್ಕುಂ ಅಳವನ್ರಿಕ್ಕೆ** = ರಕ್ಷಿಸದಂತೆ – ಅಲ್ಲದೆ, **ಇಙ್ಗೇ**=ಈ ಸಂಸಾರ ಸಾಗರದಲ್ಲಿಯೇ ಇರುವ, **ಪ್ರಜೈಗಳ್** — ಚೇತನರು, **ನಿನ್ನೈಕ್ಕವುಂ** = ಸ್ಮರಿಸಿಕೊಳ್ಳಲೂ, **ಮಾಟ್ಟಾದೇ** = ಸಾಧ್ಯವಿಲ್ಲದೆ, **ಕಾಷ್ಠಪಾಷಾಣಸನ್ನಿಭ-ನಾಯ್** = ಕಟ್ಟಿಗೆ ಅಥವಾ ಕಲ್ಲುಗಳಿಗೆ ಸರಿಸಮಾನರಾಗಿ, **ವಿಳುನ್ದು ಕಿಡ-ಕ್ಕಿರ ಅಳವಿಲೇ** = ಬಿದ್ದಿರುವ ಸನ್ನಿವೇಶದಲ್ಲಿ, **ಅವರ್‌ಗಳ್** = ಆ ಚೇತನರು, **ಅಡೈತ್ತ** = ಹಿಂದೊಮ್ಮೆ ಪಡೆದುಕೊಂಡ, **ನಿನ್ನೈವ್ವೈ** = ಸ್ಮರಣ-ವನ್ನು, **ತಾ್** = ತಾನು, **ಅನುಷ್ಟಿತ್ತು** = ಅನುಷ್ಠಿಸಿ, **ರಕ್ಷಿಕ್ಕಿರಾನ್** = ರಕ್ಷಿಸುತ್ತಾನೆ. **–ಎನ್ನುಂ ಪಡಿಕ್ಕು**=ಎಂದು ಹೇಳಲು, **ತ್ ಪಾಶುರಮೇ-ಉಂಡು** = ವರಾಹಾವತಾರ ಕಾಲದಲ್ಲಿ ಸ್ವಾಮಿಯು ಹೇಳಿದ ಶ್ಲೋಕಗಳೇ ಪ್ರಮಾಣವಾಗಿವೆ.

ಹಿಂದೊಮ್ಮೆ ಚತುರ್ಮುಖ ಬ್ರಹ್ಮನು, ಪ್ರಪಂಚ ಸೃಷ್ಟಿಯಲ್ಲಿ ತೊಡಗಿದಾಗ, ಸತ್ತ್ವರಜಸ್ ತಮೋಗುಣಗಳ ಸಮ್ಮಿಶ್ರಣದಿಂದ ಕೂಡಿದ ದೇಹಾದಿಗಳನ್ನೂ, ಅವುಗಳಲ್ಲಿ ತಮ್ಮ ಕರ್ಮಫಲಗಳನ್ನು ಅನುಭವಿಸಲು ಅರ್ಹರಾದ ಚೇತನರನ್ನೂ ಸೃಷ್ಟಿಸಬೇಕಾಗಿದ್ದಿತು. ಆದರೆ, ಆಗ ಬ್ರಹ್ಮ-ದೇವನು ಸರಿಯಾಗಿ ಗಮನಿಸದೇ, ಕೇವಲ ರಜೋಗುಣ ಮತ್ತು ಕೇವಲ ತಮೋಗುಣದಿಂದ ಕೂಡಿದ ದೇಹವನ್ನು ಸೃಷ್ಟಿಸಿದ. ಈ ದೇಹವನ್ನು ಕೂಡಿ-ಕೊಂಡ ಚೇತನರೇ ಮಧುಕೈಟಬರೆಂಬ ಇಬ್ಬರು ಅಸುರರು.

ಇವರು ಜನ್ಮವೆತ್ತಿದ ಕೂಡಲೆ, ಬ್ರಹ್ಮದೇವನ ನಾಲ್ಕು ವೇದಗಳನ್ನೂ ಅಪಹರಿಸಿಕೊಂಡುಹೋಗಿ ಸಮುದ್ರದಡಿಯಲ್ಲಿ ಬಚ್ಚಿಟ್ಟಿದ್ದರು. ಆ ಕೂಡಲೆ, ಜ್ಞಾನಚಕ್ಷುಸ್ಸಿನಂತಿದ್ದ ವೇದಗಳನ್ನು ಕಳೆದುಕೊಂಡ ಬ್ರಹ್ಮದೇವನು

ಮುಂದೆ ತಾನು ಏನು ಮಾಡಬೇಕೆಂಬುದನ್ನೇ ಅರಿಯದೆ, ವೇದಗಳನ್ನು ಕಳೆದುಕೊಂಡ ತಾನು ಜ್ಞಾನಾಂಧನಾಗಿದ್ದಾನೆಂದೂ, ತನಗೆ ವೇದಗಳನ್ನು ತಂದುಕೊಟ್ಟು ತನ್ನನ್ನು ರಕ್ಷಿಸಬೇಕೆಂದೂ, ಸರ್ವ ಶಕ್ತನಾದ ಪರಮಾತ್ಮನಲ್ಲಿ ಶರಣಾಗತಿ ಮಾಡುತ್ತಾನೆ. ಆಗ ಪರಮಾತ್ಮನು ಮೀನಿನ ರೂಪದಿಂದ ಕೂಡಿದ ಮತ್ಸ್ಯಾವತಾರವನ್ನು ಮಾಡಿ, ಮಧುಕೈಟಭರನ್ನು ಸಂಹರಿಸಿ, ನಾಲ್ಕು ವೇದಗಳನ್ನೂ ನಾಲ್ಕು ಮಕ್ಕಳಿನಂತೆ ಎತ್ತಿ ಪೋಷಿಸಿ ತಂದು ಬ್ರಹ್ಮದೇವನಿಗೆ ಕೊಡುತ್ತಾನೆ.

ಮೀನುಗಳು ತಮ್ಮ ಮರಿಗಳನ್ನು ವಾತ್ಸಲ್ಯಪೂರಿತವಾದ ದೃಷ್ಟಿಯಿಂದ ನೋಡುವುದರಿಂದ ಮಾತ್ರವೇ, ಮರಿಗಳು ಪುಷ್ಟವಾಗಿ ಬೆಳೆಯುತ್ತವೆ. ತಾಯಿಯು ಮರಿಗಳಿಗೆ ಈ ವೀಕ್ಷಣೆ ಬಿಟ್ಟರೆ, ಇನ್ನಾವತರಹ ಪೋಷಣೆಯನ್ನೂ ಕೊಡುವುದಿಲ್ಲ. ಮತ್ಸ್ಯಾವತಾರಕಾಲದಲ್ಲಿ ಪರಮಾತ್ಮನು ತಾನೇ ಪಡೆದ ಮಕ್ಕಳಂತಿದ್ದ ನಾಲ್ಕು ವೇದಗಳನ್ನು ಮಾತ್ರವೇ ಕೇವಲ ತನ್ನ ದೃಷ್ಟಿಯಿಂದ ಮಾತ್ರ ಪೋಷಿಸಿ ರಕ್ಷಿಸಿದ. ಇನ್ನಾವ ಚೇತನರನ್ನೂ ರಕ್ಷಿಸಲಿಲ್ಲ.

ವರಾಹಾವತಾರದ ಪರಮಾತ್ಮನಾದರೋ ಸಂಸಾರ ಸಾಗರದಲ್ಲಿ ಬಿದ್ದಿರುವ ಚೇತನರಾರೇ ಆಗಲಿ, ತಮ್ಮ ಮನಸ್ಸು ಸರಿಯಾಗಿದ್ದು, ದೇಹವು ಸ್ವಾಸ್ಥ್ಯದಿಂದಿದ್ದು, ಸಪ್ತಧಾತುಗಳು ಸಮಸ್ಥಿತಿಯಲ್ಲಿರುವಲ್ಲಿ ಒಮ್ಮೆ, ಕರ್ಮಬಂಧಿತನಲ್ಲದ ಸರ್ವರಿಗೂ ಸ್ವಾಮಿಯಾದ ಪರಮಾತ್ಮನೇ ತನಗೆ ರಕ್ಷಕನೆಂದು ಸ್ಮರಣೆ ಮಾಡಿ (ಮತ್ತೆ ಮರತೇಬಿಟ್ಟಿದ್ದರೂ), ಮರಣ ಕಾಲದಲ್ಲಿ ಏನೂ ಅರಿವಿಲ್ಲದವನಾಗಿ ಕಟ್ಟಿಗೆ ಕಲ್ಲುಗಳಿಗೆ ಸಮಾನವಾಗಿ ಬಿದ್ದಿರುವ ಸಮಯದಲ್ಲಿ ವರಾಹಸ್ವಾಮಿಯು, ಆ ಚೇತನನು ಹಿಂದೆ ತನ್ನನ್ನು ಒಮ್ಮೆ ಸ್ಮರಿಸಿಕೊಂಡುದುದನ್ನು ನೆನಪಿಗೆ ತಂದುಕೊಂಡು, ಆ ಚೇತನನಲ್ಲಿಗೆ ತಾನೇ ಬಂದು, ಅವನನ್ನು ಕರ್ಮ ಬಂಧದಿಂದ ಬಿಡಿಸಿ ರಕ್ಷಿಸುತ್ತಾನೆ. ಈ ರಕ್ಷಣೆ ಕೇವಲ ಮತ್ಸ್ಯಾವತಾರದಂತೆ ಪರಿಮಿತವಾದ ಚೇತನರಿಗೆ ಮಾತ್ರವಲ್ಲ. ಜಾತಿ, ವರ್ಣ, ಲಿಂಗ, ವಯೋಭೇದವಿಲ್ಲದಂತೆ ಅಸಂಖ್ಯಾತರಾದ ಎಲ್ಲರನ್ನೂ ರಕ್ಷಿಸುವುದಾಗಿ ವರಾಹನು ತನ್ನ ಚರಮಶ್ಲೋಕದಲ್ಲಿಯೇ ತಾನೇ ಹೇಳಿಕೊಂಡಿರುವುದರಿಂದ

ವರಾಹಾವತಾರವು ಮತ್ಸ್ಯಾವತಾರಕ್ಕಿಂತಲೂ (ಬದ್ಧ ಚೇತನರಿಗೆ ಸಹಾಯ ವಾಗುವ ವಿಷಯದಿಂದ) ಅಧಿಕವಾದ ವೈಶಿಷ್ಟ್ಯವನ್ನು ಹೊಂದಿದೆ.

ಕೂರ್ಮಾವತಾರಂ ಪೋಲೇ ಒರುಭೂಧರಂ ಭ್ರಮಿಕ್ಕೈಕ್ಕು ಅಧಿಷ್ಠಾನಮಾಯ್ ನಿರ್ಕ್ಕೈಯನ್ರಿಕ್ಕೇ ಇದು ತಾ್ ಭೂಧರಮು ಮಾಯ್ ಭೂಮಿಯುಂ, ಭೂಧರಂಗಳುಂ ಕುಲಜ್ಞಾದೇ [3] "ಊನ್ರಿ ಇಡನ್ದು ಎಯಿತ್ತಿಲ್ ಕೊಣ್ಡನಾನ್ರಿಲತಾನತ್ತವೇ"ಎನ್ನುಮ್ಪಡಿ ನಿಲ್ನೈನಿರ್ಕ್ಕ-ಪ್ಪಣ್ಣಮತಾಯಿರುನ್ದದು.

ಕೂರ್ಮಾವತಾರಂಪೋಲೇ = ಕೂರ್ಮಾವತಾರದಂತೆ, ಒರು-ಭೂಧರಂ = ಒಂದು (ಮಂದರ)ಪರ್ವತವು, ಭ್ರಮಿಕ್ಕೈಕ್ಕು =ಸುತ್ತು-ವುದಕ್ಕೆ (ಚಲಿಸುವುದಕ್ಕೆ), ಅಧಿಷ್ಠಾನಮಾಯ್ = ಆಧಾರಭೂತವಾಗಿ, ನಿರ್ಕ್ಕೈಯನ್ರಿಕ್ಕೆ = ನಿಂತುಕೊಂಡುದಂತಲ್ಲದೇ, ಇದು = ಈ ವರಾಹಾ-ತಾರವು, ತಾ್ = ಸ್ವತಃ ತಾನು, ಭೂಧರಮುಮಾಯ್ = ಭೂಮಿ-ಯನ್ನು ಹೊತ್ತುಕೊಂಡು (ಧರಿಸಿ), ಭೂಮಿಯುಂ — ಭೂಮಿಯೂ, ಭೂಧರಂಗಳುಂ = (ಭೂಮಿಯಿಂದ ಧರಿಸಲ್ಪಟ್ಟ ಎಲ್ಲ ವಸ್ತುಗಳೂ)ಪರ್ವತ-ಗಳೂ, ಕಲಜ್ಞಾದೇ-ಸ್ವಲ್ಪವೂ ಅಲುಗಾಡದಂತೆ,ಊನ್ರಿ-(ಪ್ರಳಯಕಾಲದಲ್ಲಿ) ಅಂಡಕಪಾಲದಲ್ಲಿ ಸಿಕ್ಕಿ ಇದ್ದ ಭೂಮಿಯನ್ನು ಕಿತ್ತು, ಇಡನ್ದು-ಭೇದಿಸಿ, ಎಯಿತ್ತಿಲ್ ಕೊಂಡ-ಕೊಂಬಿನ ಮೇಲೆ ಎತ್ತಿ ಇಟ್ಟುಕೊಂಡ, ನಾಳ್-ಕಾಲ-ದಲ್ಲಿ (ಏಳ್ = ಸಪ್ತದ್ವೀಪರೂಪವಾದ, ಮಣ್ಣುಮ್ = ಭೂ ಭಾಗಗಳು, ನಾನ್ರಿಲ್ = ಜಾರಿಬೀಳದಂತೆಯೂ, ಪಿನ್ನುಮ್ = ಮತ್ತು, ಏಳ್ಮಲೈ-

[3] ಈ ಪಾಶುರದ ಪೂರ್ಣರೂಪವು ಇಂತಿದೆ :

ನಾನ್ರಿಲವೇಳ್ ಮಣ್ಣುಮ್ ತಾನತ್ತವೇ, ಪಿನ್ನುಮ್
ನಾನ್ರಿಲವೇಳ್ ಮಲೈತಾನತ್ತವೇ, ಪಿನ್ನುಮ್
ನಾನ್ರಿಲವೇಳ್ ಕಡಲ್ತಾನತ್ತವೇ ಅಪ್ಪನ್
ಊನ್ರಿಯಿಡನ್ದೆಯಿತ್ತಿಲ್ ಕೊಣ್ಡ ನಾಳೇ ||

(ನಮ್ಮಾಳ್ವಾರ್ ತಿರುವಾಯ್ಮೊಳಿ: ೭-೪-೩)

ಸಪ್ತ ಪರ್ವತಗಳೂ, **ನಾನ್ರಿಲ** = ಚಲಿಸದಂತೆಯೂ, **ಪಿನ್ನುಮ್** = ಮತ್ತೂ, **ಏಳ್ ಕಡಲ್** = ಸಪ್ತ ಸಮುದ್ರಗಳೂ, **ನಾನ್ರಿಲ** = ಭಿನ್ನ-ಮಾರ್ಗಗಳಾಗದಂತೆ, **ತಾನತ್ತ** = ತಮ್ಮ ತಮ್ಮ ಸ್ಥಾನಗಳಲ್ಲೇ ಇದ್ದುವು) **ಎನ್ನುನ್ಪಡಿ** = ಎಂದು ಹೇಳುವಂತೆ, **ನಿಲೈನಿರ್ಕ** = ಸ್ಥಿರವಾಗಿ ನಿಲ್ಲು-ವಂತೆ, **ಪಣ್ಣುಮತಾಯ್** — ಮಾಡುವುದಾಗಿ, **ಇರುನ್ದದು** = ಇದ್ದಿತು.

ಹಿಂದೊಮ್ಮೆ ದೇವಾಸುರರು ಅಮೃತವನ್ನು ಪಡೆಯಬೇಕೆಂಬ ಇಚ್ಛೆ-ಯಿಂದ ವಿಷ್ಣುವಿನ ಆದೇಶದ ಮೇರೆಗೆ ಸಮುದ್ರ ಮಥನ ಮಾಡಲು ಉದ್ದೇ-ಶಿಸಿದರು. ಆಗ ಮಂದರ ಪರ್ವತವನ್ನು ಕಡೆಗೋಲನ್ನಾಗಿಯೂ, ವಾಸುಕಿ-ಯನ್ನು ಕಡೆಯುವ ಹಗ್ಗವಾಗಿಯೂ ಇಟ್ಟುಕೊಂಡು, ದೇವತೆಗಳೊಂದುಕಡೆ, ಅಸುರರೊಂದುಕಡೆ ನಿಂತು ಕಡೆಯಲು ಪ್ರಾರಂಭಿಸಿದರು. ಆಗ ಮಂದರ ಪರ್ವತವು ಬಹಳ ಭಾರವಾಗಿದ್ದುದರಿಂದ ಸಮುದ್ರದಲ್ಲಿ ಇತರ ಕಡೆಗೋಲಿ-ನಂತೆ ತೇಲದೆ ಮುಳುಗುತ್ತಿತು. ಆಗ ಏನುಮಾಡುವುದು ಎಂದು ತೋಚದೆ, ದೇವತೆಗಳು ಮತ್ತೊಮ್ಮೆ ವಿಷ್ಣುವಿನಲ್ಲಿ ಶರಣುಹೋಗಿ ಈ ವಿಷಯವನ್ನರು-ಹಿದರು. ಆಗ ಪರಮಾತ್ಮನು ತಾನೇ ಒಂದು 'ಆಮೆ'ಯ(ಕೂರ್ಮದ)ರೂಪವನ್ನು ತೆಗೆದುಕೊಂಡು, ಆ ಮಂದರಪರ್ವತವನ್ನು ತನ್ನ ಬೆನ್ನಿನ ಮೇಲೆ ಹೊತ್ತು ಕೊಂಡು ಸಮುದ್ರದಲ್ಲಿದ್ದು, ಆ ಪರ್ವತವು – ಸಮುದ್ರದಲ್ಲಿ ಕಡೆಗೋಲಿನಂತೆ ಚಲಿಸಲು ಅನುಕೂಲ ಮಾಡಿ ಸಮುದ್ರ ಮಥನಕ್ಕೆ ಸಹಾಯಮಾಡಿದ. ಆ ಕೂರ್ಮಾವತಾರ ಕಾಲದಲ್ಲಿ, ಒಂದು ಭೂಧರ ಅಥವಾ ಪರ್ವತವು ಚಲಿಸುವು-ದಕ್ಕೆ ಸಹಾಯಮಾಡಿದರೆ, ವರಾಹಾವತಾರ ಕಾಲದಲ್ಲಿ ತಾನೇ ಭೂಧರ-ಭೂಮಿಯನ್ನು ಹೊತ್ತು ಧರಿಸುವವನಾಗಿ, ಭೂಮಿಯೂ ಆ ಭೂಮಿಯಿಂದ ಧರಿಸಲ್ಪಟ್ಟ ವಸ್ತುಗಳೂ (ಭೂಧರ-ಪರ್ವತಗಳೂ) ಸ್ವಲ್ಪವೂ (ಅಸ್ತವ್ಯಸ್ತ-ವಾಗಿ) ತನ್ನ ಸ್ಥಿತಿಯಿಂದ ಚಲಿಸದಂತೆ, ಸಮುದ್ರ ಮಧ್ಯದಿಂದ ಮೇಲೆತ್ತಿ ರಕ್ಷಿಸಿದ. ಆದುದರಿಂದ ಆ ಕೂರ್ಮಾವತಾರಕ್ಕಿಂತಲೂ, ಅಧಿಕವಾದ ರಕ್ಷಣೆ ನೀಡಿದುದು ವರಾಹಾವತಾರವಾದುದರಿಂದ ಈ ವರಾಹಾವತಾರವು ಕೂರ್ಮಾ-ವತಾರಕ್ಕಿಂತ ಅಧಿಕವಾದ ವೈಶಿಷ್ಟ್ಯಪೂರ್ಣವಾದುದು.

**ಶ್ರೀ ನೃಸಿಂಹಾವತಾರಂಪೋಲೇ ತಟ್ಟಿಪ್ಪಟ್ಟ ತೋನ್ರೈಯುಮ್ ಪಿಳಕ್ಕುಮತನ್ರಿಕ್ಕೇ, ಇದು ಭೂಮಿಯೆಲ್ಲಾಮ್ ತಟ್ಟುಪಡಾದಪಡಿ 'ಅದೃಗ್ಂಹತ್'-ಎನ್ಗಿರಪಡಿಯೇಯಿರುಕ್ಕ ಪಣ್ಣಮತಾಯಿರುನ್ದದು.**

**ಶ್ರೀನೃಸಿಂಹಾವತಾರಂ-ಪೋಲೆ** = ನೃಸಿಂಹಾವತಾರದ ಹಾಗೆ, **ತಟ್ಟು-ಪಟ್ಟತ್ತೋನ್ರೈಯುಮ್** = ಹೊಡೆದಾಗ ಮಾತ್ರ ತೋರಿಕೊಂಡುದುದೂ ಅಲ್ಲದೇ, **ಪಿಳಕ್ಕುಮದನ್ರಿಕ್ಕೆ** = (ಏಟುಬಿದ್ದ ಸ್ತಂಭವನ್ನೇ) ಸೀಳಿದಂತ ಲ್ಲದೇ, **ಇದು** = ಈ ವರಾಹಾವತಾರವು, **ಭೂಮಿಎಲ್ಲಾಮ್** = ಭೂಮಿ-ಎಲ್ಲವೂ, **ತಟ್ಟುಪಡಾದಪಡಿ** = ಏಟು ಬೀಳದಂತೆ, (ಚದಿರಿ ಹೋಗದಂತೆ), **'ಅದೃಗ್ಂಹತ್-'**— "ಚದರಿ ಹೋಗದಂತೆ ಕೂಡಿಕೊಂಡಿರುವಂತೆ ಮಾಡಿ-ದನು" —ಎಂದು (ತೈತ್ತಿರೀಯ ಬ್ರಾಹ್ಮಣಃ ೧-೧-೩ರಲ್ಲಿ) ಹೇಳುವಂತೆ **ಇರುಕ್ಕಪ್ಪಣ್ಣ ಮದಾಯಿರುನ್ದದು** = ಇರುವಂತೆ ಮಾಡಿದುದಾಗಿದ್ದಿತು.

ನೃಸಿಂಹಾವತಾರ ಸಮಯದಲ್ಲಿ ಹಿರಣ್ಯಕಶಿಪುವು, 'ಪ್ರಹ್ಲಾದನು ಎಲ್ಲೆಲ್ಲಿಯೂ ಪರಮಾತ್ಮನಿದ್ದಾನೆ' –ಎಂದು ಹೇಳಲು, 'ಈ ಕಂಭದಲ್ಲಿ ಪರಮಾತ್ಮನಿದ್ದಾನೆಯೇ ? ಇದ್ದರೆ ತೋರಿಸು' –ಎಂದು ಕೇಳುತ್ತಾ, ಕಂಭ ವೊಂದನ್ನು ಜೋರಾಗಿ ಒದ್ದನು. ಆ ಕೂಡಲೆ ಪರಮಾತ್ಮನು ಆ ಕಂಭ-ವನ್ನೇ ಸೀಳಿಕೊಂಡು ನರಸಿಂಹನ ರೂಪದಲ್ಲಿ ಅವತರಿಸಿದನು. ಇಲ್ಲಿ ಆಚಾರ್ಯರು, ವರಾಹಾವತಾರ ಸ್ವರೂಪದಲ್ಲಿ – ಒಂದು ವೈಶಿಷ್ಟ್ಯವನ್ನು ತೋರಬೇಕೆಂದು, ನೃಸಿಂಹಾವತಾರಕಾಲದಲ್ಲಿ ಆಪಾತತಃ ದೋಷದಂತೆ ತೋರುವುದನ್ನು ಎತ್ತಿ ಹೇಳುತ್ತಾರೆ. ಸಾಮಾನ್ಯವಾಗಿ ಏಟುಬಿದ್ದವ-ರನ್ನು ಸಮಾಧಾನ ಮಾಡುವುದುಂಟು. ಆದರೆ, ನೃಸಿಂಹನು, ಮೊದಲೇ ಹಿರಣ್ಯಕಶಿಪುವಿನಿಂದ ಒದೆತ ತಿಂದ ಸ್ತಂಭವನ್ನು ಮತ್ತೇ ಸೀಳಿಹಾಕಿ ಅದು ತುಂಡುತುಂಡಾಗಿ ಚೆದುರುವಂತೆ ಮಾಡಿದನು – ಇದರಿಂದ ಏಟುಬಿದ್ದುದಕ್ಕೆ ಮತ್ತೆ ಏಟು ಹಾಕಿದಂತಾದುದರಿಂದ ಇದು ಒಂದು ದೋಷವಲ್ಲವೇ ? ವರಾ-ಹಾವತಾರವು, ಆ ನೃಸಿಂಹಾವತಾರದಂತಿಲ್ಲದೇ, ಏಟೇ ಬೀಳದಿದ್ದ ಭೂಮಿಗಾ-ಗಲೀ ಅಥವಾ ಅದರಲ್ಲಿದ್ದ ವಸ್ತುವಿಗಾಗಲೀ ಸ್ವಲ್ಪವೂ ಏಟು ತಾಗದಂತೆ ಮಾಡಿ-

ದುದೇ ಅಲ್ಲದೆ ಅದಾವುದೂ ಸ್ವಲ್ಪವೂ ಚದುರಿ ಹೋಗದಂತೆ ಒಟ್ಟಿಗೆ ಕೂಡಿಸಿಟ್ಟು ರಕ್ಷಿಸಿದನು. ಈ ವಿಷಯವು ತೈತ್ತಿರೀಯ ಬ್ರಾಹ್ಮಣದ ೧ನೆಯ ಅಷ್ಟಕ – ೧ನೆಯ ಪ್ರಶ್ನೆ–೫ನೆಯ ಅನುವಾಕದಲ್ಲಿ (೧೯೬-೭ನೆಯ ಪಂಚಾಶತ್‌ನಲ್ಲಿ) "**ಸವರಾಹೋ ರೂಪಂ ಕೃತ್ವೋಪನ್ಯಮಜ್ಜತ್। ಸಪೃಥಿವೀಮಧ ಆರ್ಛತ್ । ತಸ್ಯಾ ಉಪಹತ್ಯೋದಮಜ್ಜತ್ । ತತ್ಪುಷ್ಕರಪರ್ಣೇ ಪ್ರಥಯತ್। ಯದಪ್ರಥಯತ್। ತತ್ಪೃಥಿವ್ಯೈ ಪೃಥಿವಿತ್ವಮ್। ಅಭೂದ್ವಾ ಇದಮಿತಿ । ತದ್ಭೂಮ್ಯೈ ಭೂಮಿತ್ವಮ್ । ತಾಂ ದಿಶೋಽನುವಾತಸ್ಸಮವಹತ್ । ತಾಗ್ಂ ಶರ್ಕರಾಭಿರ ದೃಗ್ಂಹತ್ । ಶಂ ವೈನೋಭೂದಿತಿ । ತಚ್ಛರ್ಕರಾಣಾಗ್ಂ ಶರ್ಕರತ್ವಮ್ । ಯದ್ವರಾಹವಿಹತಗ್ಂ ಸಂ ಭಾರೋ ಭವತಿ ॥**"–ಎಂಬಲ್ಲಿ ವರಾಹಾವತಾರಕಾಲದಲ್ಲಿ ಪರಮಾತ್ಮನು ನಡೆಯಿಸಿದ ಲೀಲಾ ಚೇಷ್ಟೆಗಳನ್ನು ವರ್ಣಿಸುವಲ್ಲಿ ಬರುವ ಒಂದು ವಾಕ್ಯದ "**ಅದೃಂಗ್‌ಹತ್**" –ಎಂಬ ಪದದಿಂದ (ವರಾಹನು)ಭೂಮಿಯ ವಸ್ತುಗಳಾವುವೂ ಚದಿರಿ ಹೋಗದಂತೆ ಕೂಡಿಸಿಟ್ಟನು –ಎಂದು ಶ್ರುತಿಯೂ ವರ್ಣಿಸಿದೆ. –ಎಂದು ಆಚಾರ್ಯರು ತಿಳಿಸಿದ್ದಾರೆ.

**ಶ್ರೀವಾಮನಾವತಾರಮ್ಪೋಲೇ "ಪೊಲ್ಲಾ ಕುರುಳುರುವಾಯ್ ಪ್ಪೊರ್‌ಕ್ಕೈಯಿಲ್ ನೀರೆತ್ತುಮ್"** (ನಾಚ್ಚಿಯಾರ್ ತಿರುಮೊಳಿ: ೧೧-೫) **ಎನ್ನುತನ್ನುಡೈಯ ಭೂಮಿಯ್ಯೈ ಪಿರರ್ ಕೊಡುಕ್ಕಕೊಳ್‌ಗೈಯನ್ರಿಕ್ಕೆ ಇದು ಮಹಾಬಲಿಯಾನ ಅಸುರನ್ನೈ ನಿರಾಕರಿತ್ತು ತನ್ಭೂಮಿಯ್ಯೈಕ್ತಾನೇ ಕೈಕೊಂಡ ಅವತಾರಮಾಯಿರಕ್ಕುಮ್.**

**ವಾಮನಾವತಾರಮ್ಪೋಲೆ** = ವಾಮನಾವತಾರದಂತೆ, "**ಪೊಲ್ಲಾ** = ಮೋಸದಿಂದ ಕೂಡಿದ, **ಕುರಳುರುವಾಯ್** = ವಾಮನನ ರೂಪವನ್ನು ಪಡೆದು, **ಪೊನ್‌ಕ್ಕೈಯಿಲ್** = ಚಿನ್ನದಂತಹ (ಸುಂದರವಾದ) ಕೈಯಲ್ಲಿ, **ನೀರೇತ್ತುಮ್** =(ದಾನದ) ಧಾರೆಯ ನೀರನ್ನು ಪಡೆದು, **ತನ್ನುಡೈಯ**= ತನ್ನದಾದ, **ಭೂಮಿಯ್ಯೈ** = ಭೂಮಿಯನ್ನು, **ಪಿರರ್** = ಇತರರು,

**ಕೊಡುಕ್ಕೈ** = ಕೊಟ್ಟ, **ಕೊಳ್‌ಗೈ** = ದಾನರೂಪದ ವಸ್ತುವಾಗಿ, **ಅನ್ರಿಕ್ಕೆ**=ಪಡೆದುದಂತಿಲ್ಲದೆ, **ಇದು** = ಈ ವರಾಹಾವತಾರವು, **ಮಹಾ-ಬಲಿಯಾನ ಅಸುರನ್ನೈ**=ಮಹಾಬಲಿಷ್ಠನಾದ ಹಿರಣ್ಯಾಕ್ಷನೆಂಬ ಅಸುರನನ್ನು **ನಿರಾಕರಿತ್ತು**=ತಿರಸ್ಕರಿಸಿ, (ಕೊಂದು) **ತನ್ ಭೂಮಿಯೈ** = ತನ್ನ ಭೂಮಿ-ಯನ್ನು, **ತಾನೇ ಕೈಕ್ಕೊಂಡ** = ತಾನೇ ತನ್ನ ಕೈವಶಪಡಿಸಿಕೊಂಡ, **ಅವತಾರಮಾಯಿರಕ್ಕುಮ್** =ಅವತಾರವಾಗಿರುವುದು.

ಹಿಂದೊಮ್ಮೆ ಮಹಾಬಲಿಷ್ಠನಾದ ಬಲಿಚಕ್ರವರ್ತಿಯು, ತನ್ನ ಬಲದಿಂದ ದೇವೇಂದ್ರನನ್ನು ಜಯಿಸಿ ಮೂರುಲೋಕದ ಐಶ್ವರ್ಯವನ್ನೂ ತನ್ನ ವಶ ಮಾಡಿಕೊಂಡನು. ಆ ಸಮಯದಲ್ಲಿ ದೇವೇಂದ್ರನು ಭಗವಂತನಲ್ಲಿ ಮೊರೆ-ಯಿಟ್ಟು, ತನ್ನ ಐಶ್ವರ್ಯವನ್ನು ತಾನು ಮತ್ತೆ ಪಡೆಯುವಂತೆ ಅನುಗ್ರಹಿಸ-ಬೇಕೆಂದು ಪ್ರಾರ್ಥಿಸಿದನು. ಆಗ ಭಗವಂತನು, ಕಶ್ಯಪ ಮತ್ತು ಅದಿತಿಗೆ ಮಗನಾಗಿ ಉಪೇಂದ್ರನಾಗಿ ಅವತರಿಸಿ, ಬಲಿಚಕ್ರವರ್ತಿ ಒಮ್ಮೆ ಮಾಡುತ್ತಿದ್ದ ಯಾಗ ಭೂಮಿಗೆ ಕುಳ್ಳನಾಗಿದ್ದ ಬ್ರಹ್ಮಚಾರಿಯ – ವಾಮನನ ವೇಷವೊಂ-ದನ್ನು ಹಾಕಿಕೊಂಡು (ಮೋಸದಿಂದ ತನ್ನ ನಿಜವಾದ ಸ್ವರೂಪವನ್ನು ಮರೆ-ಯಿಸಿಕೊಂಡು) ಬಲಿಚಕ್ರವರ್ತಿಯ ಹತ್ತಿರ ಹೋಗಿ, –ಅವನಲ್ಲಿ ತಾನು ಅವನಿಗೆ ಮುಂದೆ ಮಾಡುವ ಮೋಸವು ಅರಿಯದಂತೆ, ಕೇವಲ ಮೂರು ಹೆಜ್ಜೆ ಇಡುವಷ್ಟು ಭೂಮಿಯನ್ನು ಮಾತ್ರ ತನಗೆ ದಾನ ಕೊಡಬೇಕೆಂದು, ಅವನ ಮುಂದೆ ಸುಂದರವಾದ ಹೊನ್ನಿನಂತಿದ್ದ ತನ್ನ ಕೈ ನೀಡಿದನು. ಆಗ ವಾಮನನ ಕೈಯಿನ ಸೌಂದರ್ಯಕ್ಕೆ ಮಾರುಹೋದ ಬಲಿಯು ವಾಮನನಿಗೆ ತ್ರಿಪದ-ಪರಿಮಿತವಾದ ಭೂಮಿಯನ್ನು ಕೊಡುವುದಾಗಿ ಮಾತುಕೊಟ್ಟು ದಾನದ-ಧಾರೆಯ ನೀರನ್ನು ವಾಮನನ ಕೈಯಲ್ಲಿ ಹಾಕಿದನು. ಆಗ ಪರಮಾತ್ಮನು ಕೂಡಲೆ ತ್ರಿವಿಕ್ರಮನಾಗಿ ಬೆಳೆದು ತನ್ನ ಒಂದು ಅಡಿಯಿಂದ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹೋಲೋಕ, ಜನೋಲೋಕ, ತಪೋ-ಲೋಕ, ಸತ್ಯಲೋಕಗಳೆಂಬ ಸಪ್ತ ಊರ್ಧ್ವಲೋಕಗಳನ್ನೂ; ಮತ್ತೊಂದು ಅಡಿಯಿಂದ ಅತಲ, ವಿತಲ, ಪಾತಾಲ, ಸುತಲ, ತಲಾತಲ, ರಸಾತಲ, ಮಹಾತಲಗಳೆಂಬ – ಸಪ್ತ ಅಧೋಲೋಕಗಳನ್ನೂ ಅಳೆದು, ಮತ್ತೊಂದು

ಹೆಜ್ಜೆ ಎಲ್ಲಿಡಲೆಂದು ಕೇಳಿದಾಗ, ಮಹಾಬಲಿಯು ಶಿರಬಾಗಿ ತನ್ನ ತಲೆಯನ್ನು ತೋರಿಸಲು ಅದರ ಮೇಲಿಟ್ಟು – ಪರಿಪೂರ್ಣವಾಗಿ ತನ್ನದೇ ಆದ ವಿಶ್ವವನ್ನೇ, ತಾನು ಮತ್ತೊಬ್ಬನಾದ ಮಹಾಬಲಿಯು ತನಗೆ ಕೊಟ್ಟ ದಾನರೂಪದ ವಸ್ತುವಾಗಿ ತನ್ನ ವಶಪಡಿಸಿಕೊಂಡ.

ಆದರೆ, ವರಹಾರೂಪದಲ್ಲಿಯಾದರೋ, ತನ್ನ ವಸ್ತುವಾದ ಭೂಮಿ-ಯನ್ನು ವಾಮನಾವತಾರದಂತೆ ದಾನರೂಪವಾಗಿ ಪಡೆಯದೆ ಅಪಹರಿಸಿದ ಹಿರಣ್ಯಾಕ್ಷನನ್ನು ಸಂಹರಿಸಿ, ಮತ್ತೆ ತನ್ನ ವಶಮಾಡಿಕೊಂಡು ತನ್ನ ತೋಳ್ಬಲ-ದಿಂದಲೇ ಪಡೆದುದರಿಂದ ವರಾಹಾವತಾರವು ವಿಶಿಷ್ಟಪೂರ್ಣವಾದುದು.

**ವಿರೋಧಿನಿರಾಕರಣತ್ತುಕ್ಕುಮಳುವೇನ್ದವೇಂಡುಂ ಪರಶುರಾಮಾ-ವತಾರಂ ಪೋಲನ್ರಿಕ್ಕೇ, ಇವ್ವವತಾರತ್ತಿಲ್ ವಿರೋಧಿನಿರಾಕರಣತ್ತುಕ್ಕು ಭೂಮಿತಾನೇ ಸಾಕ್ಷಿಯಾಮ್ಪಡಿ ಇರುನ್ದದು.**

**ವಿರೋಧಿನಿರಾಕರಣತ್ತುಕು** = ವಿರೋಧಿಗಳಾದ ದುಷ್ಟಕ್ಷತ್ರಿಯರನ್ನು ನಿರಾಕರಿಸಲು (ಸಂಹರಿಸಲು), **ಮಳುವೇಂದವೇಂಡುಂ** = ಕೊಡಲಿಯನ್ನು ಹಿಡಿಯಲಪೇಕ್ಷಿಸಿದ, **ಪರಶುರಾಮಾವತಾರಂಪೋಲ್** = ಪರಶುರಾಮಾವ-ತಾರದಂತೆ, **ಅನ್ರಿಕ್ಕೆ** = ಇಲ್ಲದಂತೆ, **ಇವ್ವವತಾರತ್ತಿಲ್** = ಈ ವರಾಹಾವ-ತಾರದಲ್ಲಿ, **ವಿರೋಧಿನಿರಾಕರಣತ್ತುಕ್ಕು** = ವಿರೋಧಿಯಾದ ಹಿರಣ್ಯಾಕ್ಷ-ನನ್ನು ನಿರಾಕರಿಸಲು (ಸಂಹರಿಸಲು), (ಬೇರಾವ ವಸ್ತುವನ್ನೂ ಅಪೇಕ್ಷಿಸದೇ, ತಾನೇ ತನ್ನ ತೋಳ್ಬಲದಿಂದ ಅಸುರನನ್ನು ನಿರಾಕರಿಸಿದುದಕ್ಕೆ), **ಭೂಮಿ** = ಭೂದೇವಿಯು, **ತಾನೇ** = ಸ್ವತಃ ತಾನೊಬ್ಬಳೇ, **ಸಾಕ್ಷಿಯಾಂಪಡಿ** = ಸಾಕ್ಷಿ-ಯಂತೆ, **ಇರುನ್ದದು** = ಇದ್ದಳು.

ಪರಶುರಾಮಾವತಾರಕಾಲದಲ್ಲಿ ೨೧ ಸಲ ಇಡೀ ಭೂಮಂಡಲವನ್ನು ಸುತ್ತಿ ಭಗವಂತನು, ತನ್ನ ಆಶ್ರಿತರಿಗೆ ವಿರೋಧಿಗಳಾದ ದುಷ್ಟ ಕ್ಷತ್ರಿಯರೆಲ್ಲ-ರನ್ನೂ, ತನ್ನ ಆಯುಧವಾದ ಕೊಡಲಿಯ ಸಹಾಯದಿಂದ ಧ್ವಂಸಮಾಡಿ-ದನು. ಆ ಸಮಯದಲ್ಲಿ ತನಗಿಂತಲೂ ಬೇರೆಯದಾದ ಕೊಡಲಿಯ ಸಹಾಯ-

ವನ್ನು ಪಡೆದಿದ್ದನು. ಆದರೆ ವಾಮನಾವತಾರಕಾಲದಲ್ಲಿ ತನ್ನನ್ನಾಶ್ರಯಿಸಿದ ಭೂಮಿಯನ್ನು ಸಂರಕ್ಷಣೆ ಮಾಡುವ ಸಮಯದಲ್ಲಿ, ವಿರೋಧಿಯಾದ ಹಿರಣ್ಯಾಕ್ಷನನ್ನು ಸಂಹರಿಸಲು ತನ್ನ ರೂಪವನ್ನು ಬಿಟ್ಟು ಬೇರೆ ಯಾವುದರ ಸಹಾಯವನ್ನೂ ಅಪೇಕ್ಷಿಸಲಿಲ್ಲ. ಆ ಸಮಯದಲಿದ್ದ ಭೂಮಿತಾಯಿಯೇ ಇದಕ್ಕೆ ಸಾಕ್ಷಿಭೂತಳಾಗಿದ್ದಳು. ಆದುದರಿಂದ ಪರಶುರಾಮಾವತಾರ-ಕ್ಕಿಂತಲೂ ವರಾಹಾವತಾರವು ವೈಶಿಷ್ಟ್ಯಪೂರ್ಣವಾದುದು.

**ಚಕ್ರವರ್ತಿ ತಿರುಮಗನಾರ್ ಅವತಾರಂಪೋಲೇ ಭೂಮಿಯಿಲುಳ್ಳ ಚರಾಚರಙ್ಗಳ್ಳೈ ತರ್ ಪದತ್ತಿಲೇ ಏತ್ತಂಆಳವನ್ರಿಕ್ಕೇ, ಇದು ಭೂಮಿ ತನ್ನೈ ತೋಳಿಲೇ ಎತ್ತುಂ ಅವತಾರಮಾಯಿರುನ್ದದು.**

**ಚಕ್ರವರ್ತಿ ತಿರುಮಗನಾರ್** = ದಶರಥ ಚಕ್ರವರ್ತಿಯ ಕುಮಾರ-ನಾದ ಶ್ರೀರಾಮಚಂದ್ರನ, **ಅವತಾರಂಪೋಲೇ** = ಅವತಾರದಂತೆ, **ಭೂಮಿ-ಯಿಲುಳ್ಳ** = ಭೂಮಿಯಲ್ಲಿದ್ದ, **ಚರಾಚರಂಗಳ್ಳೈ** = ಚರಾಚರವಸ್ತುಗಳೆಲ್ಲ-ವನ್ನೂ, **ತರ್ ಪದತ್ತಿಲೇ** = ತನ್ನ ಸ್ಥಾನವಾದ ಶ್ರೀ ವೈಕುಂಠಲೋಕಕ್ಕೆ **ಏತ್ರುಂ ಆಳವು** = ಹತ್ತಿಸಿದಂತೆ, **ಅನ್ರಿಕ್ಕೆ** = ಇಲ್ಲದೆ, **ಇದು** = ಈ ವರಾಹಾವ-ತಾರವು, **ಭೂಮಿತನ್ನೈ** = (ಚರಾಚರಗಳಿಂದ ಕೂಡಿದ) ಭೂಮಿಯನ್ನು, **ತನ್ನ ತೋಳಿಲೇ** = ತೋಳಿನಮೇಲೆ, **ಏತ್ತುಂ** = ಹೊತ್ತುಕೊಂಡ **ಅವತಾರ-ಮಾಯಿರುಂದದು** = ಅವತಾರವಾಗಿದ್ದಿತು.

ಭಗವಂತನು ದಶರಥನ ಮಗನಾಗಿ ಶ್ರೀರಾಮನಾಗಿ ಅವತರಿಸಿದಾಗ, ತನ್ನ ಅವತಾರದ ಅವಸಾನಕಾಲದಲ್ಲಿ ಭೂಮಿಯಲ್ಲಿದ್ದ ಚರಾಚರವಸ್ತುಗ-ಳೆಲ್ಲವನ್ನೂ ತನ್ನ ಸ್ಥಾನವಾದ ಶ್ರೀವೈಕುಂಠಲೋಕಕ್ಕೆ ಕರೆದೊಯ್ದನು. ಇದರಿಂದ ತನ್ನನ್ನಾಶ್ರಯಿಸಿದ ಭೂದೇವಿಗೆ, ಲೀಲಾವಿಭೂತಿಯಲ್ಲಿ ತನಗೆ ಮಕ್ಕಳಂತಿದ್ದ ಚರಾಚರಗಳೆಲ್ಲವನ್ನೂ ಕಳೆದುಕೊಂಡು ಸಂತೋಷವಿಲ್ಲದೆ, ಲೀಲಾವಿಭೂತಿಯ ರಸಾಸ್ವಾದಕ್ಕೆ ಅವಕಾಶವಿಲ್ಲದಂತೆ ಮಾಡಿದನು. ಆದರೇ ವರಾಹಾವತಾರ ಕಾಲದಲ್ಲಿ ಪರಮಾತ್ಮನು ತನ್ನನ್ನು ಆಶ್ರಯಿಸಿದ್ದ ಭೂಮಿ-ತಾಯಿಯೊಡನೆ ಏಕಾಂತದಲ್ಲಿ ಕೂಡಿ, ಆಕೆ ಮುಂದೆ ಲೀಲಾವಿಭೂತಿಯಲ್ಲಿ

ಚರಾಚರಗಳೆಂಬ ಮಕ್ಕಳನ್ನು ಪಡೆದು ಲೀಲಾವಿಭೂತಿಯ ರಸಾಸ್ವಾದವನ್ನು ಪಡೆಯುವಂತೆ ಅನುಗ್ರಹಿಸಿ, ತನ್ನ ಪ್ರೇಯಸಿಯನ್ನು ತನ್ನ ತೋಳಿನಮೇಲೆ ಕುಳ್ಳಿರಿಸಿಕೊಂಡು ತಂದು ಆನಂದದಿಂದ ರಕ್ಷಿಸಿದನು. ಆದುದರಿಂದ ಶ್ರೀರಾಮಾವತಾರಕ್ಕಿಂತಲೂ ವರಾಹಾವತಾರವು ವೈಶಿಷ್ಟ್ಯಪೂರ್ಣವಾದುದು.

**ಬಲಭದ್ರಾವತಾರಂಪೋಲೇ ಭೂಮಿಕ್ಕು ಕ್ಷತಿಯೈ ಪಣ್ಣುವದೊರು ಉಪಕರಣತ್ತೈ ಕೈಯಿಲ್ ಕೊಂಡಿರುಕ್ಕೈ ಅನ್ರಿಕ್ಕೇ, ಇದು ಭೂಮಿಕ್ಕು ಕ್ಷತಿವರಾದ ಪಡಿ ಯೆಡುಕ್ಕುಮ್ ಸಹಜಮಾನ ಮುಖ್ಯೋಪಕಾರತ್ತೈಯುಡೈತ್ತಾಯಿರುಕ್ಕುಮ್.**

**ಬಲಭದ್ರಾವತಾರಂಪೋಲೇ** = ಬಲರಾಮಾವತಾರದಂತೆ, **ಭೂಮಿಕ್ಕು** = ಭೂಮಿಗೆ, **ಕ್ಷತಿಯೈ** = ಗಾಯವನ್ನು, **ಪಣ್ಣುವದು** = ಉಂಟುಮಾಡುವ, **ಒರು ಉಪಕರಣತ್ತೈ** = (ನೇಗಿಲೆಂಬ) ಒಂದು ಉಪಕರಣವನ್ನು, **ಕೈಯಿಲ್** = ಕೈಯಲ್ಲಿ, **ಕೊಂಡಿರುಕ್ಕೈ** = ಹೊಂದಿರುವಂತೆ, **ಅನ್ರಿಕ್ಕೇ** = ಇಲ್ಲದೇ. **ಇದು** = ಈ ವರಾಹಾವತಾರವು, **ಭೂಮಿಕ್ಕು** = ಭೂದೇವಿಗೆ, **ಕ್ಷತಿವರಾದಪಡಿ** = ಯಾವ ತೊಂದರೆಯೂ ಉಂಟಾಗದಂತೆ, **ಎಡುಕ್ಕುಮ್** = ಮೇಲೆತ್ತಲು, **ಸಹಜಮಾನ** = ಸಹಜವಾದ (ತನ್ನ ಪ್ರೇಮದಿಂದ, ಆಕೆಗೂ ಮತ್ತು ಆಕೆಯಲ್ಲಿ ಮುಂದೆ ಜನ್ಮತಾಳುವ ಮಕ್ಕಳಿಗೂ) **ಮುಖ್ಯ ಉಪಕಾರತ್ತೈಮುಡೈತ್ತಾಯ್** = ಮುಖ್ಯವಾದ ಉಪಕಾರವನ್ನು ಮಾಡುವುದಾಗಿ, **ಇರುಕ್ಕುಮ್** = ಇರುತ್ತದೆ.

ಬಲರಾಮಾವತಾರದಲ್ಲಿ ಭಗವಂತನು ನೇಗಿಲನ್ನು ತನ್ನ ಉಪಕರಣವಾಗಿ ಹೊಂದಿದ್ದ. ಈ ನೇಗಿಲನ್ನು ಭೂಮಿಯನ್ನು ಊಳುವ ಸಮಯದಲ್ಲಿ ಉಪಯೋಗಿಸುತ್ತಾರೆ. ಆಗ ಉಪಕರಣವು ಭೂಮಿಯನ್ನು ಕೆತ್ತುವುದರಿಂದ, ಭೂಮಿಗೆ ಗಾಯವನ್ನುಂಟುಮಾಡುತ್ತದೆ. ಆ ರೀತಿ ಗಾಯವನ್ನುಂಟು ಮಾಡುವ ಉಪಕರಣವನ್ನು ಸದಾ ಧರಿಸಿದ್ದ ಬಲರಾಮಾವತಾರಕ್ಕಿಂತ ವರಾಹಾವತಾರವು ವೈಶಿಷ್ಟ್ಯಪೂರ್ಣವಾದುದು. ಈ ಅವತಾರದಲ್ಲಿ, ಪರಮಾತ್ಮನು ತನ್ನ ಪ್ರೇಯಸಿಯಾದ ಭೂದೇವಿಯು ಸಮುದ್ರದಡಿಯಲ್ಲಿ ಬಿದ್ದಿ-

ದ್ದಾಗ, ಅವಳಿಗೆ ಯಾವುದೇ ರೀತಿಯಲ್ಲಿಯೂ ಸ್ವಲ್ಪವೂ ಏಟು ತಗುಲದಂತೆ ಆಕೆಯನ್ನು ತನ್ನ ಸಹಜವಾದ ಪ್ರೇಮದಿಂದ ಮೇಲೆತ್ತಿಕೊಂಡು ಬಂದನು. ಅಂತೆಯೇ ಭೂದೇವಿಯೊಡನೆ ತಾನು ಏಕಾಂತದಲ್ಲಿರಲು, ಆಕೆಯೂ ಪ್ರೇಮ ಭರಿತವಾದ ಮಾತುಗಳಿಂದ ಆತನನ್ನು ಒಲಿಸಿಕೊಂಡು, ಮುಂದೆ ತನ್ನಲ್ಲಿ ಜನ್ಮತಾಳುವ ಮಕ್ಕಳು ನಿರಂತರವಾದ ಸುಖವನ್ನು ಪಡೆಯಲು ಮಾಡಬೇಕಾದ ಉಪಾಯಾನುಷ್ಠಾನವನ್ನು ತಿಳಿಸಬೇಕೆಂದು ಪ್ರಾರ್ಥಿಸಿದಾಗ, ಅವಳ ಮಾತಿಗೆ ಓಗೊಟ್ಟು ಪರಮಾತ್ಮನು, ಆ ಉಪಾಯವನ್ನು ಉಪದೇಶಿಸಿ, ಆ ಭೂಮಿತಾಯಿಯಲ್ಲಿಯೇ ಜನ್ಮ ಪಡೆದ ನಮ್ಮೆಲ್ಲರಿಗೂ ಪ್ರಧಾನವಾಗಿ ಉಪಕಾರ ಮಾಡಿದ್ದಾನೆ.

**"ಶಿಷ್ಯಸ್ತೇಽಹಂ ಶಾಧಿಮಾಂ ತ್ವಾಂ ಪ್ರಪನ್ನಂ" -ಎನ್ರವನುಕ್ಕು ಉಪದೇಶಿಕ್ಕತ್ತೊಡಂಗಿ ಕರ್ಮಯೋಗಾದಿಗಳಿಲೇ ಅಧಿಕರಿತ್ತು ಕಡೈಯಾಯಿರುಪ್ಪದೊರು ಶ್ಲೋಕತ್ತಿಲೇ ಪರಮಹಿತತ್ತೈ ಕಾಟ್ಟಿನ ಕೃಷ್ಣಾವತಾರಮನ್ರಿಕ್ಕೇ ಇದು "ಅಹಂ ಶಿಷ್ಯಾ ಚ ದಾಸೀ ಚ ಭಕ್ತಾ ಚ ತ್ವಯಿ ಮಾಧವ" ಎನ್ನಾರ್ಕು ಆರಂಭತ್ತಿಲೇ ಮುಳುಕ ಮಣಂಕೊಂಡು ಉಪದೇಶಿಕ್ಕಂ ಪಡಿಯಾಯಿರುನ್ದದು.**

"**ಅಹಂ**=ನಾನು, **ತೇ**=ನಿನ್ನ, **ಶಿಷ್ಯಃ**=ಶಿಷ್ಯನು, **ತ್ವಾಂ**=ನಿನ್ನನ್ನು **ಪ್ರಪನ್ನಂ**=ಶರಣುಹೋಗಿರುವ, **ಮಾಂ**=ನನ್ನನ್ನು ಕುರಿತು, **ಶಾಧಿ**=(ಉಪಾಯವನ್ನು) ಉಪದೇಶಿಸು" (ಭಗವದ್ಗೀತೇ, ೨ ಅ.) **ಎನ್ರವನುಕ್ಕು**=ಎಂದು ಹೇಳಿದ ಅರ್ಜುನನಿಗೆ, **ಉಪದೇಶಿಕ್ಕ**=ಉಪದೇಶಿಸಲು, **ತೊಡಂಗಿ**=ಪ್ರಾರಂಭಿಸಿ, **ಕರ್ಮಯೋಗಾದಿಗಳಿಲೇ**=ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಾದಿಗಳಲ್ಲಿ, **ಅಧಿಕರಿತ್ತು**=(ಇರುವ ವಿಷಯವನ್ನು) ಉಪದೇಶಿಸಿ, **ಕಡೈಯಾಯಿರುಪ್ಪದು**=(ಭಗವದ್ಗೀತೆಯಲ್ಲಿ ತನ್ನ-ಉಪದೇಶವಾಗಿ) ಕೊನೆಯದಾಗಿರುವ, **ಒರುಶ್ಲೋಕತ್ತಿಲೇ**="ಸರ್ವಧರ್ಮಾನ್ ... ..." ಎಂಬ ಒಂದು ಶ್ಲೋಕದಲ್ಲಿ, **ಪರಮಹಿತತ್ತೈ**=ಪರಮಹಿತವಾದ 'ಶರಣಾಗತಿ' -ಎಂಬ ಉಪಾಯವನ್ನು, **ಕಾಟ್ಟಿನ**=ತೋರಿಕೊಟ್ಟ,

**ಕೃಷ್ಣಾವತಾರಮನ್ರಿಕ್ಕೆ**=ಕೃಷ್ಣಾವತಾರದಂತಿಲ್ಲದೇ, **ಇದು**=ಈ ವರಾಹಾ-ವತಾರವು, "**ಮಾಧವ**=ಎಲೈ ! ಶ್ರಿಯಃಪತಿಯೇ !, **ತ್ವಯಿ**=ನಿನ್ನಲ್ಲಿ, **ಅಹಂ**=ನಾನು, **ಶಿಷ್ಯಾ**=ಶಿಷ್ಯಳೂ, **ದಾಸೀ**=ದಾಸಿಯೂ, **ಚ**=ಮತ್ತು **ಭಕ್ತಾ**-ಭಕ್ತಳೂ (ಆಗಿದ್ದೇನೆ)" —**ಎನ್ನಾಕ್ಕುಕ್ಕ**=ಎಂದು ಹೇಳಿದ ಭೂಮಿ-ತಾಯಿಗೆ, **ಆರಂಭತ್ತಿಲೆ**=(ತನ್ನ ಉಪದೇಶದ) ಪ್ರಾರಂಭದಲ್ಲಿಯೇ, **ಮುಳುಕಿ**=ವೇದಶಾಸ್ತ್ರಾದಿಗಳಲ್ಲಿ ಮುಳುಗಿ, **ಮಣಂಕೊಂಡು**=ಅದರ ಸಾರಭೂತವಾದ(ಸುಲಭೋಪಾಯವಾದ ಶರಣಾಗತಿಯನ್ನು) **ಉಪದೇಶಿಕ್ಕುಂ ಪಡಿಯಾಯ್**=ಉಪದೇಶಿಸುವಂತೆ, **ಇರುನ್ದದು**=ಇದ್ದಿತು.

ಭಗವಂತನು ಕೃಷ್ಣಾವತಾರ ಮಾಡಿದ ಕಾಲದಲ್ಲಿ, ಕುರುಕ್ಷೇತ್ರದಲ್ಲಿ ಕೌರವ-ಪಾಂಡವರಿಗೆ ಪರಸ್ಪರ ಯುದ್ಧ ಪ್ರಾರಂಭವಾಗಿರಲು, ಧರ್ಮಾ-ಧರ್ಮಗಳನ್ನು ಸ್ಪಷ್ಟವಾಗಿ ಅರಿಯದೆ, ಅವುಗಳ ಭಯದಿಂದ ಆ ಕುಲಗೊಂಡ-ಪಾರ್ಥನು ಏನೂಮಾಡಲೂ ತೋಚದೆ, ತನ್ನ ರಥದ ಸಾರಥಿಯಾಗಿದ್ದ ಕೃಷ್ಣನನ್ನು ನೋಡಿ "ಎಲೈ ಕೃಷ್ಣನೇ, ನಾನು ನಿನ್ನ ಶಿಷ್ಯ. ನಿನ್ನಲ್ಲಿ ಶರಣು-ಹೋಗಿದ್ದೇನೆ. ಈಗ ನಾನೇನು ಮಾಡಬೇಕೆಂದು ಉಪದೇಶಿಸು" –ಎಂದ ಪ್ರಾರ್ಥನೆ ಮಾಡಿದನು. ಆಗ ಕೃಷ್ಣನು ಅರ್ಜುನನಿಗೆ ಕರ್ಮಯೋಗ, ಜ್ಞಾನಯೋಗ-ಭಕ್ತಿಯೋಗಗಳನ್ನು (ಸಂಸಾರ ತರಣೋಪಾಯವಾಗಿ) ಉಪ-ದೇಶಿಸುತ್ತಾನೆ. ಆಗ ಇದೆಲ್ಲವನ್ನೂ ಕೇಳಿದ ಅರ್ಜುನನು –"ಮನಸ್ಸು ಚಂಚಲವಾದುದು. ನೀನು ಉಪದೇಶಿಸಿದ ಯಾವುದೇ ಯೋಗವನ್ನೂ ಅನುಷ್ಠಿಸಲು ನಾನು ಅಶಕ್ತನಾಗಿದ್ದೇನೆ. ನನ್ನನ್ನು ನೀನು ಕಾಪಾಡು" ಎಂದು ಬೇಡಿದಾಗ, ಕೊನೆಯದಾಗಿ ಬಹು ಸುಲಭೋಪಾಯವಾದ ಪರಮ-ಹಿತವಾದ 'ಶರಣಾಗತಿ' ಎಂಬ ಉಪಾಯವನ್ನು ಈ ಕೆಳಕಂಡ ಶ್ಲೋಕದಲ್ಲಿ ಉಪದೇಶಿಸಿದನು.

**"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ |**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ||"**

–ಭಗವದ್ಗೀತೆ (೧೮)

"ನೀನು ಕರ್ಮಯೋಗ ಜ್ಞಾನಯೋಗ ಭಕ್ತಿಯೋಗಾದಿಗಳನ್ನು ಅನುಷ್ಠಿಸಲು ಅಶಕ್ತನಾಗಿದ್ದರೆ, ಅವುಗಳನ್ನು ಬಿಟ್ಟು, ನನ್ನೊಬ್ಬನನ್ನೇ ಶರಣುಹೋಗು. (ನೀನು ಅನುಷ್ಠಿಸಬೇಕಾದ ಆ ಕರ್ಮಯೋಗಾದಿಗಳ ಸ್ಥಾನದಲ್ಲಿ ನಾನೇ ನಿಂತು) ನಿನ್ನನ್ನು ಸರ್ವವಿಧ ಪುಣ್ಯ ಪಾಪರೂಪ ಬಂಧನದಿಂದ ಬಿಡುಗಡೆ ಮಾಡುತ್ತೇನೆ. ದುಃಖಿಪಡಬೇಡ" –ಎಂದು ಕೃಷ್ಣಾವತಾರಕಾಲದಲ್ಲಿ ಅರ್ಜುನನಿಗೆ ಮೊದಲು ಕರ್ಮಯೋಗಾದಿ ಕ್ಲಿಷ್ಟವಾದ ಉಪಾಯವನ್ನು ಉಪದೇಶಿಸಿ, ಒಂದು ಕ್ಷಣ ಅವನು, ಅವುಗಳನ್ನು ತಾನು ಅನುಷ್ಠಿಸಲು ಸಾಧ್ಯವಿಲ್ಲವೆಲ್ಲಾ ಎಂದು ಚಿಂತಿಸುವಂತೆ ಮಾಡಿ, ಅವನು ತನ್ನ ಅಶಕ್ತತೆಯನ್ನು ಅರುಹಿದ ಬಳಿಕ, ಸುಲಭೋಪಾಯವಾದ ಪರಮಹಿತವನ್ನು ಉಪದೇಶಿಸಿದನು.

ವರಾಹಾವತಾರಕಾಲದಲ್ಲಿಯಾದರೋ, ಭೂದೇವಿಯು ವರಾಹನನ್ನು ಕುರಿತು– "ಎಲೈ ! ಮಾಧವನೇ ! ನಾನು ನಿನ್ನಲ್ಲಿ ಶಿಷ್ಯಳೂ, ದಾಸಳೂ, ಭಕ್ತಳೂ ಆಗಿದ್ದೇನೆ" –ಎಂದು ಹೇಳುತ್ತಿರುವಲ್ಲಿಯೇ ಪರಮ ಕರುಣೆಯಿಂದ ಕೂಡಿ ಪರಮಾತ್ಮನು, ವೇದಾದಿ ಶಾಸ್ತ್ರಗ್ರಂಥಗಳಲ್ಲೆಲ್ಲಾ ಮುಳುಗಿ, ಅದರಲ್ಲಿ ಸಾರಭೂತವಾಗಿಯೂ, ಸರ್ವರಿಂದಲೂ ಅನುಷ್ಠಿಸಲು ಸುಲಭವಾದ ಉಪಾಯವೂ ಆಗಿರುವ ಪರಮಹಿತವೂ ಆದ 'ಶರಣಾಗತಿ'ಯನ್ನು (ಇತರ ಕರ್ಮಯೋಗಾದಿಗಳನ್ನು ಉಪದೇಶಿಸಿ ಕ್ಲೇಶಕ್ಕೆ ಒಳಗುಮಾಡದೆ) ನೇರವಾಗಿ ಉಪದೇಶಿಸಿದನು. ಆದುದರಿಂದ ಕೃಷ್ಣಾವತಾರಕ್ಕಿಂತಲೂ ವರಾಹಾವತಾರವು ವೈಶಿಷ್ಟ್ಯಪೂರ್ಣವಾದುದಾಗಿದೆ.

**"ಕರ್ಕಿಯಾಮಿನ್ನಂ" –ಎನ್ನುಂಪಡಿ ಭಾವ್ಯುಪಕಾರಕಮಾನ ಕಲ್ಕ್ಯವತಾರಂ ಪೋಲನ್ರಿಕ್ಕೇ ಇದು ಭೂತೋಪಕಾರಮುಂಡಾನ ಅವತಾರಮಾಯಿರುನ್ನದು.**

**"ಕರ್ಕಿಯಾಮಿನ್ನಂ"**=ಇನ್ನೂ ಕಲ್ಕ್ಯವತಾರವಾಗಬೇಕು, **ಎನ್ರುಂಪಡಿ**=ಎಂದು ಹೇಳುವಂತೆ, **ಭಾವ್ಯುಪಕಾರಕಮಾನ**=ಭವಿಷ್ಯತ್ಕಾಲದಲ್ಲಿ ಮುಂದೆ ಉಪಕಾರಕವಾಗುವ, **ಕಲ್ಕ್ಯವತಾರಂಪೋಲನ್ರಿಕ್ಕೆ**=ಕಲ್ಕ್ಯವತಾರದಂತಿಲ್ಲದೆ, **ಇದು**= ಈ ವರಾಹಾವತಾರವು, **ಭೂತೋಪಕಾರಮುಂಡಾನ**

=ಪೂರ್ವದಲ್ಲಿಯೇ ತನ್ನ ಉಪದೇಶದಿಂದ ಉಪಕರಿಸಿರುವ; **ಅವತಾರಮಾ-ಯಿರುನ್ದದು**=ಅವತಾರವಾಗಿರುತ್ತದೆ,

ಕಲಿಯುಗದಲ್ಲಿ ಭಗವಂತನು ಕಲ್ಕ್ಯವತಾರವನ್ನು ಮಾಡುತ್ತಾನೆಂದು ಪುರಾಣಾದಿಗಳು ನಮಗೆ ತಿಳಿಸುತ್ತವೆ. ಆ ಕಲ್ಕ್ಯವತಾರಕಾಲದಲ್ಲಿ ಪರಮಾತ್ಮನು ಮಾಡುವ ಉಪದೇಶವು ಅವನ ಸಮಕಾಲೀನರಾಗಿಯೂ, ನಂತರ ಕಾಲದಲ್ಲಿಯೂ ಜನ್ಮವೆತ್ತುವ ಚೇತನರಿಗೆ ಮಾತ್ರ ಉಪಕಾರಕವಾಗಿರುತ್ತದೆ. ಈಗ ನಾವಿರುವುದು ಕಲಿಯುಗದ ಪ್ರಥಮಪಾದದಲ್ಲಿ, ನಾಲ್ಕನೆಯ ಪಾದ-ದಲ್ಲಿ ಪರಮಾತ್ಮನು ಅವತರಿಸಿ ಮುಂದೆ ಅವನು ಕೊಡುವ ಉಪದೇಶಾದಿಗಳು ಏನುಂಟೋ, ಅದು ನಮಗೀಗ ತಿಳಿಯದಿರುವುದರಿಂದ, ಆ ಕಲ್ಕ್ಯವತಾರದಿಂದ ಈಗ ನಮಗೆ ಯಾವ ಪ್ರಯೋಜನವೂ ಇಲ್ಲ. ವರಾಹಾವತಾರವಾದರೋ ಪೂರ್ವದಲ್ಲಿಯೇ ನಡೆದು, ಧರ್ಮಕಾರ್ಯವನ್ನು ಮಾಡಲು ಅವಕಾಶವೇ ಇಲ್ಲದ ಈ ಕಲಿಯುಗದಲ್ಲಿ ಕರ್ಮಯೋಗಾದಿಗಳನ್ನು ಮಾಡಲು ಅಶಕ್ತರೂ ಆದ ನಮಗೆ ಲಘೂಪಾಯವಾದ 'ಶರಣಾಗತಿ'ಯನ್ನು ಮೊದಲೇ ವರಾಹನು ಉಪದೇಶಿಸಿ ಉಪಕರಿಸಿರುವುದರಿಂದ ಕಲ್ಕ್ಯವತಾರಕ್ಕಿಂತಲೂ ವರಾಹಾವ-ತಾರವು ವೈಶಿಷ್ಟ್ಯಪೂರ್ಣವಾದುದು.

**ಆಕ್ಕೈಯಾಲಿಪ್ಪುರಾಣಪ್ರವರ್ತಕಮಾನ ಇವ್ವವತಾರತ್ತುಕ್ಕು ಮಾನಮಿಲಾದಾಪೋಲೇ ಉಪಮಾನಮುಂ ಇಲ್ಲೈ.**

**ಆ ಕೈಯಾಲ್**=ಆದುದರಿಂದ, **ಇಪ್ಪುರಾಣ**=ಈ ವರಾಹಪುರಾಣ-ದಲ್ಲಿ, **ಪ್ರವರ್ತಕಮಾನ**=ಹೇಳಲ್ಪಟ್ಟಿರುವ, **ಇವ್ವವತಾರತ್ತುಕ್ಕು**=ಈ ವರಾಹಾವತಾರಕ್ಕೆ,**ಮಾನಮಿಲಾದಾರ್ ಪೋಲೇ**=ತನ್ನ ಈಶ್ವರಾಭಿಮಾನ-ವಿಲ್ಲದಂತೆಯೇ, **ಉಪಮಾನಮ್**=ಉಪಮಾನ (ಅಥವಾ ಇದರಲ್ಲಿರುವ-ಧರ್ಮವನ್ನು ಹೊಂದಿ ಇದಕ್ಕೆ ಹೋಲಿಸಲ್ಪಡುವ ವಸ್ತುವೂ) **ಇಲ್ಲೈ**=ಇರುವುದಿಲ್ಲ.

ಮೇಲೆ ವಿವರಿಸಿರುವಂತೆ ಭಗವಂತನ ಪರ, ವ್ಯೂಹಸ್ವರೂಪಗಳಿಗಿಂತಲೂ

ಇತರ ಒಂಭತ್ತು ಅವತಾರಸ್ವರೂಪಗಳಿಗಿಂತಲೂ ವಿಲಕ್ಷಣವಾದ ವೈಶಿಷ್ಟ್ಯ-ಪೂರ್ಣವಾದ, ವರಾಹ ಪುರಾಣದಲ್ಲಿ ಪ್ರತಿಪಾದ್ಯವಾಗಿರುವ ಈ ವರಾಹಾವತಾರದ ಭಗವಂತನು ಅವತಾರಕಾಲದಲ್ಲಿ ಸಮುದ್ರದಡಿಯಲ್ಲಿ ಕೆಸರಿನಲ್ಲಿ ಹೂತಿದ್ದ, ತನ್ನನ್ನು ಆಶ್ರಯಿಸಿದ ಭೂಮಿಯನ್ನುದ್ಧರಿಸಲು ತನ್ನ ಈಶ್ವರಾಭಿಮಾನವನ್ನೂ ತೊರೆದು, ನೀರು ತೊಟ್ಟಿಕ್ಕುತ್ತಿರುವ ದೇಹದಿಂದ ಕೂಡಿ, ತಾನೂ ಕೆಸರಿನಲ್ಲಿ ಮುಳುಗಿ ಭೂಮಿಯನ್ನು ಉದ್ಧರಿಸಿದನು. ಈ ರೀತಿ ಈಶ್ವರಾಭಿಮಾನವನ್ನೂ ತೊರೆದು ಆರ್ತತ್ರಾಣಪರಾಯಣನಾದ ವರಾಹನಿಗೆ, (ಇವನ ಸಮಾನವಾದ ಧರ್ಮವುಳ್ಳ) ಹೋಲಿಸಲ್ಪಡುವ ವಸ್ತುವೂ ಮತ್ತೊಂದಿಲ್ಲ. ಇವನ ಅವತಾರವೇ-'ಅನುಪಮ'ವಾದುದು.

**ಇವ್ವವತಾರತ್ತೈ ಮನ್ವಾದಿ ಪರಮಾಪ್ತಪರಿಗಣನೈಯಿಲೇ ಧರ್ಮಶಾಸ್ತ್ರ ಪ್ರವರ್ತಕರ್‌ಕಳ್ ತಾಂಗಳೇ ಶೇರ್‌ತ್ತಾರ್‌ಕಳ್. ಇಪ್ಪಡಿ ವಕ್ತೃವೈಲಕ್ಷಣ್ಯತ್ತಾಲೇ ಇಪ್ಪುರಾಣಂ ಉತ್ಕೃಷ್ಟಮ್.**

**ಇವ್ವವತಾರತ್ತೈ**=ಈ ವರಾಹಾವತಾರವನ್ನು, **ಮನ್ವಾದಿ**=ಮನು-ಧರ್ಮಶಾಸ್ತ್ರವೇ ಮೊದಲಾದ, **ಪರಮಾಪ್ತಪರಿಗಣನೈಯಿಲೇ**=ಪರಮಾಪ್ತವಾದ ಶಬ್ದಪ್ರಮಾಣಗಳ ಎಣಿಕೆಯಲ್ಲಿ, **ಧರ್ಮಶಾಸ್ತ್ರಪ್ರವರ್ತಕರ್‌ಕಳ್**=ಧರ್ಮಶಾಸ್ತ್ರಗಳನ್ನು ಪ್ರಚಾರಮಾಡುವವರು, **ತಾಂಗಳೇ**=ತಾವಾಗಿಯೇ **ಶೇರ್‌ತಾರ್‌ಗಳ್**=ಸೇರಿಸಿದ್ದಾರೆ. **ಇಪ್ಪಡಿ**=ಈ ರೀತಿಯಾಗಿ, **ವಕ್ತೃವೈಲಕ್ಷಣ್ಯತ್ತಾಲೇ**=(ವಕ್ತೃವೈಲಕ್ಷಣ್ಯ) 'ಹೇಳುವವರ ವಿಲಕ್ಷಣತೆ'-ಇಂದ, **ಇಪ್ಪುರಾಣಂ**=ಈ ವರಾಹಪುರಾಣವು, **ಉತ್ಕೃಷ್ಟಮ್**=ಉತ್ತಮವಾದುದು.

'ಪ್ರಮಾ' ಎಂದರೆ ಸರಿಯಾದ ಜ್ಞಾನ. ಅದನ್ನು ತಿಳಿಸಲುಸಾಧನವಾದುದು ಪ್ರಮಾಣ. ವಿಷಯಗಳನ್ನು ಸರಿಯಾಗಿ ಅರಿಯಲು ಪ್ರತ್ಯಕ್ಷ, ಅನುಮಾನ, ಶಬ್ದವೆಂಬ ಮೂರು ವಿಧವಾದ ಪ್ರಮಾಣಗಳನ್ನು ಎಲ್ಲ ಶಾಸ್ತ್ರಜ್ಞರೂ ಸಾಮಾನ್ಯವಾಗಿ ಒಪ್ಪಿದ್ದಾರೆ. ಇಂದ್ರಿಯಗಳಿಂದ ನೇರವಾಗಿ ತಿಳಿದುಬರುವ ಜ್ಞಾನದಲ್ಲಿ-ಆಯಾ ಇಂದ್ರಿಯಗಳೇ 'ಪ್ರತ್ಯಕ್ಷ'ಪ್ರಮಾಣವಾಗಿರುತ್ತದೆ.

ಎರಡು ವಸ್ತುಗಳು ಎಲ್ಲ ಕಾಲದಲ್ಲಿಯೂ ಒಂದನ್ನೊಂದು ಬಿಟ್ಟಿಲ್ಲದೆ ಇರುವ (ಸಾಹಚರ್ಯ) ಜ್ಞಾನವನ್ನು ಹೊಂದಿರುವವನು, ಆ ಎರಡರಲ್ಲಿ ದೂರದಲ್ಲಿ ಒಂದನ್ನು ಮಾತ್ರ ಕಂಡಾಗ ಮತ್ತೊಂದೂ ಅಲ್ಲಿ ಇದ್ದೇ ಇದೆಯೆಂಬ ಜ್ಞಾನ-ವನ್ನು, ಮೊದಲಿಂದ ಅವೆರಡರಲ್ಲಿ ಅವನಿಗೆ ತಿಳಿದುಬಂದಿರುವ(ಒಟ್ಟಿಗಿರುವಿಕೆ) ಸಾಹಚರ್ಯಜ್ಞಾನದಿಂದ ಊಹಿಸುತ್ತಾನೆ. ಈ ರೀತಿ ಊಹಿಸುವಿಕೆಯೇ 'ಅನುಮಾನ' ಪ್ರಮಾಣ. ಯಥಾರ್ಥವಾದ ವಿಷಯವನ್ನು ತಿಳಿಸುವ ಶಬ್ದ ರೂಪದಲ್ಲಿರುವ ವಾಕ್ಯಗಳನ್ನು 'ಶಬ್ದ ಪ್ರಮಾಣ' –ಎನ್ನುತ್ತಾರೆ. ಅಪೌರು-ಷೇಯವಾಗಿ, ಪುರುಷಕರ್ತೃಕವಲ್ಲದುದರಿಂದ, ಚೇತನನಿಂದ ಸಂಭವಿಸಬಹು-ದಾದ ದೋಷ ಗಂಧವೇ ಇಲ್ಲದೆ, ಸತ್ಯಸ್ವರೂಪನಾದ ಪರಮಾತ್ಮನ ಬೇರೊಂದು ರೂಪಾಂತರವಾಗಿ ಶಬ್ದರೂಪದಲ್ಲಿದ್ದು "ಶಬ್ದಬ್ರಹ್ಮ" –ಎಂದು ಕರೆಯಲ್ಪಡುವ ವೇದಗಳು ನಮಗೆ ಸತ್ಯಾರ್ಥಬೋಧಕವಾದುದರಿಂದ ಪ್ರಪ್ರ-ಥಮವಾದ ಶಬ್ದಪ್ರಮಾಣವಾಗಿರುತ್ತದೆ. ಸತ್ಯವಾದ ವಿಷಯುಗಳನ್ನು ನುಡಿಯುವವನನ್ನು 'ಆಪ್ತ' ಎನ್ನುತ್ತಾರೆ. "ಆಪ್ತಸ್ತು ಯಥಾರ್ಥವಕ್ತಾ". ಕೆಲವು ಅತೀಂದ್ರಿಯವಾದ ಸೂಕ್ಷ್ಮವಾದ ವಿಷಯುಗಳನ್ನು ನಾವು ಪ್ರತ್ಯಕ್ಷಾನು-ಮಾನದಿಂದ ತಿಳಿದುಕೊಳ್ಳಲು ಸಾಧ್ಯವಿಲ್ಲದಿದ್ದಾಗ ಆಪ್ತವಾಕ್ಯದಿಂದ ತಿಳಿದು-ಕೊಳ್ಳಬಹುದು. "ಆಪ್ತವಾಕ್ಯಂ ಪ್ರಮಾಣಮ್" ಇದನ್ನು 'ಶಬ್ದಪ್ರಮಾಣ' ವೆನ್ನುತ್ತಾರೆ. ಸತ್ಯಸ್ವರೂಪನಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿ, ತತ್ತ್ವ-ವನ್ನರಿತು, ಎಂದೂ ಸುಳ್ಳಾಡದೆ, ಸತ್ಯವನ್ನೇ ಅರುಹುವ ನಮ್ಮ ಋಷಿಗಳ ಮಾತೆಲ್ಲವೂ –ನಮಗೆ ಶಬ್ದಪ್ರಮಾಣದಲ್ಲಿ ಸೇರುತ್ತದೆ.

ಯಾವುದರಿಂದ ಚೇತನರಿಗೆ ಉತ್ತರೋತ್ತರ ಏಳಿಗೆ ಮತ್ತು ನಿರಂತರ-ವಾದ ಶ್ರೇಯಸ್ಸು ಪ್ರಾಪ್ತವಾಗುತ್ತದೋ ಅದನ್ನು ಧರ್ಮವೆನ್ನುತ್ತಾರೆ. "ಯತಃ ಅಭ್ಯುದಯನಿಶ್ರೇಯಸಃ ಸಧರ್ಮಃ. ಧರ್ಮವನ್ನು ಅನುಷ್ಠಿಸುವ ಕ್ರಮುಗಳನ್ನು ತಿಳಿಸುವ ಗ್ರಂಥಗಳಿಗೆ ಧರ್ಮಶಾಸ್ತ್ರಗಳೆಂದು ಹೆಸರು. ಈ ಗ್ರಂಥಗಳನ್ನು ಪ್ರಚಾರಪಡಿಸಿ ಧರ್ಮಸ್ಥಾಪನೆ ಮಾಡುವವರೇ ಧರ್ಮ-ಪ್ರವರ್ತಕರು. ಇವರು ವೇದ ವೇದಾರ್ಥಗಳನ್ನರಿತವರಾಗಿದ್ದು ಧರ್ಮ-ಶಾಸ್ತ್ರಪ್ರತಿಪಾದ್ಯ ವಿಷಯುಗಳನ್ನು ತಮ್ಮ ಅನುಷ್ಠಾನದಿಂದ ಸಾಕ್ಷಾತ್ಕರಿಸಿ

ಕೊಂಡವರಾಗಿರುತ್ತಾರೆ. ಇವರು ವೇದಗಳನ್ನು ಮತ್ತು ವೇದಗಳಲ್ಲಿ ಪ್ರತಿಪಾದ್ಯವಾಗಿರುವ ವಿಷಯಗಳಿಗನುಗುಣವಾದ, ಸತ್ಯಾರ್ಥವನ್ನು ಬೋಧಿಸುವ ವೇದವಿರುದ್ಧವಲ್ಲದ ತತ್ತ್ವವಿಷಯಗಳನ್ನು ಸ್ಪಷ್ಟವಾಗಿ ನಮಗೆ ತಿಳಿಸುವ ಕೆಲ ಋಷಿಮುನಿಗಳ ಗ್ರಂಥಗಳನ್ನು ಮಾತ್ರವೇ 'ಆಪ್ತ' (ಶಬ್ದ) ಪ್ರಮಾಣವಾಗಿ ಉದ್ಧರಿಸುತ್ತಾರೆ. ಅವುಗಳಲ್ಲಿ ಪ್ರಧಾನವಾಗಿ ಮನುವೇ ಮೊದಲಾದ ಶಾಸ್ತ್ರಕರ್ತೃಗಳ ಗ್ರಂಥಗಳನ್ನು ಪರಮಾಪ್ತಗ್ರಂಥಗಳಾಗಿ ಪರಿಗಣಿಸಿದ್ದಾರೆ. ಆ ಪರಮಾಪ್ತ ಪ್ರಮಾಣಗಳಾದ ಗ್ರಂಥಗಳ ಮಧ್ಯದಲ್ಲಿ ವರಾಹ ಪುರಾಣವನ್ನೂ ಪರಿಗ್ಗಣಿಸಿದ್ದಾರೆ. ಆದುದರಿಂದ ಮೊದಲೇ ವಿವರಿಸಿರುವಂತೆ 'ಸತ್ಯಾರ್ಥವನ್ನೇ ತಿಳಿಸುವ'– ವಕ್ತೃ ವೈಲಕ್ಷಣ್ಯವನ್ನೂ ಈ ಪುರಾಣವು ಹೊಂದಿರುವುದರಿಂದ. ಇತರ ಪುರಾಣಾದಿಗಳಿಗಿಂತ ಈ ವರಾಹ ಪುರಾಣವು ಉತ್ಕೃಷ್ಟವಾದುದು.

**ಶ್ರೋತೃವೈಲಕ್ಷಣ್ಯತ್ತಾಲುಂ ಇದು ಸರ್ವೋತ್ಕೃಷ್ಟಮ್. ಎಂಗನೇ ಎನ್ನಿಲ್, ಶ್ರೀಭೂಮಿಪಿರಾಟ್ಟಿಯೈ ಜಗತ್ತುಕ್ಕು ಈಶಾನೈ ಎನ್ರು ಶ್ರುತಿಶೊಲ್ಲುಕೈಯಾಲೇ ಚೇತನಾಚೇತನರೂಪಮಾನ ಜಗತ್ತಿರ್ಕಾಟ್ಟಿಲ್ ಇವಳುಡೈಯ ಉತ್ಕರ್ಷಂ ಪ್ರಸಿದ್ಧಮ್.**

**ಶ್ರೋತೃವೈಲಕ್ಷಣ್ಯತ್ತಾಲುಂ**=ಕೇಳುವವರ ವಿಲಕ್ಷಣತೆಯಿಂದಲೂ, **ಇದು**=ಈ ವರಾಹ ಚರಮಶ್ಲೋಕವು, **ಸರ್ವೋತ್ಕೃಷ್ಟಮ್**=ಎಲ್ಲಕ್ಕಿಂತಲೂ ಉತ್ಕೃಷ್ಟವಾದ ಮಾತಾಗಿದೆ, **ಎಂಗನೇಎನ್ನಿಲ್**=ಹೇಗೆಂದರೆ, **ಶ್ರೀಭೂಮಿ ಪಿರಾಟ್ಟಿಯೈ**=ಭೂದೇವಿಯನ್ನು, **ಈಶಾನೈಎನ್ರು**=(ಜಗತ್ತಿಗೆ) ಒಡೆಯಳೆಂದು, **ಶ್ರುತಿಶೊಲ್ಲುಕೈಯಾಲೇ**=ವೇದಗಳು ಹೇಳುವುದರಿಂದ, **ಚೇತನಾ ಚೇತನರೂಪಮಾನ**=ಚೇತನ ಮತ್ತು ಅಚೇತನ ಕೂಡುವಿಕೆಯಿಂದ ತೋರುವ **ಜಗತ್ತಿರ್ಕಾಟ್ಟಿಲುಂ**=ಪ್ರಪಂಚಕ್ಕಿಂತಲೂ, **ಇವಳುಡೈಯ** = ಈ ಭೂಮಿತಾಯಿಯ, **ಉತ್ಕರ್ಷಂ** = ಉತ್ಕೃಷ್ಟತೆಯು, **ಪ್ರಸಿದ್ಧಮ್**=ಪ್ರಸಿದ್ಧವಾಗಿದೆ.

ಉಪದೇಶವನ್ನು ಕೇಳುವವರ ವೈಲಕ್ಷಣ್ಯದಿಂದಲೂ ಈ ವರಾಹ

ಚರಮಶ್ಲೋಕವು ಬಹಳ ಉತ್ಕೃಷ್ಟವಾದುದು. ವರಾಹನಿಂದ ಉಪದೇಶ-ಪಡೆದ ಭೂಮಿತಾಯಿಯ ಶ್ರುತಿಗಳಲ್ಲಿ "ಅಸ್ಯೇಶಾನಾ ಜಗತೋ ವಿಷ್ಣು ಪತ್ನೀ" (ತೈ.ಸಂ.೪ಕಾಂ,೪ಪ್ರ,೧೨ಅ,೫ಪಂ), "ಅಸ್ಯೇಶಾನಾ ಭುವನಸ್ಯಾಧಿಪತ್ನೀ", "ಈಶಾನಾದೇವೀ ಭವನಸ್ಯಾಧಿಪತ್ನೀ" (ತೈ.ಬ್ರಾ,೩ಅ, ೧೨ಪ್ರ,೩ಅ,೨ಪಂ) (ಭಗವಂತನಂತೆಯೇ ವಿಷ್ಣು ಪತ್ನಿಯಾದ ಈ ಭೂಮಿತಾಯಿಯೂ ಜಗತ್ತಿಗೆಲ್ಲಾ ಸ್ವಾಮಿನಿಯಾಗಿದ್ದಾಳೆ) –ಎಂದು ಸ್ತುತಿಸಲ್ಪಟ್ಟಿರುವುದರಿಂದ, ಈಕೆಯು ಚರಾಚರಾತ್ಮಕವಾದ, ಚೇತನಾ ಚೇತನರೂಪವಾದ ಪ್ರಪಂಚಕ್ಕಿಂತಲೂ ವಿಲಕ್ಷಣಳಾದುದರಿಂದ ಉತ್ಕೃಷ್ಟತೆಯನ್ನು ಹೊಂದಿದ್ದಾಳೆ.

**"ಕೃತಾಗಸಃ ಕ್ಷಾಮ್ಯತಿ ಕೇಶವಾಶ್ರಿತಾನಕಿಂಚಿನಾನ್ ಸ್ತ್ರಾ ಕಮಲಾ ಕಟಾಕ್ಷಯೇತ್ । ನ ಚ ಪ್ರಸಜ್ಯ ಪ್ರತಿಷೇಧಸೀತಿ ಯತ್ ಕ್ಷಮಾತ್ವಮೇವೋರ್ವಿ ಸಹಸ್ವಮಾಮಪಿ ॥"** –ಎನ್ನಿರಪಡಿ ಸರ್ವಂ ಸಹೈಯಾನ ಇವಳುಕ್ಕು ಸರ್ವೇಶ್ವರನುಕ್ಕಾಟ್ಟಿಲುಮ್, ಪೆರಿಯ ಪಿರಾಟ್ಟಿಕಾಟ್ಟಿಲುಮ್ ಕ್ಷಮಾದಿಗುಣ ಭೂಯಸ್ಸ್ಯಯುಂಡಾಯಿರು-ನ್ದದು.

"**ಕೇಶವಾಶ್ರಿತಾನ್**=ಭಗವಂತನನ್ನು ಶರಣುಹೋಗಿ, ಅವನನ್ನೇ ಆಶ್ರಯಿಸಿದವರನ್ನು ಮಾತ್ರವೇ, (ಕೇಶವನು), **ಕೃತಾಗಸಃ**=ಅಪರಾಧವ-ನ್ನೆಸಗಿದವರಾದರೂ, **ಕ್ಷಾಮ್ಯತಿ**=ಕ್ಷಮಿಸುತ್ತಾನೆ. **ಕಮಲಾ**=ಶ್ರೀದೇವಿ-ಯಾದರೋ, **ತ್ವ ಅಕಿಂಚನಾನ್**=ಅಕಿಂಚನರಾಧವರನ್ನು ಮಾತ್ರವೇ, **ಕಟಾಕ್ಷಯೇತ್**=ಕಟಾಕ್ಷಿಸಿ ರಕ್ಷಿಸುತ್ತಾಳೆ. (ಹೀಗಿರಲು ತನ್ನಲ್ಲಿಯೇ ಜನ್ಮ-ವೆತ್ತಿ, ಆ ಚೇತನರು ಅನೇಕವಿಧವಾದ ಕೆಟ್ಟ ಕೆಲಸಗಳನ್ನು ಮಾಡುವುದರಿಂದ ಅಪರಾಧವನ್ನೆಸಗಿದ್ದರೂ, ಭಗವಂತನೂ ಶ್ರೀದೇವಿಯೂ ಅವರನ್ನು ರಕ್ಷಿಸುವ ಸಮಯದಲ್ಲಿಯೂ –ತಾನೇ ಸ್ವತಃ ಅವರಿಗೆ ರಕ್ಷಣೆನೀಡುವ ಸಮಯ-ದಲ್ಲಿಯೂ) **ಯತ್**=ಯಾವ ನಿನ್ನ ಸಹನ ಶೀಲತೆಯಿಂದ, **ಪ್ರಸಜ್ಯ**= (ಆ ಚೇತನರ) ಅಪರಾಧವನ್ನೂ (ಅಥವಾ ಅವರು ಕೇಶವಾಶ್ರಿತರಲ್ಲವೆಂದಾ-ಗಲೀ, ಅಕಿಂಚಿನರಲ್ಲವೆಂದಾಗಲೀ) ಪ್ರಸ್ತಾಪಿಸಿ, **ಹೇ ಉರ್ವೀ**=ಎಲೈ ಭೂಮಿ-ತಾಯಿಯೇ ನೀನು, **ನ ಚ ಪ್ರತಿಷೇಧಸಿ**=(ಅವರ ರಕ್ಷಣೆಗೆ) ತಡೆಯುಂಟು-

ಮಾಡುವುದಿಲ್ಲ –**ಇತಿ**=ಎಂದು (ನಿನ್ನನ್ನು) **ಕ್ಷಮಾತ್ತ್ವಮೇವ**=ಕ್ಷಮಾ-ಗುಣವೇ ಮೂರ್ತಿವೆತ್ತಂತಿರುವಳೆಂದು ಹೇಳುವರೋ, (ಆ ನೀನು) **ಮಾಮಪಿ** =(ಅಪರಾಧಗಳನ್ನೆಸಗುತ್ತಿರುವ) ನನ್ನನ್ನೂ, **ಸಹಸ್ವ**=ಕ್ಷಮಿಸು",–ಎನ್ನಿರ-**ಪಡಿ**=ಎಂದು ಮೇಲಿನ ಶ್ಲೋಕದಲ್ಲಿ ಹೇಳಿರುವಂತೆ, **ಸರ್ವಂ ಸಹ್ಯೆಯಾನ**= ಸರ್ವವಿಧವಾದ ಅಪಚಾರಗಳನ್ನೂ ಸಹಿಸಿಕೊಳ್ಳುವ, **ಇವಳುಕ್ಕು**=ಈ ಭೂಮಿತಾಯಿಗೆ, **ಸರ್ವೇಶ್ವರನುಕ್ಕಾಟ್ಟಿಲುಮ್**=ಸರ್ವೇಶ್ವರನಾದ ಪರ-ಮಾತ್ಮನಿಗಿಂತಲೂ **ಪೆರಿಯಪಿರಾಟ್ಟಿಕ್ಕಾಟ್ಟಿಲುಮ್**=ಶ್ರೀದೇವಿಗಿಂತಲೂ, **ಕ್ಷಮಾದಿಗುಣಭೂಯಸ್ತ್ವಯುಂಡಾಯಿರುನ್ದದು** = ಸಹನಶೀಲತೆಯೇ ಮೊದಲಾದ ಗುಣಗಳು ಅಧಿಕವಾಗಿರುತ್ತದೆ.

ಭಗವಂತನು ತನ್ನಲ್ಲಿ ಶರಣುಹೋದ ಚೇತನರನ್ನು ಮಾತ್ರವೇ, ಅವರು ಮಾಡಿದ ಅಪರಾಧವನ್ನು ಕ್ಷಮಿಸಿ ರಕ್ಷಿಸುತ್ತಾನೆ. ಶ್ರೀದೇವಿಯಾದರೋ ಅಕಿಂ-ಚನರಾದ ಚೇತರನ್ನು ತನ್ನ ಕೃಪಾಕಟಾಕ್ಷವನ್ನು ಬೀರಿ ರಕ್ಷಿಸುತ್ತಾಳೆ. ಭೂಮಿಯಮೇಲೆ ಜನ್ಮವೆತ್ತಿರುವ ಈ ಚೇತನರು ಮಾಡಿರುವ ಸರ್ವವಿಧವಾದ ಅಪರಾಧಗಳೂ ಭೂಮಿತಾಯಿಗೆ ಗೊತ್ತು. ಹಾಗೆಯೇ, ಇವರಲ್ಲಿ ಯಾರು ಕೇಶವನ್ನಾಶ್ರಯಿಸಿರುವವರು, ಯಾರು ಅಕಿಂಚನರೂ, ಯಾರಲ್ಲ –ಎಂಬ ಎಲ್ಲ ವಿಷಯಗಳೂ ಇವಳಿಗೆ ತಿಳಿದೇ ಇದೆ. ಹೀಗಿದ್ದರೂ ತನ್ನಲ್ಲಿ ಜನ್ಮಪಡೆದ, ತನ್ನ ಮಕ್ಕಳಾದ ಈ ಎಲ್ಲ ಚೇತನರನ್ನೂ ಉದ್ಧರಿಸಿಯೇ ತೀರಬೇಕೆಂಬ ಹೆಬ್ಬ-ಯಕೆಯುಳ್ಳ ಈ ಭೂಮಿತಾಯಿಯು, ಅಪರಾಧವನ್ನೆಸಗಿದವರು–ಅದಿಲ್ಲದಿರು-ವವರು, ಕೇಶವಾಶ್ರಿತರು – ಕೇಶವನನ್ನಾಶ್ರಯಿಸದವರು, ಅಕಿಂಚನರು–ಅಂತಿಲ್ಲದಿರುವವರು –ಎಂಬ ಭೇದವಿಲ್ಲದೆ, ಮಕ್ಕಳೆಲ್ಲರಲ್ಲಿಯೂ ಒಂದೇ ತರಹ-ವಾದ ದೋಷವೇ ತಿಳಿಯದಿರುವ ವಾತ್ಸಲ್ಯವೆಂಬ ಗುಣದಿಂದ ಕೂಡಿರುವುದ-ರಿಂದ ಯಾವ ಒಬ್ಬ ಚೇತನನ ದೋಷವನ್ನೂ ಪ್ರಸ್ತಾಪಮಾಡಿ, ಅವನು ಪರಮಾತ್ಮನ ರಕ್ಷಣೆಗೆ ಅನರ್ಹನೆಂದೂ ಅಭಿಪ್ರಾಯಪಡುವುದಿಲ್ಲ. ಇವಳು ರಕ್ಷಿಸುವುದಕ್ಕೆ ಪರಮಾತ್ಮನಂತೆ ಇವಳನ್ನು ಚೇತನರು ಆಶ್ರಯಿಸಲೇಬೇಕೆಂದು-ಅಪೇಕ್ಷಿಸುವುದಿಲ್ಲ. ಅಥವಾ ಶ್ರೀದೇವಿಯಂತೆ ಅಕಿಂಚನರಾದ ಚೇತನರೇ ಆಗ-

ಬೇಕೆಂಬ ನಿಯಮವೂ ಇಲ್ಲ. ಆದುದರಿಂದಲೇ ಈಕೆ ವರಾಹನನ್ನು ಬೇಡು-ವಲ್ಲಿಯೂ –"ಮತ್ತ್ಯತೇ ಸರ್ವಭೂತಾನಾಂ ಲಘೂಪಾಯಂ ವದಪ್ರಭೋ" –"ಎಲೈ ಪ್ರಭುವೆ ! ನನಗೋಸ್ಕರ ಎಲ್ಲ ಚೇತನರಿಗೂ ಅನುಷ್ಠಿಸಲು ಬಹಳ ಸುಲಭವಾದ ಉಪಾಯವನ್ನು ಹೇಳು" –ಎಂದು, ಯಾವ ಭೇದವೂ ಇಲ್ಲದೆ (ಸರ್ವಭೂತ) ಎಲ್ಲ ಚೇತನರ ಹಿತವನ್ನೇ ಬಯಸುವವಳಾಗಿ, ಪ್ರಾರ್ಥಿಸಿ-ದ್ದಾಳೆ. ಅಂತೆಯೇ ಎಲ್ಲ ಚೇತನರ ಅಪರಾಧವನ್ನೂ ಸಹಿಸುವವಳಾದುದ-ರಿಂದ ಇವಳು ಸಾಕ್ಷಾತ್ ಕ್ಷಮಾಗುಣವೇ ಮೂರ್ತಿವೆತ್ತಂತಿದ್ದಾಳೆ. ಆದುದ-ರಿಂದ ಮೇಲೆ ಮೂಲದಲ್ಲಿ ಹೇಳಿರುವ ಶ್ಲೋಕದಲ್ಲಿ ನಾವು ಮಾಡುವ ಅಪ-ರಾಧವನ್ನೂ ಆಕೆ ಕ್ಷಮಿಸಬೇಕಾಗಿ ಪ್ರಾರ್ಥಿಸಿದೆ. ಈ ಮೇಲೆ ಹೇಳಿದ ವಿಷಯ-ದಿಂದ ಈಕೆಯು ಭಗವಂತ ಮತ್ತು ಶ್ರೀದೇವಿಗಿಂತಲೂ, ಕ್ಷಮಾ, ವಾತ್ಸಲ್ಯ ಮೊದಲಾದ ಗುಣಗಳನ್ನು ಅಧಿಕವಾಗಿ ಹೊಂದಿದ್ದಾಳೆ –ಎಂದೂ ತಿಳಿದು-ಬರುತ್ತದೆ.

**ಇಪ್ಪಡಿಯಾನಾಲ್ ಇವಳುಕ್ಕು ತಂಗಳೈಕಾಟ್ಟಿಲ್ ಏತ್ತತ್ತೈ ಸೂರಿಗಳ್ ತಾಂಗಳೇ ಅರಿವಾರ್‌ಕಳ್, ಆಕೈಯಾಲ್ ಕರ್ಮವಶ್ಯರಾನ-ವರ್‌ಕಳ್ ಸ್ವಕಾರ್ಯೋರ್ಥಮಾಕಕ್ಕೇಳ್‌ಕ್ಕ ಉರವಿಲ್ಲಾದ ಕ್ಷೇತ್ರ-ಜ್ಞರ್ ಉಪದೇಶಿಕ್ಕ ಪ್ರವೃತ್ತಂಗಳಾನ ಪುರಾಣಾನ್ತರಂಗಳ್‌ಪೋಲ್ ಅನ್ರಿಕ್ಕೆ, ಸರ್ವಲೋಕಜನನಿಯಾನವಿವಳ್ ಜಗದ್ಧಿತಮಾಕಕ್ಕೇಳ್‌ಕ "ಪಿತಾಸಿ ಲೋಕಸ್ಯ ಚರಾಚರಸ್ಯ" –ಎನ್ಗಿರಪಡಿಯೇ ಸರ್ವಲೋಕ-ಪಿತಾವಾನವನ್ ಅರುಳಿಚ್ಚೆಯ್ಯ ಪ್ರವೃತ್ತಮಾನ ಪುರಾಣಮಾಕೈಯಾಲೇ ಇದು ಎಲ್ಲಾತ್ತಿಲುಂ ಅಧಿಕಮ್.**

**ಇಪ್ಪಡಿಯಾನಾಲ್** = ಈರೀತಿ ಭೂದೇವಿಯು ಭಗವಂತ ಮತ್ತು ಶ್ರೀದೇವಿಗಿಂತಲೂ ಕ್ಷಮಾದಿಗುಣಗಳನ್ನು ಅಧಿಕವಾಗಿ ಹೊಂದಿರುವುದರಿಂದಲೇ, **ಇವಳುಕ್ಕು** = ಈ ಭೂಮಿಗೆ, **ತಂಗಳೈಕ್ಕಾಟ್ಟಿಲ್** = ತಮಗಿಂತಲೂ, **ಏತ್ತತ್ತೈ** = ಅಧಿಕವಾಗಿರುವ ಹಿರಿಮೆಯನ್ನು, **ಸೂರಿಗಳ್** = ನಿತ್ಯಸೂರಿಗಳು **ತಾಂಗಳೇ** = ತಾವೇ, **ಅರಿವಾರ್‌ಗಳ್** = ಅರಿತಿರುತ್ತಾರೆ. **ಆಕೈಯಾಲ್** =

ಆದುದರಿಂದ, **ಕರ್ಮವಶ್ಯರಾನವರ್‌ಕಳ್** = ಕರ್ಮಬಂಧಕ್ಕೆ ಒಳಗಾದವರು, **ಸ್ವಕಾರ್ಯಾರ್ಥಮಾಕ** = ತಮ್ಮ ಪ್ರಯೋಜನಾರ್ಥವಾಗಿ, **ಕೇಳ್‌ಕ** = ಕೇಳಲು, **ಉರವಿಲ್ಲಾದ** = ಪೂರ್ಣ ಜ್ಞಾನವಿಲ್ಲದ, **ಕ್ಷೇತ್ರಜ್ಞರ್** = (ಬದ್ಧ) ಜೀವರು **ಉಪದೇಶಿಕ್ಕ** = ಉಪದೇಶಿಸಿ, **ಪ್ರವೃತ್ತಂಗಳಾನ** = ಪ್ರಚಾರದಲ್ಲಿರುವ, **ಪುರಾಣಾಂತರಂಗಂಳ್‌ಪೋಲ್** = ಇತರ ಪುರಾಣಗಳಂತೇ, **ಅನ್ರಿಕ್ಕೆ** = ಇಲ್ಲದೆ, **ಸರ್ವಲೋಕಜನನಿಯಾನ ಇವಳ್** = ಸರ್ವಲೋಕಕ್ಕೂ ತಾಯಿಯಾದ ಈ ಭೂತಾಯಿಯು, **ಜಗದ್ಧಿತಮಾಕ** = ಪ್ರಪಂಚಕ್ಕೆ ಹಿತಮಾಡಬೇಕೆಂದು, **ಕೇಳ್‌ಕ** = ಕೇಳಲು, **"ಚರಾಚರಸ್ಯ** = ಚರಾಚರಾತ್ಮಕವಾದ, **ಲೋಕಸ್ಯ** = ಲೋಕಕ್ಕೆ, **ಪಿತಾಸಿ** = ತಂದೆಯಾಗಿದ್ದೀಯೆ" **-ಎನ್ರಿರಪಡಿಯೇ** = ಎಂದು (ಆಳವಂದಾರರು ತಮ್ಮ ಸ್ತೋತ್ರದಲ್ಲಿ) ಹೇಳಿರುವಂತೆಯೇ, **ಸರ್ವಲೋಕ ಪಿತಾವಾನವನ್** = ಸರ್ವಲೋಕಕ್ಕೂ ತಂದೆಯಾದ ವರಾಹಸ್ವರೂಪಿಯಾದ ಭಗವಂತನು, **ಅರುಳಿಚ್ಚೆಯ್ಯ** = ಕೃಪೆಮಾಡಿ ಹೇಳಿ, **ಪ್ರವೃತ್ತಮಾನ** = ಪ್ರಚಾರದಲ್ಲಿ ಬಂದಿರುವ, **ಪುರಾಣಮಾಕೈಯಾಲೇ** = ಪುರಾಣವಾದುದರಿಂದ, **ಇದು** = ಈ ವರಾಹಪುರಾಣವು, **ಎಲ್ಲಾತ್ತಿಲುಂ** = ಎಲ್ಲ ಪುರಾಣಕ್ಕಿಂತಲೂ, **ಅಧಿಕಮ್** = ಅಧಿಕ ಮಹಿಮೆಯುಳ್ಳದುದು.

ಮೇಲೆ ಹೇಳಿದಂತೆ, ಭೂದೇವಿಯು, ಪರಮಾತ್ಮ ಮತ್ತು ಶ್ರೀದೇವಿಗಿಂತಲೂ ಕ್ಷಮಾದಿಗುಣಗಳನ್ನು ಅಧಿಕವಾಗಿ ಹೊಂದಿರುವುದನ್ನರಿತ, ಸಿತ್ಯಸೂರಿಗಳು, ಈಕೆ ತಮಗಿಂತಲೂ ಅಧಿಕವಾದ ಹಿರಿಮೆವುಳ್ಳವಳೆಂದರಿತಿದ್ದಾರೆ. ಇತರ ಕೆಲ ಪುರಾಣಗಳಾದರೋ, ಬದ್ಧಜೀವನೊಬ್ಬ, ತನ್ನ ಪ್ರಯೋಜನಾರ್ಥವಾಗಿ ಕೇಳಿ, ಆ ವಿಷಯದಲ್ಲಾಸಕ್ತಿಯಿಲ್ಲದ ಮತ್ತು ಅಲ್ಪಜ್ಞನಾದ ಮತ್ತೊಬ್ಬ ಬದ್ಧಚೇತನನು ಉಪದೇಶಿಸಿ ಪ್ರಚಾರದಲ್ಲಿರುವ ಪುರಾಣಾಂತರಗಳಂತಿಲ್ಲದೆ, ಸರ್ವಲೋಕಕ್ಕೂ ಜನನಿಯಾದ ಭೂಮಿತಾಯಿಯು, ಜಗದ್ಧಿತಾರ್ಥವಾಗಿ ಭಗವಂತನನ್ನು ಪ್ರಾರ್ಥಿಸಲು, ಆಳವಂದಾರ್‌ರವರು ತಮ್ಮ 'ಸ್ತೋತ್ರರತ್ನ' ಗ್ರಂಥದಲ್ಲಿ "ಪಿತಾಸಿ ಲೋಕಸ್ಯ ಚರಾಚರಸ್ಯ" –"ಚರಾಚರಾತ್ಮಕವಾದ ಲೋಕಕ್ಕೆ ನೀನು ತಂದೆಯಾಗಿದ್ದೀಯೆ" –ಎಂದು ಹೇಳಿರುವಂತೆಯೇ ಸರ್ವಲೋಕಗಳಿಗೂ ತಂದೆಯಾದ ವರಾಹಸ್ವರೂಪಿಯಾದ ಭಗವಂತನು ಕೃಪೆಮಾಡಿ

ಉಪದೇಶಿಸಿ, ಪ್ರಚಾರದಲ್ಲಿ ಬಂದಿರುವ ಈ ವರಾಹಪುರಾಣವು, ಇತರ ಪುರಾಣಗಳಿಗಿಂತಲೂ ಅಧಿಕ ಮಹಿಮೆಯುಳ್ಳದುದಾಗಿದೆ.

“ಸರ್ವೇಷಾಮೇವಧರ್ಮಾಣಾಂ ಉತ್ತಮೋ ವೈಷ್ಣವೋವಿಧಿಃ”[1] –ಎನ್ರು ಮಹಾಭಾರತತ್ತಿಲ್ ಶೊನ್ನ ವಿಶೇಷಧರ್ಮಪ್ರಾಚುರ್ಯತ್ತಾಲುಂ ಇದು ಸರ್ವೋತ್ಕೃಷ್ಟಮ್.

“ಸರ್ವೇಷಾಮೇವ=ಸರ್ವವಿಧವಾದ, ಧರ್ಮಾಣಾಂ=ಧರ್ಮಗಳಲ್ಲಿಯೂ, ವೈಷ್ಣವೋ ವಿಧಿಃ=ವಿಷ್ಣುಭಕ್ತರಿಂದ ಅನುಷ್ಠಿಸಲ್ಪಡಬೇಕಾದ ಧರ್ಮವು, ಉತ್ತಮಃ=ಶ್ರೇಷ್ಠವಾದುದು.” –ಎನ್ರು=ಎಂದು ಮಹಾಭಾರತತ್ತಿಲ್=ಶ್ರೀಮನ್ಮಹಾಭಾರತದಲ್ಲಿ, ಶೊನ್ನ=ಹೇಳಲ್ಪಟ್ಟ, ವಿಶೇಷಧರ್ಮಪ್ರಾಚುರ್ಯತ್ತಾಲುಂ=ವಿಶೇಷವಾದ ವೈಷ್ಣವಧರ್ಮವನ್ನೇ ಅಧಿಕವಾಗಿ ಹೇಳುವುದರಿಂದಲೂ, ಇದು=ಈ ವರಾಹಪುರಾಣವು, ಸರ್ವೋತ್ಕೃಷ್ಟಮ್=ಎಲ್ಲ ಪುರಾಣಕ್ಕಿಂತಲೂ ಶ್ರೇಷ್ಠವಾದುದು.

ಹಿಂದೆಯೇ ತಿಳಿಸಿರುವಂತೆ ರಾಜಸ ತಾಮಸಪುರಾಣಗಳು ಐಹಿಕವಾದ ಕೆಲವು ಫಲಾವಾಪ್ತಿಗಾಗಿ ಮಾಡುವ ಕಾರ್ಯಗಳನ್ನೂ ಮತ್ತು ಅಗ್ನಿ, ಬ್ರಹ್ಮ, ರುದ್ರ, ಇಂದ್ರ ಮೊದಲಾದ ಕೆಲದೇವತೆಗಳ ವಿಷಯವನ್ನೂ ಮತ್ತು ಆಯಾ ದೇವತೆಗಳ ಭಕ್ತರು ಅನುಷ್ಠಿಸಬೇಕಾದ ಕೆಲವಿಷಯಗಳನ್ನೂ ತಿಳಿಸುತ್ತವೆ. ಮಹಾಭಾರತದ ಅನುಶಾಸನಿಕಪರ್ವದಲ್ಲಿ ತಿಳಿಸಿರುವಂತೆ, ಸರ್ವವಿಧವಾದ ಧರ್ಮಗಳಲ್ಲಿಯೂ ವಿಷ್ಣುಭಕ್ತರಿಂದ (ವಿಷ್ಣುವನ್ನೇ ಪಡೆಯಲು) ಅನುಷ್ಠಿಸಲ್ಪಡಲೇಬೇಕಾದ ಧರ್ಮವು ಬಹಳ ಶ್ರೇಷ್ಠವಾದುದರಿಂದಲೂ, ಆ ಧರ್ಮವನ್ನೇ ಅಧಿಕವಾಗಿ ಈ ವರಾಹಪುರಾಣವು ತಿಳಿಸುವುದರಿಂದಲೂ ಇದು ಎಲ್ಲ ಪುರಾಣಕ್ಕಿಂತಲೂ ಉತ್ಕೃಷ್ಟವಾದುದು.

ಇದು ಮುಮುಕ್ಷುಕ್ಕಳುಕ್ಕು ಸಾಕ್ಷಾದ್ವಾ ಪರಂಪರಯಾವಾ

---

[1] ಮೇಲಿನ ಶ್ಲೋಕದ ಉತ್ತರಾರ್ಧವು ಇಂತಿದೆ: “ರಕ್ಷತೇ ಭಗವಾನ್ ವಿಷ್ಣುಃ ಭಕ್ತಾನ್ ಆತ್ಮಶರೀರವತ್” –ಭಾರತ–ಅನುಶಾಸನಿಕಪರ್ವ(೩೬–೨೪)

ಮೋಕ್ಷೋಪಾಯಮಾಕ ವಿಹಿತಙ್ಗಳಾನ- ಸಮ್ಮಾರ್ಜನ ಉಪಲೇಪನ ಚೂರ್ಣಚಿತ್ರಮಾಲಾಕರಣ ದೀಪಾರೋಪಣ ಹವಿರ್ನಿವೇದನ, ನಂದನ-ವನ ಕರಣ, ವಿಮಾನ ನಿರ್ಮಾಣ ಪ್ರದಕ್ಷಿಣ ಪ್ರಣಾಮ ಕಥಾಶ್ರವಣ ಸ್ತುತಿಸಂಕೀರ್ತನ ಗುಣಕಥನ ಗೀತನೃತ್ತಧಾರಣಾಧ್ಯಾನಾದಿ ವಿಶೇಷ ಧರ್ಮಙ್ಗಳ್ ತನ್ನಿಲ್ ಸರ್ವಾಧಿಕಾರಮುಮಾಯ್ ಸ್ವಾದುವುಮಾನ ಉಪಾಯ ವಿಶೇಷತ್ತೈ ಪ್ರತಿಪಾದಿಕ್ಕಿರಇಪ್ರಕರಣಂ ಉಪಜೀವ್ಯತಮುಮ್

ಇದು=ಇದು, ಮುಮುಕ್ಷುಕ್ಕಳುಕ್ಕು=ಮೋಕ್ಷವನ್ನು ಪಡೆಯ-ಬೇಕೆಂಬ ಇಚ್ಛೆಯುಳ್ಳವರಿಗೆ, ಸಾಕ್ಷಾದಾಕ್ಕ=ನೇರವಾಗಿಯಾಗಲಿ, ಪರಂಪರ-ಯಾವಾ = ಪರಂಪರೆಯಾಗಿಯಾಗಲೀ, ಮೋಕ್ಷೋಪಾಯಮಾಕ = ಮೋಕ್ಷವನ್ನು ಪಡೆಯಲು ಉಪಾಯವಾಗಿ, ವಿಹಿತಂಗಳಾನ=ವಿಧಿಸಲ್ಪಟ್ಟಿ-ರುವ, ಸಮ್ಮಾರ್ಜನ=(ಭಗವನ್ಮಂದಿರದಲ್ಲಿ ಮಾಡುವ ಕಸ ಗುಡಿಸುವಿಕೆ) ಉಪಲೇಪನ=ಸಾರಿಸುವಿಕೆ. ಚೂರ್ಣಚಿತ್ರ (ಕರಣ)=ರಂಗೋಲಿ ಹಾಕು-ವಿಕೆ, ಮಾಲಾಕರಣ=ಪುಷ್ಪಮಾಲೆಗಳನ್ನು ಕಟ್ಟಿ ಸಮರ್ಪಿಸುವಿಕೆ, ದೀಪಾ-ರೋಪಣ=ದೀಪವನ್ನು ಹಚ್ಚುವಿಕೆ, ಹವಿರ್ನಿವೇದನ=ನೈವೇದ್ಯಕ್ಕೆ ಮಾಡಿ ಸಮರ್ಪಿಸುವಿಕೆ, ನಂದನವನಕರಣ=ಭಗವತ್ಕೈಂಕರ್ಯೋಪಯುಕ್ತವಾದ ತುಳಸೀಪುಷ್ಪಗಳನ್ನು ಬೆಳೆಯುವ ತೋಟಗಳನ್ನು ಮಾಡುವಿಕೆ, ವಿಮಾನ ನಿರ್ಮಾಣ=ಭಗವನ್ಮಂದಿರದ ಗೋಪುರಾದಿಗಳನ್ನು ಕಟ್ಟುವಿಕೆ, ಪ್ರದಕ್ಷಿಣ =ಭಗವಂತನನ್ನು ಪ್ರದಕ್ಷಿಣೆ ಮಾಡುವಿಕೆ, ಪ್ರಣಾಮ=ನಮಸ್ಕರಿಸುವಿಕೆ, ಕಥಾಶ್ರವಣ=ಭಗವಂತನ ಕಥೆಗಳನ್ನು ಕೇಳುವಿಕೆ, ಸ್ತುತಿಸಂಕೀರ್ತನ= ಸ್ತೋತ್ರಮಾಡಿ, ಅವನ ನಾಮಸಂಕೀರ್ತನೆ ಮಾಡುವಿಕೆ, ಗುಣಕಥನ= ಭಗವದ್ಗುಣಗಳನ್ನು ಭಕ್ತಾದಿಗಳಲ್ಲಿ ಪರಸ್ಪರ ಹೇಳಿಕೊಳ್ಳುವಿಕೆ, ಗೀತ= ಅವನ ಲೀಲಾಚೇಷ್ಟಿತಗಳನ್ನು ಸಂಗೀತಗಳಲ್ಲಿ ಹಾಡುವಿಕೆ, ನೃತ್ಯ=ಭಗವ-ದ್ಭಕ್ತಿಯಲ್ಲಿ ಪರವಶನಾಗಿ ಅವನ ಲೀಲಾಚೇಷ್ಟಿತಗಳನ್ನು ನರ್ತನಾದಿಗಳಲ್ಲಿ ಹಾವಭಾವಗಳಿಂದ ಪ್ರದರ್ಶಿಸುವಿಕೆ, ಧಾರಣಾಧ್ಯಾನಾದಿ = "ಧಾರಣಾ" -ಎಂಬ ಸಮಾಧಿಸ್ಥಿತಿಯಲ್ಲಿ ಭಗವಂತನನ್ನು ತನ್ನ ಹೃದಯ ಕಮಲದಲ್ಲಿ

ನಿರಂತರವಾಗಿ ಏಕಾಗ್ರಚಿತ್ತತೆಯಿಂದ (ಧ್ಯಾನ) ಚಿಂತಿಸುವಿಕೇ ಮೊದಲಾದ **ವಿಶೇಷ ಧರ್ಮಂಗಳ್** = ವಿಶೇಷ ಧರ್ಮಗಳೂ(ಹೇಳಲ್ಪಟ್ಟಿದ್ದರೂ), **ತನ್ನಿಲ್** = ಭಗವಂತನಲ್ಲಿಯೇ, **ಸರ್ವಾಧಿಕಾರಮುಮಾಯ್** = (ಜಾತಿ, ಲಿಂಗ, ವಯಸ್ಸೇ ಮೊದಲಾದ ಯಾವ ಭೇದವೂ ಇಲ್ಲದೆ) ಎಲ್ಲರಿಗೂ ಅಧಿಕಾರವಿರುವ, **ಸ್ವಾದುವುಮಾನ** = ರುಚಿಕರವಾದ, (ಎಲ್ಲರಿಂದಲೂ ಇಷ್ಟಪಡುವಂತಿರುವ), **ಉಪಾಯವಿಶೇಷತ್ತೈ** = ವಿಶೇಷವಾದ ಒಂದು ಉಪಾಯವನ್ನು (ಶರಣಾಗತಿಯನ್ನು), **ಪ್ರತಿಪಾದಿಕ್ಕಿರ** = ಸ್ಪಷ್ಟವಾಗಿ ತಿಳಿಸುವ, **ಇಪ್ರಕರಣಂ** = ಈ ವರಾಹಚರಮ ಶ್ಲೋಕವನ್ನು ತಿಳಿಸುವ ಪ್ರಕರಣವು, **ಉಪಜೀವ್ಯತಮಮ್** = ಅತಿಶಯವಾದ ಉಪಜೀವ್ಯವಾಗಿದೆ, (ಬದುಕಲು ಸಾಧನವಾದುದಾಗಿದೆ).

— ಈ ಮೇಲಿನ ಗದ್ಯಖಂಡದಲ್ಲಿ, ಮುಮುಕ್ಷುವಿಗೆ ನೇರವಾಗಿಯೋ ಪರಂಪರೆಯಾಗಿಯೋ ಮೋಕ್ಷಕ್ಕೆ ಸಾಧನಗಳಾದ ಭಗವತ್ಕೈಂಕರ್ಯರೂಪವಾದ ಸಂಮಾರ್ಜನಾದಿ ವಿಶೇಷ ಧರ್ಮಗಳು ಹೇಳಲ್ಪಟ್ಟಿದ್ದರೂ ಮೇಲೆ ಹೇಳಿದ ಎಲ್ಲ ಕೈಂಕರ್ಯಗಳನ್ನೂ ಎಲ್ಲರೂ ಮಾಡಲು ಸಾಧ್ಯವಿಲ್ಲ, ಈ ಕೈಂಕರ್ಯಗಳಲ್ಲಿ ಜಾತಿ, ಲಿಂಗ, ವಯಸ್ಸೇ ಮೊದಲಾದ ಭೇದದಿಂದ ಕೆಲ ಕೆಲವರು ಕೆಲಕೆಲ ಕೈಂಕರ್ಯಗಳನ್ನು ಮಾತ್ರವೇ ಮಾಡುವ ಅಧಿಕಾರವುಂಟು. ಮತ್ತು ಈ ಕೈಂಕರ್ಯಗಳೂ ಒಮ್ಮೆ ಮಾತ್ರ ಮಾಡಿ ನಿವೃತ್ತರಾಗುವಂತಿಲ್ಲ, ಇವುಗಳಿಗೆ ಆವೃತ್ತಿಯುಂಟು. ಆದರೇ ವರಾಹ ಚರಮಶ್ಲೋಕದಲ್ಲಿ ಉಕ್ತವಾದ ಶರಣಾಗತ್ಯಮಾತ್ಮಾಖವಾದರೋ, ಯಾವ ಭೇದವೂ ಇಲ್ಲದೆ ಎಲ್ಲರಿಂದಲೂ ಸುಲಭವಾಗಿ ಅನುಷ್ಠಿಸಲು ಅರ್ಹವಾದ ಮತ್ತು ಆವೃತ್ತಿಯಿಲ್ಲದೆ ಒಮ್ಮೆ ಮಾತ್ರ (ಸಕೃತ್) ಅನುಷ್ಠಿಸುವುದರಿಂದಲೇ ಫಲವನ್ನನುಗ್ರಹಿಸುವುದರಿಂದ ಸುಕರವೂ, ಸುಲಭವೂ, ಎಲ್ಲರಿಗೂ ಇಷ್ಟವಾದುದಾಗಿ ರುಚಿಕರವೂ ಆದುದಾಗಿದೆ. ಜೀವಿಸಲು ಅಥವಾ ಬದುಕಲು ಸಾಧನವಾದುದನ್ನು 'ಉಪಜೀವ್ಯ' ಎನ್ನುತ್ತಾರೆ. ಶರಣಾಗತಿ ಮಾಡಿದವನು, ತನ್ನ ರಕ್ಷಾಭರವನ್ನು ಭಗವಂತನಲ್ಲಿ ಅರ್ಪಿಸಿರುವುದರಿಂದ, ಮತ್ತೆ ಆ ಭಗವಂತನು ತನ್ನನ್ನು ರಕ್ಷಿಸಿಯೇ ತೀರುತ್ತಾನಾದುದರಿಂದ ಮುಂದೆ ತನಗೇನಾಗುತ್ತದೋ ಎಂಬ ಯಾವ ವಿಧವಾದ ಭಯವೂ ಇಲ್ಲದೆ,

ಶರಣಾಗತಿಮಾಡಿದ ದಿನದಿಂದ ನಿರ್ಭರನೂ ನಿರ್ಭಯನೂ ಆಗಿ ದೇಹಾವಸಾನದವರೆವಿಗೂ ಸಂಸಾರ ಸಾಗರದಲ್ಲಿಯೇ ಇದ್ದರೂ, ಸಂತೋಷದಿಂದ ಜೀವಿಸಿರಲು, ಸಾಧನವಾದುವರಿಂದ ಮೇಲೆ ಹೇಳಿದ ಭಗವತ್ಕೈಂಕರ್ಯಗಳೆಲ್ಲದಕ್ಕಿಂತಲೂ, ಶರಣಾಗತಿಯು ಅತಿಶಯವಾದ ಉಪಜೀವ್ಯವಾಗಿದೆ. ಅದನ್ನು ಪ್ರತಿಪಾದಿಸುವ ವರಾಹ ಚರಮಶ್ಲೋಕದ ಈ ಪ್ರಕರಣವೂ ಮುಮುಕ್ಷುಗಳಿಗೆ ಉಪಜೀವ್ಯತಮವಾಗಿದೆ –ಎಂದು ಆಚಾರ್ಯರು ತಿಳಿಸಿದ್ದಾರೆ.

**ಇವ್ಯುಪಾಯವಿಶೇಷಂ "ಸಾಹಿಸರ್ವತ್ರ ಸರ್ವೇಷಾಂ ಸರ್ವಕಾಮಫಲಪ್ರದಾ, ತಾವದಾರ್ತಿಃ ತಥಾವಾಂಛಾ" (ವಿ.ಪು.೧-೯-೭೬) ಇತ್ಯಾದಿಗಳಿರ್ಪಡಿಯೇ ಯಥಾಧಿಕಾರಮ್ ಮೋಕ್ಷ ತದುಪಾಯಾದಿಗಳೈ ಸಾಧಿಕ್ಕವತಾಯಿರುಕ್ಕುಮ್.**

**ಇವ್ಯುಪಾಯವಿಶೇಷಂ**=ಈ 'ಶರಣಾಗತಿ' ಎಂಬ ವಿಶೇಷವಾದ ಉಪಾಯವಾದರೋ, "**ಸಾಹಿ**='ಶರಣಾಗತಿ'ಯಾದರೋ, **ಸರ್ವತ್ರ**=ಎಲ್ಲೆಡೆಯಲ್ಲಿಯೂ, **ಸರ್ವೇಷಾಂ**=ಎಲ್ಲರಿಗೂ, **ಸರ್ವಕಾಮಫಲಪ್ರದಾ**=ಎಲ್ಲ ವಿಧವಾದ ಇಷ್ಟಾರ್ಥಗಳನ್ನೂ ಕೊಡುವುದಾಗಿರುವುದು, (**ಯಾವತ್**=ಎಲ್ಲಿಯುವರೆವಿಗೂ, ಶರಣಂ **ನಯಾತಿ**=ಶರಣುಹೋಗುವುದಿಲ್ಲವೋ) **ತಾವತ್**= ಅಲ್ಲಿಯುವರೆವಿಗೂ, **ಆರ್ತಿಃ**=ನಾನಾತರಹದ ಪೀಡೆಗಳೂ, **ತಥಾ** = ಹಾಗೆಯೇ **ವಾಂಛಾ** = ನಾನಾತರಹದ ಇಚ್ಛೆಗಳೂ (ಇರುತ್ತವೆ)". –**ಇತ್ಯಾದಿಕಳಿಪ್ಪಡಿಯೇ**=ಇದೇ ಮೊದಲಾದ ವಾಕ್ಯಗಳಲ್ಲಿ ಹೇಳಿರುವಂತೆಯೇ, **ಯಥಾಧಿಕಾರಮ್** =ಅಧಿಕಾರಕ್ಕೆ ಅನುಗುಣವಾಗಿ, **ಮೋಕ್ಷ**= ಸಂಸಾರ ನಿವೃತ್ತಿ, **ತದುಪಾಯಾದಿಕಳೈ**=ಅದರ ಉಪಾಯವೇ ಮೊದಲಾದುವುಗಳನ್ನು, **ಸಾಧಿಕ್ಕವತಾಯಿರುಕ್ಕುಮ್**=ಸಾಧಿಸಿಕೊಡುವುದಾಗಿರುತ್ತದೆ.

ಐಹಿಕವಾದ ಫಲಾಪೇಕ್ಷೆಯಿಂದ ಮಾಡಲ್ಪಡುವ ಕೆಲಕಾಮ್ಯಕರ್ಮಗಳು, ಕೆಲಕೆಲ ಫಲಗಳನ್ನು ಮಾತ್ರವೇ ಕೊಡಬಲ್ಲುದು. ಆದರೆ ಶ್ರಿಯಃಪತಿಯಾದ ಶ್ರೀಮನ್ನಾರಾಯಣನಲ್ಲಿ ಮಾಡುವ ಶರಣಾಗತಿಯಾದರೋ, ನಮಗೆ ಹಿತವಾದ ಐಹಿಕಾಮುಷ್ಮಿಕವಾದ ಸರ್ವವಿಧವಾದ ಫಲವನ್ನೂ ಕೊಡುತ್ತದೆ.

ಅದನ್ನೇ ವಿಷ್ಣು ಪುರಾಣದಲ್ಲಿ "ಶರೀರಾರೋಗ್ಯಮೈಶ್ವರ್ಯಂ ಭೋಗಾಂಶ್ಚೈವಾನುಷಂಗಿಕಾನ್ । ದದಾತಿ ಧ್ಯಾಯಿನಾಂ ಪುಂಸಃ ಅಪವರ್ಗಪ್ರದೋ ಹರಿಃ" [ತನ್ನನ್ನು ಚಿಂತಿಸುವವರಿಗೆ ಮೋಕ್ಷವನ್ನನುಗ್ರಹಿಸಿಕೊಡುವ ಹರಿಯು(ಅವರು ಕೇಳದಿದ್ದರೂ) ಶರೀರದ ಆರೋಗ್ಯ, ಐಶ್ವರ್ಯ, ದೇಹದಿಂದ ಕೂಡಿರುವಲ್ಲಿ ಸಂತೋಷದಿಂದ ಅನುಭವಿಸಬಹುದಾದ ಆನುಷಂಗಿಕವಾದ ಭೋಗಗಳನ್ನೂ ಅನುಗ್ರಹಿಸಿಕೊಡುತ್ತಾನೆ]" -ಎಂದು ಹೇಳಿದ್ದಾರೆ. ಆದುದರಿಂದ ಶ್ರೀಯಃಪತಿಯಲ್ಲಿ ಶರಣಾಗತಿಯನ್ನನುಷ್ಠಿಸಿದವನು ಐಹಿಕಾಮುಷ್ಮಿಕವಾದ ಯಾವುದೇ ಫಲವನ್ನೂ ಪಡೆಯಲೂ, ತಾನು ಇತರ ಯಾವ ವಿಧವಾದ ಕೆಲಸವನ್ನೂ ಮಾಡಬೇಕಾದುದಿಲ್ಲ. ಶರಣಾಗತ್ಯನುಷ್ಠಾನದ ಪೂರ್ವದಲ್ಲಿ ಮಾತ್ರವೇ ಈ ಚೇತನನನ್ನು ನಾನಾ ತರಹದ ಪೀಡೆಗಳು ಹಿಂಸಿಸಬಹುದು, ಅಥವಾ ನಾನಾ ತರಹದ ತುಚ್ಛವಾದ ವಿಷಯಗಳ ಬಗ್ಗೆ ಇಚ್ಛೆಯುಂಟಾಗಬಹುದು. ಶರಣಾಗತನಾದ ಬಳಿಕ, ಚೇತನನ ರಕ್ಷಾಭರವನ್ನು ಒಪ್ಪಿಕೊಂಡ ಪರಮಾತ್ಮನು ಇವನಿಗೆ ಸರ್ವವಿಧ ಫಲವನ್ನೂ ತಾನೇ ವಿತರಣೆಮಾಡಿ ಸಂತೋಷದಿಂದ ರಕ್ಷಿಸುವುದರಿಂದ, ಅಲ್ಲಿಂದ ಮುಂದೆ ಆ ಶರಣಾಗತನಿಗೆ ಯಾವ ತರಹದ ಪೀಡೆಗಳಿರುವುದಿಲ್ಲ. ಭಗವಂತನನ್ನೊಬ್ಬನನ್ನೇ ಚೇತನನು ಇಚ್ಛಿಸುವುದರಿಂದ, ಇತರ ವಿಷಯಗಳ ಆಸೆಗಳೆಲ್ಲವೂ ಅವನಿಗಿರುವುದಿಲ್ಲ.

ಮುಮುಕ್ಷುಗಳು ಎರಡುವಿಧ—'ಆರ್ತ' ಮತ್ತು 'ದೃಪ್ತ' -ಎಂದು, ಭಗವಂತನ ಗುಣಾದಿಗಳನ್ನು ತಿಳಿದುಕೊಂಡ ಕೆಲ ಚೇತನರು, ಅವನನ್ನು ಬಿಟ್ಟು ಒಂದು ಕ್ಷಣ ಕಾಲವೂ ಇರಲಾರದೆ, ಭಗವಂತನಲ್ಲಿ ಆ ಕ್ಷಣದಲ್ಲಿಯೇ ತನಗೆ ಮುಕ್ತಿಯನ್ನನುಗ್ರಹಿಸಬೇಕೆಂದು ಪ್ರಾರ್ಥಿಸುತ್ತಾರೆ. ಇವರೇ ಆರ್ತರು. ಅಂತಹ ಚೇತನರಿಗೆ ಆ ಕೂಡಲೇ ಮುಕ್ತಿಯನ್ನುಂಟುಮಾಡುತ್ತಾನೆ. ಮತ್ತೆ ಕೆಲವರು ಪ್ರಾರಬ್ಧ ಕರ್ಮವು ಕಳೆಯುವವರೆವಿಗೂ ಅಂದರೇ ಈ ದೇಹಾವಸಾನದ ವರೆವಿಗೂ, ಈ ದೇಹದಲ್ಲಿ ಬರುವ ಸುಖ ದುಃಖಗಳನ್ನನುಭವಿಸಲೂ ಸಿದ್ಧರಾಗಿರುತ್ತಾರೆ. ಈ ಚೇತನರು ದೇಹಾವಸಾನದಲ್ಲಿ ಮುಕ್ತಿಯನ್ನು ಅನುಗ್ರಹಿಸಬೇಕಾಗಿ — "ಏತದ್ದೇಹಾವಸಾನೇ ಮಾಂ ತ್ವತ್ಪಾದಂ ಪ್ರಾಪಯ

ಸ್ವಯಮ್" –ಎಂದು ಪ್ರಾರ್ಥಿಸಿರುತ್ತಾರೆ. –ಇವರೇ 'ದೃಪ್ತ'ರೆಂಬ ಮುಮುಕ್ಷುಗಳು. ಈ ಆರ್ತ ಅಥವಾ ದೃಪ್ತರು ಅವರವರ ಅಧಿಕಾರಕ್ಕೆ ಅನುಗುಣವಾಗಿ ತಕ್ಷಣವೋ ಅಥವಾ ದೇಹಾವಸಾನದಲ್ಲಿಯೋ, ಅವರು ಪಡೆಯುವ ಮುಕ್ತಿ ಮತ್ತು ಅದಕ್ಕೆ ಸಾಧನವಾದ ವಿಷಯಗಳನ್ನೂ ಈ ವರಾಹ ಚರಮ ಶ್ಲೋಕವು ಸಾಧಿಸಿಕೊಡುತ್ತದೆ.

**ಇತ್ತ್ಯ ಶ್ರೀಭೂಮಿಪಿರಾಟ್ಟಿ ಸ್ವಾಭಾವಿಕ ಸಾರ್ವಜ್ಞತ್ತಾಲೇ ಅರಿನ್ದಿರುಕ್ಕಚ್ಚೆಯ್‌ದೇಯುಮ್ ಪ್ರಜಾಹಿತಾರ್ಥಮಾಕ ಮಾತಾಕ್ಕೇಳ್–(ಳ್)ಕ್ಕ, ಸರ್ವಭೂತ ಸುಹೃತ್ತಾನಪಿತಾ ಅರುಳಿಚ್ಚೆಯ್ದ ವಾರ್ತ್ತೈ-ಎನ್ರು ಪ್ರಸಿದ್ಧಮಾಕವೇಂಡುಮೆನ್ರು ತಿರುವುಳ್ಳಂಪತ್ತಿ, ಅಜ್ಞರುಮಾಯ್ ಅಶಕ್ತರುಮಾನ ಅಧಿಕಾರಿಗಳುಕ್ಕು ಗುರೂಪಾಯತ್ತೈ ವಿಧಿತ್ತಾಲ್, ಇದುಕುರುವಿರ್ಯ ಕಳುತ್ತಿಲೇ ಕಟ್ಟಿನ ಪನಂಕಾಯ್ ಪೋಲೇ-ಯಾವವ್.**

**ಇತ್ತ್ಯ**=ಈ ಚರಮಶ್ಲೋಕವನ್ನು **ಶ್ರೀಭೂಮಿಪಿರಾಟ್ಟಿ**=ಭೂದೇವಿಯು, **ಸ್ವಾಭಾವಿಕ ಸಾರ್ವಜ್ಞತ್ತಾಲೇ**=ತನ್ನ ಸಹಜವಾದ ಎಲ್ಲವನ್ನೂ ಅರಿಯುವ (ಸರ್ವಜ್ಞತ್ವ) ಗುಣದಿಂದಲೇ, **ಅರಿನ್ದಿರುಕ್ಕ ಚೆಯ್ದೇಯುಮ್**=ತಿಳಿಯುವಂತೆ ಮಾಡಲಾದರೂ, **ಪ್ರಜಾಹಿತಾರ್ಥಮಾಕ**=ಪ್ರಜೆಗಳ ಹಿತಕ್ಕೋಸ್ಕರ, **ಮಾತಾಕೇಳ್‌ಕ**=ಲೋಕಮಾತಾವಾದ ಭೂಮಿತಾಯಿಯು ಕೇಳಲು, **ಸರ್ವಭೂತ ಸುಹೃತ್ತಾನ**=ಎಲ್ಲ ಚೇತನರಿಗೂ ಹಿತವನ್ನೇ ಬಯಸುವ, **ಪಿತಾ**=ಲೋಕಪಿತಾವಾದ ವರಾಹರೂಪಿಯಾದ ಶ್ರೀಮನ್ನಾರಾಯಣನು, **ಅರುಳಿಚ್ಚೆಯ್ದವಾರ್ತೆಎನ್ರು**=ಅನುಗ್ರಹಿಸಿ ಆಡಿದ ಮಾತೆಂದು, **ಪ್ರಸಿದ್ಧಮಾಕವೇಂಡುಮೆನ್ರು**=ಪ್ರಸಿದ್ಧವಾಗಬೇಕೆಂದು, **ತಿರುವುಳ್ಳಂಪತ್ತಿ**=ಅಭಿಪ್ರಾಯವನ್ನು ಹೊಂದಿ, **ಅಜ್ಞರುಮಾಯ್**=ಭಗವಂತನನ್ನು ಪಡೆಯಲು ಹಾದಿಯನ್ನೇ ಅರಿಯದಿರುವ, **ಅಶಕ್ತರುಮಾನ**=ಕರ್ಮಯೋಗಾದಿಗಳನ್ನನುಷ್ಠಿಸಲು ಶಕ್ತರಲ್ಲದ, **ಅಧಿಕಾರಿಕಳುಕ್ಕು**=ಅಧಿಕಾರಿಗಳಿಗೆ, **ಗುರೂಪಾಯತ್ತೈ**=ಸುಲಭ ಸಾಧ್ಯವಲ್ಲದಿರುವ ಗುರೂಪಾಯವಾದ ಕರ್ಮ–

ಯೋಗ, ಜ್ಞಾನಯೋಗ ಸಹಕೃತವಾದ ಭಕ್ತಿಯೋಗವನ್ನೂ, ವಿಧಿಕ್ಕಾಲ್ = ಅನುಷ್ಠಿಸಬೇಕೆಂದು ವಿಧಿಸಿದರೇ, ಕುರುವಿಯನ್ ಕುಳುತ್ತಿಲ್ = ಗುಬ್ಬಚ್ಚಿಯ ಕತ್ತಿನಲ್ಲಿ, ಪನಂಕಾಯ್ ಕಟ್ಟಿನ ಪೋಲೇಯಾವ್ = ಬಹಳ ಭಾರವಾದ (ತಾಟನುಂಗು) ತಾಳೇಕಾಯಿಯನ್ನು ಕಟ್ಟಿದಂತಾಗುತ್ತದೆ.

**ಇವರ್‌ಕಳುಕ್ಕು ವಿಹಿತಮಾನ ಅನ್ತಿಮಪ್ರತ್ಯಯಮುಮ್ ಮರಣಾ ವಸ್ಥೈಯಿಲ್ ಮನಸ್ಸು ಪ್ರಾಪ್ತವಿಷಯತ್ತಿಲ್ ಪ್ರತಿಷ್ಠಿತಮಾಕಮಾಟ್ಟಾ ತ ಪಡಿಯಾಲೇ ಸ್ವಯತ್ನತ್ತಾಲ್ ಸಾಧಿಕ್ಕಪ್ಪೋಕಾದು.**

ಇವರ್‌ಕಳುಕ್ಕು = ಈ ಅಜ್ಞರೂ ಅಶಕ್ತರೂ ಆದ ಚೇತನರಿಗೆ, ವಿಹಿತಮಾನ = (ಭಕ್ತಿಯೋಗ ನಿಷ್ಠನಿಗೆ) ವಿಧಿಸಲ್ಪಟ್ಟಿರುವ, ಅನ್ತಿಮಪ್ರತ್ಯಯಮುಮ್ = ದೇಹಾವಸಾನಕಾಲದಲ್ಲಿ ಕೊನೆಯ ಉಸಿರೆಳೆಯುವಾಗಲೂ ಮಾಡಲೇಬೇಕಾಗಿರುವ ಭಗವಚ್ಚಿಂತನೆಯಾದರೋ, ಮರಣಾವಸ್ಥೈಯಿಲ್ = ಸಾಯುವ ಕಾಲದಲ್ಲಿ, ಮನಸ್ಸು = ಮನಸ್ಸು, ಪ್ರಾಪ್ತವಿಷಯತ್ತಿಲ್ = ಹೊಂದಬೇಕಾದ ವಿಷಯದಲ್ಲಿ, ಪ್ರತಿಷ್ಠಿತಮಾಕಮಾಟ್ಟಾದಪಡಿಯಾಲ್ = ಸ್ಥಿರವಾಗಿ ನಿಲ್ಲದಿರುವುದರಿಂದ, ಸ್ವಯತ್ನತ್ತಾಲ್ = ತನ್ನ ಯತ್ನದಿಂದಲೇ, ಸಾಧಿಕ್ಕಪ್ಪೋಕಾದು = ಸಾಧಿಸಲು ಸಾಧ್ಯವಿಲ್ಲ.

ಗೀತಾಚಾರ್ಯನು ಅರ್ಜುನನಿಗೆ ಭಗವದ್ಗೀತೆಯಲ್ಲಿ ಹೇಳುವಾಗ "ಯಂಯಂವಾಪಿ ಸ್ಮರನ್‌ಭಾವಂ ತ್ಯಜಂತ್ಯಂತೇ ಕಳೇಬರಮ್ । ತಂತಮೇವೈತಿ ಕೌಂತೇಯ" ಕೊನೆಯ ಕಾಲದಲ್ಲಿ ಯ್ಯಾವ ಯಾವ ವಿಧವಾದ ಭಾವನೆಯನ್ನು ಹೊಂದಿ ಚೇತನನು ತನ್ನ ದೇಹವನ್ನು ತ್ಯಾಗಮಾಡುತ್ತಾನೆಯೋ, ಆಯಾ ಭಾವನೆಗನುಗುಣವಾದ ದೇಹವನ್ನೇ (ಜನ್ಮವನ್ನೇ) ಮುಂದೆ ಪಡೆಯುತ್ತಾನೆ" —ಎಂದು ಹೇಳಿರುವುದರಿಂದ, ಪರಮಾತ್ಮನನ್ನೇ ಪಡೆಯಬೇಕೆಂದಿರುವ ಭಕ್ತಿಯೋಗ ನಿಷ್ಠನಿಗೆ ಅಂತ್ಯಕಾಲದಲ್ಲಿ ಭಗವಚ್ಚಿಂತನೆಯು ವಿಧಿಸಲ್ಪಟ್ಟಿದೆ. ಇದು ನಿರಂತರವಾಗಿ ತೈಲಧಾರೆಯಂತೆ ಅವಿಚ್ಛಿನ್ನವಾಗಿ ಪರಮಾತ್ಮನ ಚಿಂತನೆಯಲ್ಲಿಯೇ ತೊಡಗಿರುವ ಮನಸ್ಸುಳ್ಳ ಭಕ್ತಿಯೋಗನಿಷ್ಠನಿಗೆ ಸುಲಭ ಸಾಧ್ಯವಾದುದು, ಒಂದು ಕ್ಷಣಕಾಲ ಪರಮಾತ್ಮನನ್ನು ಚಿಂತನೆಮಾಡುವುದೇ ಕಷ್ಟ-

ಕರವಾಗಿರುವ ಅಜ್ಞರೂ ಅಶಕ್ತರೂ ಆಗಿರುವ ಚಂಚಲ ಮನಸ್ಕರಾದ ಚೇತನರಿಗೆ ಅಂತ್ಯಕಾಲದಲ್ಲಿ ಮನಸ್ಸು ಪ್ರಾಪ್ತವಿಷಯವಾದ ಭಗವಂತನಲ್ಲಿಯೇ ಸ್ಥಿರವಾಗಿ ನಿಲ್ಲಲು ಸಾಧ್ಯವಿಲ್ಲದುದರಿಂದ, ಮೇಲೆ ಹೇಳಿದಂತೆ ಭಗವಂತನಿಂದಲೇ ವಿಧಿಸಲ್ಪಟ್ಟ ಅಂತ್ಯಕಾಲಸ್ಮೃತಿಯನ್ನು ಈ ಚೇತನರು ತನ್ನ ಯತ್ನದಿಂದಲೇ ಪಡೆದುಕೊಳ್ಳಲು ಸಾಧ್ಯವಿಲ್ಲ.

**ಆನಪಿನ್ನು ಸ್ವರೂಪಪರಿಕರಾದಿಕಳಾನ ಶುಮ್ಮೆಯಿಟ್ಟದೊರು ಲಘೂಪಾಯತ್ತೈ ಅರುಳಿಚ್ಚೆಯ್ಯವೇಂಡುಮೆನ್ರು ವಿಣ್ಣಪ್ಪಂ ಶೆಯ್ಯ ಸಿದ್ಧೋಪಾಯಭೂತರಾಯ್ ಸರ್ವಜ್ಞರುಮಾನ ಶ್ರೀವರಾಹನಯಿನಾರ್ ತಮ್ಮುಡೈಯವ ಶೀಕರಣಾರ್ಥ ಮಾಕ-ಸಾಧ್ಯಮಾನ ಜ್ಞಾನಯಜ್ಞ ಸಾರತ್ತೈ ಇವ್ವಳವಿಲೇ ಪ್ರಸನ್ನನಾಯ್ "ತನ್ಕ ತನ್ಮಾನ್ತರಂಕಾತ್ತು ಅಡಿಯಾರ್‌ಕಳ್ಳೈ ಕೊಂಡುಪೋಯ್, ತನ್ಕೃ ಪೆರುತ್ತಿ ತನ್ ತಾಳಿಣೈಕ್ಕೀಳ್ ಕೊಳ್ಳುಂ" ಪಡಿಯ್ಯೆ 'ಸ್ಥಿತೇಮನಸಿ' -ಎನ್ರುಕೊಡಂಗಿ ಇರಂಡು ಶ್ಲೋಕತ್ತಾಲೇ ಅರುಳಿಚ್ಚೆಯ್‌ತರಾರ್.**

ಆನಪಿನ್ನು=ಅಂದಮೇಲೆ, **ಸ್ವರೂಪಪರಿಕರಾದಿಕಳಾನ**= ಭಕ್ತಿ-ಯೋಗನಿಷ್ಠಗೆ ಬೇಕಾದ ಷಡಂಗಸಹಿತ ವೇದಾಧ್ಯಯನ, ತದರ್ಥಜ್ಞಾನ, ಕರ್ಮಯೋಗಾದ್ಯನುಷ್ಠಾನ, ಅಷ್ಟಾಂಗಯೋಗವೇ ಮೊದಲಾದ ಸ್ವರೂಪ ಪರಿಕರಾದಿಗಳ, **ಶುಮ್ಮೆಯಟ್ಟದು**=ಭಾರವಾದ ಉಪಾಯವನ್ನು ತಳ್ಳಿಹಾಕುವ, **ಒರು ಲಘೂಪಾಯತ್ತೈ** = ಒಂದು ಸುಲಭೋಪಾಯವನ್ನು, **ಅರುಳಿಚ್ಚೆಯ್ಯವೇಂಡುಂಎನ್ರು**=ಅನುಗ್ರಹಿಸಿಕೊಡಬೇಕೆಂದು, **ವಿಣ್ಣಪ್ಪಂ-ಶೆಯ್ಯ**=ಭೂಮಿತಾಯಿಯು ವಿಜ್ಞಾಪಿಸಲು, **ಸಿದ್ಧೋಪಾಯಭೂತ-ರಾಯ್**=ಚೇತನೋದ್ಧಾರಮಾಡಬೇಕೆಂದು ಮೊದಲೇ ಸಂಕಲ್ಪಿಸಿ ಸಿದ್ಧೋ-ಪಾಯನಾಗಿರುವ, **ಸರ್ವಜ್ಞರುಮಾನ**=ಸರ್ವಜ್ಞನೂ ಆದ, **ಶ್ರೀವರಾಹ-ನಯಿನಾರ್**=ಶ್ರೀ ವರಾಹಸ್ವಾಮಿಯು, **ತಮ್ಮುಡೈಯ ವಶೀಕರಣಾರ್ಥ-ಮಾಕ**=ತನ್ನನ್ನು ವಶಪಡಿಸಿಕೊಳ್ಳಲು, **ಸಾಧ್ಯಮಾನ**=ಎಲ್ಲರಿಂದಲೂ ಅನುಷ್ಠಿಸಲಾಗುವ (ಸಾಧ್ಯೋಪಾಯವಾದ) **ಜ್ಞಾನಯಜ್ಞಸಾರತ್ತೈ**=

(ಕೇವಲ ಚೇತನನ ಜ್ಞಾನ ಅಥವಾ ಬುದ್ಧಿಯಿಂದ ಪರಮಾತ್ಮನನ್ನು ಚಿಂತಿಸುವ ಮಾತ್ರದಿಂದಲೆ, ಅವನನ್ನು ಸಂತುಷ್ಟಗೊಳಿಸಿ ಪೂಜಿಸುವ) ಜ್ಞಾನ-ಯಜ್ಞದ ಸಾರವನ್ನು, **ಇವ್ವಳವಿಲೇ**=ಈ ರೀತಿಯಾಗಿ **ಪ್ರಸನ್ನನಾಯ್**=ಪ್ರಸನ್ನನಾಗಿ, **ತನ್ಮ ಜನ್ಮಾನ್ತರಂ**=ಜನ್ಮ ಪರಂಪರೆಗಳು **ಕಾತ್ತು**=ಉಂಟಾಗದಂತೆ ತಡೆದು, **ಅಡಿಯಾರ್‌ಕಳ್ಳೆ**=ತನ್ನಲ್ಲಿ ಶರಣಾಗತಿ ಮಾಡಿದ-ವರನ್ನು, **ಕೊಂಡುಪೋಯ್**=ಪರಮಪದಕ್ಕೆ ಕರೆದುಕೊಂಡು ಹೋಗಿ, **ತನ್ನೈಪೆರುತ್ತಿ**=ಸ್ವರೂಪಾವಿರ್ಭಾವವನ್ನುಂಟುಮಾಡಿ, **ತನ್ ತಾಳಿಣೈ-ಕ್ಕೀಳ್**=ತನ್ನ ತಿರುಪಡಿಗಳಡಿಯಲ್ಲಿ, **ಕೊಳ್ಳುಮ್**=ಕೈಂಕರ್ಯ ಮಾಡು-ವಂತೆ ಸ್ವೀಕರಿಸುವ, **ಪಡಿಯ್ಯೈ**=ಪ್ರಕಾರವನ್ನು, 'ಸ್ಥಿತೇಮನಸಿ'-ಎನ್ರು **ತೊಡಂಗಿ**='ಸ್ಥಿತೇ ಮನಸಿ' -ಎಂದು ಪ್ರಾರಂಭಿಸಿ, **ಇರಂಡುಶ್ಲೋಕ-ತ್ತಾಲೇ**=ಎರಡು ಶ್ಲೋಕಗಳಿಂದ, **ಅರುಳಿಚ್ಚೆಯ್‌ಕಿರಾರ್**=ಕೃಪೆಯಿಂದ ಹೇಳುತ್ತಾರೆ.

ಚೇತನರು ಭಕ್ತಿಯೋಗ ಅಥವಾ ಶರಣಾಗತಿಯನ್ನು ಅನುಷ್ಠಿಸುವುದ-ಕ್ಕಿಂತ ಮೊದಲೆ, ಪರಮ ಕಾರುಣಿಕನಾದ ಭಗವಂತನು ಸಂಸಾರ ಸಾಗರದಲ್ಲಿ ಮುಳುಗಿ ನಾನಾತರಹದ ದುಃಖವನ್ನನುಭವಿಸುತ್ತಿರುವ ಆ ಚೇತನರನ್ನು ಉದ್ಧರಿಸಬೇಕೆಂದು ಸಂಕಲ್ಪಿಸುತ್ತಾನೆ. ಈ ಸಂಕಲ್ಪದಿಂದಲೇ ಚೇತನರಿಗೆ ಆಯಾಯ ಜನ್ಮ ಪಡೆಯುವಾಗ ತನ್ನ ಕೃಪಾಕಟಾಕ್ಷವನ್ನು ಬೀರುತ್ತಾನೆ.

**"ಜಾಯಮಾನಂ ಹಿ ಪುರುಷಂ ಯಂ ಪಶ್ಯೇನ್ಮಧುಸೂದನಃ |**
**ಸಾತ್ವಿಕಃ ಸ ತು ವಿಜ್ಞೇಯಃ ಸ ವೈ ಮೋಕ್ಷಾರ್ಥ ಚಿಂತಕಃ ||"**

—ಎಂದು ಹೇಳುವಂತೆ, ಆಚೇತನರು ಆಯಾ ಜನ್ಮದಲ್ಲಿ ಸತ್ತ್ವಗುಣ ಭೂಯಿಷ್ಠರಾಗಿದ್ದು ಸಂಸಾರ ಸಾಗರದಿಂದ ಬಿಡುಗಡೆ ಹೊಂದುವುದೆಂತು ? ಮೋಕ್ಷದಲ್ಲಿ ನಾವು ಪಡೆಯುವ ಪರಬ್ರಹ್ಮಾನಂದವೆಂತು ? —ಇತ್ಯಾದಿಯಾಗಿ ಚಿಂತಿಸುತ್ತಾ, ಸದಾಚಾರ್ಯರ ಕಟಾಕ್ಷ, ಉಪದೇಶಾದಿಗಳಿಂದ ಸದರ್ಥಗಳನ್ನೂ ತತ್ತ್ವಹಿತ ಪುರುಷಾರ್ಥಗಳನ್ನೂ ಅರಿತವರಾಗಿ ಭಕ್ತಿ ಅಥವಾ ಶರಣಾಗತಿಯನ್ನು

ಅನುಷ್ಠಿಸಿ ಕರ್ಮಬಂಧವನ್ನು ನೀಗಿ ಶ್ರೀವೈಕುಂಠವನ್ನು ಸೇರಿ ನೊಡನೆನಿರಂತರವಾಗಿ ಪರಿಪೂರ್ಣ ಬ್ರಹ್ಮಾನಂದವನ್ನನುಭವಿಸುತ್ತಾರೆ.

'ತಸ್ಯಚ ವಶೀಕರಣಂ ತಚ್ಛರಣಾಗತಿರೇವ' –ಎಂದು ಹೇಳುವಂತೆ, ಭಕ್ತಿ, ಪ್ರಪತ್ತಿಗಳು, ಆ ಪರಮಾತ್ಮನನ್ನು, ಅವನು ನಮ್ಮ ಮೇಲೆ ವಿಶೇಷ-ವಾದ ಕೃಪೆ ತೋರುವಂತೆ ವಶಪಡಿಸಿಕೊಳ್ಳಲು ಕಾರಣವಾಗಿ, ಅವು ಆಯಾಯಾ ಫಲವನ್ನಪೇಕ್ಷಿಸುವ ಚೇತನರ ಕಾರ್ಯದಿಂದ ಸಾಧ್ಯವಾದುದ-ರಿಂದ ಭಕ್ತಿ ಪ್ರಪತ್ತಿಗಳನ್ನು ಸಾಧ್ಯೋಪಾಯ ವೆನ್ನುತ್ತಾರೆ.

"ಭಕ್ತಿ ಪ್ರಪತ್ತಿ ಪ್ರಮುಖಂ ತದ್ವಶೀಕಾರಕಾರಣಂ |
ತತ್ತತ್ಫಲಾರ್ಥಿಃ ಸಾಧ್ಯತ್ವಾತ್ ಸಾಧ್ಯೋಪಾಯಂ ವಿದುರ್ಬುಧಾಃ||
(ರಹಸ್ಯತ್ರಯಸಾರ-ಸಿದ್ಧೋಪಾಯಶೋಧನಾಧಿಕಾರ –ಶ್ಲೋಕ-೨೮)

ಚತುರ್ವಿಧ ಪುರುಷಾರ್ಥಗಳಿಗೂ ಸಾಧಕನಾದ, ದಯಾನಿಧಿಯಾದ ಶ್ರಿಯಃಪತಿಯು, ಚೇತನರು ಸಾಧ್ಯೋಪಾಯವಾದ ಭಕ್ತಿಪ್ರಪತ್ತಿಗಳನ್ನು ಅನುಷ್ಠಿಸುವ ಮುನ್ನವೇ, ಅವರನ್ನು ರಕ್ಷಿಸುವುದಾಗಿ ಸಂಕಲ್ಪಿಸಿ ಸಿದ್ಧನಾಗಿ ನಿಂತಿರುವುದರಿಂದ ಚೇತನರ ಫಲವನ್ನು ಕುರಿತು ಶ್ರಿಯಃಪತಿಯಾದ ಶ್ರೀಮನ್ನಾರಾಯಣನನ್ನು ಸಿದ್ಧೋಪಾಯನೆನ್ನುತ್ತಾರೆ.

"ಸಮುಸ್ತ ಪುರುಷಾರ್ಥಾನಾಂ ಸಾಧಕಸ್ಯದಯಾನಿಧೇಃ |
ಶ್ರೀಮತಃ ಪೂರ್ವಸಿದ್ಧತ್ವಾತ್ ಸಿದ್ಧೋಪಾಯಮಿಮಂ ವಿದುಃ||"
(ರಹಸ್ಯತ್ರಯಸಾರ–ಸಿದ್ಧೋಪಾಯ ಶೋಧನಾಧಿಕಾರ-ಶ್ಲೋಕ-೨೭)

ಅಕಿಂಚನರೂ, ಅಶಕ್ತರೂ ಆದ ಚೇತನರಿಗೆ, ಭಕ್ತಿಯೋಗಕ್ಕೆ ಶಕ್ತರಾದ ಚೇತನರಿಗೆ ಉಪದೇಶಿಸುವ ಭಕ್ತಿಯೋಗದ ಪರಿಕರಗಳನ್ನು ಉಪದೇಶಿಸಿದರೆ, ಅನುಷ್ಠಿಸಲು ಸಾಧ್ಯವಿಲ್ಲದಿರುವ ಅವುಗಳು ಕೇವಲ ಭಾರವಾದ ಹೊರೆಯಾಗು ತ್ತವೆ. ಆದುದರಿಂದ, ಆ ಭಾರವಾದ ಹೊರೆಯನ್ನು ಕಿತ್ತೊಗೆದು ಲಘುವಾದ ಉಪಾಯವೊಂದನ್ನು ಅಶಕ್ತರಾದ ಚೇತನರಿಗೋಸ್ಕರ ಉಪದೇಶಿಸಬೇಕೆಂದು

ಭೂಮಿಯು ಪ್ರಾರ್ಥಿಸಲು ಸರ್ವಜ್ಞನಾಗಿ ಭಕ್ತಿ ಯೋಗಾದಿಗಳಿಗೆ ಅನರ್ಹರಾಗಿರುವ ಚೇತನರ ಅಶಕ್ತತೆಯನ್ನೂ ಅರಿತಿರುವ, ಸಿದ್ಧೋಪಾಯನಾದ ವರಾಹಸ್ವಾಮಿಯು ತನ್ನನ್ನು ವಶಪಡಿಸಿಕೊಳ್ಳಲು ಎಲ್ಲರಿಂದಲೂ ಸುಲಭವಾಗಿ ಅನುಷ್ಠಿಸಲು ಸಾಧ್ಯವಾದ ಜ್ಞಾನ ಯಜ್ಞಸಾರವನ್ನು, ಪ್ರಸನ್ನನಾಗಿ, ನಮ್ಮಾಳ್ವಾರರು ತಿರುವಾಯ್ಮೊಳಿ (೩-೩-೩)ಯಲ್ಲಿ ಹೇಳಿರುವಂತೆ, 'ಶರಣಾಗತರಿಗೆ ಅವರ ಕರ್ಮದಿಂದ ಉಂಟಾಗಬಹುದಾದ ಜನ್ಮ-ಸಂತತಿಯನ್ನು ತಪ್ಪಿಸಿ, ಅವರನ್ನು ಶ್ರೀವೈಕುಂಠಕ್ಕೆ ಒಯ್ದು, ಅವರಿಗೆ ಸ್ವರೂಪಾವಿರ್ಭಾವವನ್ನುಂಟುಮಾಡಿ, ತನ್ನ ಅಡಿದಾವರೆಯಲ್ಲಿ ಕೈಂಕರ್ಯ ಮಾಡುವಂತೆ' -ತಾನು ಮಾಡುವ ಪ್ರಕಾರವನ್ನೂ, 'ಸ್ಥಿತೇಮನಸಿ' -ಎಂದು ಆರಂಭವಾಗುವ ಎರಡು ಶ್ಲೋಕಗಳಿಂದ ಕೃಪೆಗೈದು ತಿಳಿಸಿದ್ದಾನೆ.

**ಇನ್ವಡೈವೇ "ಸಭ್ರಾತುಶ್ಚರಣೌಗಾಡಂ" -"ಭವಾಂಸ್ತು ಸಹ ವೈದೇಹ್ಯಾ" -ಎನ್ಗಿರ ಇರಂಡು ಶ್ಲೋಕಂಗಳೈಯುಮ್, ಚರಮ ಶ್ಲೋಕತ್ತಿಲ್ ಪೂರ್ವೋತ್ತರಾರ್ಥಂಗಳೈಯುಮ್ 'ಅಕಲಕಿಲ್ಲೇನ್' ಮುದಲಾನ ಇರಂಡು ಪಾಟ್ಟುಕ್ಕಳೈಯುಮ್ ಅನ್ಯೋನ್ಯೋಪಕಾರಕಂಗಳಾಕ ಅನುಸಂಧಿಪ್ಪದು.**

**ಇನ್ವಡೈವೇ**=ಈ ಸಂದರ್ಭದಲ್ಲಿ, **"ಸಭ್ರಾತುಶ್ಚರಣೌಗಾಢಂ" "ಭವಾಂಸ್ತು ಸಹವೈದೇಹ್ಯಾ" -ಎನ್ಗಿರ**="ಸಭ್ರಾತುಶ್ಚರಣೌ ಗಾಢಂ" ಮತ್ತು "ಭವಾಂಸ್ತು ಸಹವೈದೇಹ್ಯಾ" -ಎಂದು ಪ್ರಾರಂಭವಾಗುವ, **ಇರಂಡು ಶ್ಲೋಕಂಗಳೈಯುಮ್**=ಎರಡು ಶ್ಲೋಕಗಳನ್ನೂ, **ಚರಮಶ್ಲೋಕತ್ತಿಲ್**=ಭಗವದ್ಗೀತೆಯಲ್ಲಿ ಕೃಷ್ಣಪರಮಾತ್ಮನು ಅರ್ಜುನನಿಗೆ ಹೇಳಿದ "ಸರ್ವಧರ್ಮಾನ್ ಪರಿತ್ಯಜ್ಯ" -ಎಂದಾರಂಭಿಸುವ ಚರಮಶ್ಲೋಕದಲ್ಲಿನ, **ಪೂರ್ವೋತ್ತರಾರ್ಥಂಗಳೈಯುಮ್**=ಪೂರ್ವ ಮತ್ತು ಉತ್ತರಾರ್ಧದ ಅರ್ಥಗಳನ್ನೂ, **'ಅಕಲಗಿಲ್ಲೇನ್' ಮುದಲಾನ**='ಅಕಲಕಿಲ್ಲೇನ್' -ಎಂದು ಪ್ರಾರಂಭವಾಗುವ ಪಾಶುರವೇ ಮೊದಲಾದ, **ಇರಂಡುಪಾಟ್ಟುಕಳೈಯುಮ್**=(ನಮ್ಮಾಳ್ವಾರವರ) ಎರಡು ಹಾಡುಗಳನ್ನೂ, **ಅನ್ಯೋನ್ಯ-**

**ಉಪಕಾರಕಂಗಳಾಕ**=ಪರಸ್ಪರ **ಉಪಕಾರಕಗಳಾಗಿ, ಅನುಸಂಧಿಪ್ಪದು**=ಅನುಸಂಧಾನಮಾಡುವುದು.

ಈ ವರಾಹ ಚರಮಶ್ಲೋಕವನ್ನು ಅರ್ಥಮಾಡಿಕೊಳ್ಳುವ ಸನ್ನಿವೇಶದಲ್ಲಿ ಶ್ರೀಮದ್ರಾಮಾಯಣದ, ಭಗವದ್ಗೀತೆಯ ಮತ್ತು ನಮ್ಮಾಳ್ವಾರವರ ಕೆಲ ಶ್ರೀಸೂಕ್ತಿಗಳ ಅರ್ಥಗಳನ್ನೂ ಉಪಕಾರಕಗಳಾಗಿ ಅನುಸಂಧಾನ ಮಾಡಬೇಕು.

**ಶ್ರೀಮದ್ರಾಮಾಯಣದಲ್ಲಿ, ಶ್ರೀರಾಮಚಂದ್ರನು ಸೀತೆಯೊಡನೆ ಕಾಡಿಗೆ ಹೋಗಲು ಒಪ್ಪಿದೊಡನೆ, ನಿರಂತರವಾಗಿ, ಅವರಿಬ್ಬರ ಕೈಂಕರ್ಯ ಮಾಡುವುದೇ ತನ್ನ ಸ್ವರೂಪವೆಂದು ಅರಿತಿದ್ದ ಲಕ್ಷ್ಮಣನು, ಅವರಿಬ್ಬರ ಕೈಂಕರ್ಯವನ್ನು ಮಾಡಲು ತನಗೆ ಶ್ರೀರಾಮಚಂದ್ರನು ಅವಕಾಶವನ್ನು ಅನುಗ್ರಹಿಸಿ ಕೊಡಬೇಕೆಂದು ಶ್ರೀರಾಮಚಂದ್ರನ ಅಡಿದಾವರೆಯಲ್ಲಿ ಶರಣಾಗತಿಯನ್ನು ಅನುಷ್ಠಿಸುತ್ತಾನೆ. ಆ ಕ್ರಮವನ್ನು ವೇದಾಂತದೇಶಿಕರು ಇಲ್ಲಿ ಉಪಹರಿಸಿರುವ ಎರಡು ಶ್ಲೋಕಗಳಲ್ಲಿ ವಾಲ್ಮೀಕಿಮಹರ್ಷಿಗಳು ತಿಳಿಸಿದ್ದಾರೆ. ಆ ಎರಡು ಶ್ಲೋಕಗಳೂ ಇಂತಿವೆ —**

**"ಸಭ್ರಾತುಶ್ಚರಣೌ ಗಾಢಂ ನಿಪೀಡ್ಯ ರಘುನಂದನಃ ।**
**ಸೀತಾಮುವಾಚಾತಿಯಶಾ ರಾಘವಂ ಚ ಮಹಾವ್ರತಮ್ ॥**
**ಭವಾಂಸ್ತು ಸಹ ವೈದೇಹ್ಯಾ ಗಿರಿಸಾನುಘುರಂಸ್ಯತೇ ।**
**ಅಹಂ ಸರ್ವಂ ಕರಿಷ್ಯಾಮಿ ಜಾಗ್ರತಸ್ಸ್ವಪತಶ್ಚತೇ ॥**

**(ರಾಮಾಯಣ ಅಯೋಧ್ಯಾಕಾಂಡ)**

**ರಘುನಂದನಃ**=ರಘುವಂಶದಲ್ಲಿ ಜನಿಸಿದ, **ಅತಿಯಶಾಃ**=ಮಹತ್ತಾದ **ಖ್ಯಾತಿಯನ್ನು** ಹೊಂದಿದ, **ಸಃ**=(ಉಪಾಯಾಂತರಗಳನ್ನರಿಯದೆ ಬಾಷ್ಪಪರ್ಯಾಕುಲನಾದ) ಆ ಲಕ್ಷ್ಮಣನು, **ಭ್ರಾತುಃ**=ತನ್ನ ಅಣ್ಣನಾದ **ಶ್ರೀರಾಮಚಂದ್ರನ, ಚರಣೌ**=ಎರಡು ಕಾಲುಗಳನ್ನೂ, **ಗಾಢಂ**=ಬಹು **ಭಟ್ಟಿಯಾಗಿ** (ಮಹಾವಿಶ್ವಾಸಪೂರ್ವಕವಾಗಿ), **ನಿಪೀಡ್ಯ**=ಹಿಡಿದುಕೊಂಡು,

**ಸೀತಾಂ**=(ಲೋಕಪಿತಾವಾದ ಶ್ರೀರಾಮಚಂದ್ರನು ಒಂದುವೇಳೆ ಒಪ್ಪದಿದ್ದರೂ, ಮಹಾತಾಯಿಯಾದ ಲಕ್ಷ್ಮ್ಯವತಾರಳಾದ ಸೀತಾದೇವಿಯನ್ನು ಕೇಳಿಕೊಂಡರೆ, ಅವಳಲ್ಲಿ ಮಾಡಿದ ಪ್ರಾರ್ಥನೆ ವಿಫಲವಾಗದಂತೆ, ಆಕೆ ಪುರುಷಕಾರಭೂತಳಾಗಿ ತನ್ನ ಪತಿಯನ್ನೂ ಒಪ್ಪುವಂತೆ ಮಾಡುತ್ತಾಳೆಂಬ ಭರವಸೆಯಿಂದ) ಸೀತಾದೇವಿಯನ್ನೂ, **ಮಹಾವ್ರತಮ್**="**ನತ್ಯಜೇಯಂಶರಣಂಚನ**" ="ಶರಣಾಗತನನ್ನು ಎಂದಿಗೂ ಕೈಬಿಡುವುದಿಲ್ಲ" –ಎಂದೂ, ಮತ್ತು "**ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ**" —"ಒಂದುಸಲ, ನಿನಗೆ ನಾನು ಸೇರಿದವನಾಗಿದ್ದೇನೆ, ನನ್ನ ರಕ್ಷಾಭರ ನಿನಗೆ ಸೇರಿದುದು ನನ್ನನ್ನು ರಕ್ಷಿಸು" –ಎಂದು ಶರಣುಹೋದವನಿಗೆ, (ಅವನು ಯಾರೇ ಆಗಲಿ) ಅವನಿಗೆ (ಎಲ್ಲ ಭೂತಗಳ ಸಕಾಶದಿಂದಲೂ) ಅಭಯವನ್ನು ನೀಡಿ ಕಾಪಾಡುತ್ತೇನೆ. ಇದೇ ನನ್ನ ವ್ರತ" –ಎಂದು ಶರಣಾಗತರನ್ನು ಸಂರಕ್ಷಿಸುವ ಅತಿ ದೊಡ್ಡದಾದ ವ್ರತವೊಂದನ್ನು ಕೈಗೊಂಡಿರುವ, **ರಾಘವಂ ಚ**=(ಮಹಾಲಕ್ಷ್ಮಿಸ್ವರೂಪಿಣಿಯಾದ ಸೀತಾದೇವಿಯೊಡನೆ) ಶ್ರೀರಾಮಚಂದ್ರನನ್ನೂ ಸಹ ಕುರಿತು, **ಉವಾಚ**=ಹೇಳಿದನು.

**ವೈದೇಹ್ಯಾಸಹ** = ಸೀತೆಯೊಡನೆ, **ಭವಾಂಸ್ತು** = ನೀವಾದರೋ **ಗಿರಿಸಾನುಷು**=ಪರ್ವತದ ತಪ್ಪಲುಪ್ರದೇಶಗಳಲ್ಲಿ, **ರಂಸ್ಯತೇ**=ವಿಹರಿಸಿ, **ತೇ**=ಸೀತಾಸಮೇತನಾದ ನಿಮಗೆ, **ಜಾಗ್ರತಃ**=ಎದ್ದಿರುವಾಗಲೂ, **ಚ**= ಮತ್ತು, **ಸ್ವಪತಃ**=ನಿದ್ರಿಸುತ್ತಿರುವಾಗಲೂ (ಆಯಾ ಪ್ರದೇಶದಲ್ಲಿ, ಆಯಾ ಕಾಲದಲ್ಲಿ, ಆಯಾವಸ್ಥೆಯಲ್ಲಿ ಉಚಿತವಾದ) **ಸರ್ವಂ**=ಎಲ್ಲ ವಿಧವಾದ ಕೈಂಕರ್ಯಗಳನ್ನೂ, **ಅಹಂ ಕರಿಷ್ಯಾಮಿ**=ನಾನು ಮಾಡುವೆನು.

ಈ ಮೇಲಿನ ಶ್ಲೋಕಗಳೆರಡರಲ್ಲಿ, ಮೊದಲನೆಯ ಶ್ಲೋಕದಲ್ಲಿ ಲಕ್ಷ್ಮಣನು ಶ್ರೀರಾಮನ ಅಡಿದಾವರೆಗಳಲ್ಲಿ ಶರಣುಹೋದಂತೆ, ನಮಗೆ ನಿರಂತರವಾದ, ಐಹಿಕಾಮುಷ್ಮಿಕವಾದ ಭಗವಂತನ ಕೈಂಕರ್ಯಶ್ರೀ ಲಭಿಸಬೇಕಾದರೆ, ಭಗವಂತನ ಅಡಿದಾವರೆಗಳಲ್ಲಿ ಶರಣುಹೋಗುವುದಲ್ಲದೆ ಬೇರೆ

ಉಪಾಯವಿಲ್ಲವೆಂದೂ; ಲಕ್ಷ್ಮಣನು ಘಟ್ಟಿಯಾಗಿ ರಾಮನ ಪಾದವನ್ನು ಹಿಡಿದಂತೆ ಭಗವಂತನಲ್ಲಿ ಮಹಾ ವಿಶ್ವಾಸಪೂರ್ವಕವಾಗಿ ಶರಣಾಗತಿ ಮಾಡಬೇಕೆಂದೂ; ಸೀತೆಯನ್ನು ಮುಂದಿಟ್ಟುಕೊಂಡು ಲಕ್ಷ್ಮಣನು ರಾಘವನನ್ನು ಕುರಿತು ಪ್ರಾರ್ಥಿಸಿದಂತೆ, ನಾವೂ ಶರಣಾಗತ್ಯನುಷ್ಠಾನಕಾಲದಲ್ಲಿ ಪುರುಷಕಾರಭೂತಳಾದ ಮಹಾಲಕ್ಷ್ಮಿಯನ್ನು ಮುಂದಿಟ್ಟುಕೊಂಡೇ ಲಕ್ಷ್ಮೀನಾರಾಯಣರಿಬ್ಬರಲ್ಲಿಯೂ ನಮ್ಮ ರಕ್ಷಾಭರಸಮರ್ಪಣರೂಪವಾದ ಶರಣಾಗತಿಯನ್ನು ಅನುಷ್ಠಿಸಬೇಕೆಂದೂ, ಈರೀತಿ ಶರಣಾಗತಿಯನ್ನನುಷ್ಠಿಸಿದರೆ, ಶರಣಾಗತರನ್ನು ಸಂರಕ್ಷಣಾವನ್ನು ಮಾಡುವುದೇ ವ್ರತವನ್ನಾಗಿ ಹೊಂದಿರುವ ಮಹಾವ್ರತನಾದ ಶ್ರಿಯಃಪತಿಯು ನಮ್ಮನ್ನೂ ರಕ್ಷಿಸಿಯೇ ತೀರುತ್ತಾನೆಂದೂ ತಿಳಿದುಬರುತ್ತದೆ. ಪರಮಪುರುಷಾರ್ಥವಾದ ಮೋಕ್ಷಸಾಮ್ರಾಜ್ಯವನ್ನು ಪಡೆಯಲು ಅವನಲ್ಲಿ ನಾವು ಮಾಡುವ ಶರಣಾಗತಿಯೊಂದೇ – ಉಪಾಯವಾದುದು. ವರಾಹ ಚರಮ ಶ್ಲೋಕದಲ್ಲಿ ಪೂರ್ವಶ್ಲೋಕದಲ್ಲಿನ **"ಸ್ಮರ್ತಾ ವಿಶ್ವರೂಪಂ ಚ ಮಾಮಜಂ"** –ಎಂಬಲ್ಲಿ ಈ ಮೇಲಿನ ಶ್ಲೋಕದಲ್ಲಿ ತಿಳಿಸಿರುವಂತೆ, ಪರಮಾತ್ಮನನ್ನು ಸ್ಮರಣಮಾಡಿಕೊಳ್ಳುವಲ್ಲಿ ಶ್ರೀಯಃಪತಿಯಾದ ಪರಮಾತ್ಮನೇ ರಕ್ಷಕನೆಂದೂ, ಶರಣಾಗತರನ್ನು ಅವನು ಎಂದೂ ಕೈಬಿಡನೆಂದೂ ಮಹಾವಿಶ್ವಾಸಪೂರ್ವಕವಾಗಿ, ಲಕ್ಷ್ಮೀ ವಿಶಿಷ್ಟನಾದ ನಾರಾಯಣನಲ್ಲಿ ನಮ್ಮ ರಕ್ಷಾಭರವನ್ನು ಅರ್ಪಿಸಿ, ಅವನಲ್ಲಿ ಬೇಡಿಕೊಂಡು, ಅವನನ್ನು ಒಮ್ಮೆ ಸ್ಮರಿಸಿಕೊಂಡಿದ್ದರೂ, ಅವನು ಶರಣಾಗತನಾದ ಚೇತನನ ಅಂತ್ಯಕಾಲದಲ್ಲಿ ತಾನಾಗಿ ಬಂದು ಅವನನ್ನು ಕರೆದೊಯ್ಯುತ್ತಾನೆ –ಎಂದು ತಿಳಿಯಬೇಕು.

ಮೇಲಿನ ಶ್ರೀಮದ್ರಾಮಾಯಣದ ಎರಡನೆಯ ಶ್ಲೋಕದಿಂದ, ಈ ಕೆಳಕಂಡ ವಿಷಯಗಳು ದ್ಯೋತಿತವಾಗುತ್ತವೆ. ಮೇಲಿನ ಶ್ಲೋಕದಲ್ಲಿ ಶ್ರೀರಾಮಚಂದ್ರನಲ್ಲಿ ಶರಣುಹೋದ ಲಕ್ಷ್ಮಣನು, ರಾಮನಲ್ಲಿ ಅರುಹುವಲ್ಲಿ ಸೀತಾರಾಮರಿಬ್ಬರು ರಮಿಸುತ್ತಿರುವಲ್ಲಿ ತಾನು ಎಚ್ಚರವಾಗಿರುವಲ್ಲಿಯೂ ನಿದ್ರಿಸುತ್ತಿರುವಲ್ಲಿಯೂ, ಅವರಿಬ್ಬರಿಗೂ ಸರ್ವವಿಧವಾದ ಕೈಂಕರ್ಯವನ್ನೂ ಮಾಡುತ್ತೇನೆಂದು ಹೇಳುತ್ತಾನೆ. ಇದರಿಂದ ಶರಣಾಗತನೂ ಶ್ರಿಯಃಪತಿಯಲ್ಲಿ

ಶರಣುಹೋಗುವಲ್ಲಿ, ಆ ದಿವ್ಯ ದಂಪತಿಗಳಿಗೆ, ಸರ್ವದೇಶ, ಸರ್ವಕಾಲ, ಸರ್ವಾವಸ್ಥೋಚಿತವಾದ ಸರ್ವವಿಧ ಕೈಂಕರ್ಯವನ್ನೂ ಎಸಗುವುದೇ ತನ್ನ ಸ್ವರೂಪವಾದುದರಿಂದ, ಶರಣಾಗತ್ಯನುಷ್ಠಾನಮಾಡಿದ ಉತ್ತರ ಕ್ಷಣದಿಂದಲೇ ತನಗೆ ದೇಹಾವಸಾನವಾಗುವವರೆವಿಗೂ . ಈ ಪ್ರಕೃತಿಮಂಡಲದಲ್ಲಿರುವಾಗ ನಿರಪರಾಧವಾದ ಭಗವದ್ಭಾಗವತ ಕೈಂಕರ್ಯವನ್ನೂ, ದೇಹವಸಾನ-ವಾದ ಬಳಿಕ ಶ್ರೀವೈಕುಂಠದಲ್ಲಿ ನಿರಂತರವಾದ ಭಗವಂತನ ಕೈಂಕರ್ಯ ಶ್ರೀಯನ್ನು ಅನುಗ್ರಹಿಸಬೇಕೆಂದೂ. ಪ್ರಾರ್ಥಿಸಬೇಕೆಂದೂ, ತಿಳಿದು-ಬರುತ್ತದೆ. ಇದೇ ವರಾಹ ಚರಮಶ್ಲೋಕದಲ್ಲಿ "ಸ್ಮರ್ತಾ" "ನನ್ನನ್ನು ಸ್ಮರಣಮಾಡುವವನನ್ನು" –ಎಂದು ಹೇಳುವಲ್ಲಿ, ಭಗವಂತನನ್ನು ಸ್ಮರಣಮಾಡಿಕೊಂಡು ಈ ಮೇಲೆ ಹೇಳಿದಂತೆ ಅವನಲ್ಲಿ ಶರಣುಹೋಗಿ, ಮೇಲೆ ಹೇಳಿದಂತೆಯೇ ಅವನಲ್ಲಿ ಕೈಂಕರ್ಯಶ್ರೀಯನ್ನು ಪ್ರಾರ್ಥನೆಮಾಡಬೇ-ಕೆಂದೂ, ಆ ರೀತಿ ಕೇಳಿಕೊಂಡವರಿಗೆ ಪರಮಾತ್ಮನು ಕೈಂಕರ್ಯಶ್ರೀಯನ್ನು ಅನುಗ್ರಹಿಸುವನೆಂದೂ, ಒಂದುವೇಳೆ ಶರಣಾಗತನ ಪ್ರಾರಬ್ಧಕರ್ಮವು ಪ್ರಬಲವಾಗಿದ್ದು ಐಹಿಕವಾದ ಭಗವದ್ಭಾಗವತ ಕೈಂಕರ್ಯಕ್ಕೆ ಧಕ್ಕೆತಂದು, ಇದರಿಂದ ದೇಹಾವಸಾನಕಾಲದಲ್ಲಿ ಅಂತ್ಯಕಾಲಸ್ಮೃತ್ಯಾದಿಗಳು ಇಲ್ಲದಿದ್ದರೂ, ಭಗವಂತನು "ನಯಾಮಿ ಪರಮಾಂ ಗತಿಂ" –ಎಂದು ಹೇಳಿರುವುದರಿಂದ ದೇಹಾವಸಾನಕಾಲದಲ್ಲಿ ಶ್ರೀವೈಕುಂಠಕ್ಕೆ ಕೊಂಡೊಯ್ದು ಅವನಿಗೆ ನಿರಂತರ-ವಾಗಿ ಸರ್ವವಿಧವಾದ ಕೈಂಕರ್ಯವನ್ನೂ ಮಾಡುವ ಸೌಭಾಗ್ಯವನ್ನೂ ಅನುಗ್ರಹಿಸುವನೆಂದೂ ತಿಳಿದುಬರುತ್ತದೆ.

ಮೇಲಿನ ರಾಮಾಯಣದ ಪ್ರಸಂಗದಲ್ಲಿ ಲಕ್ಷ್ಮಣನು ಸೀತಾಸಮೇತ-ನಾದ ರಾಮನಲ್ಲಿ ಶರಣಾಗತಿ ಮಾಡುವುದರಿಂದಲೂ, ಮತ್ತು ಸೀತಾರಾಮ-ರಿಬ್ಬರಿಗೂ ಕೈಂಕರ್ಯವನ್ನು ಮಾಡುತ್ತೇನೆಂದೂ ಹೇಳಿರುವುದರಿಂದ, ಉಪಾ-ಯಾನುಷ್ಠಾನ ಮಾಡುವ ಕಾಲದಲ್ಲಿ ಲಕ್ಷ್ಮೀವಿಶಿಷ್ಟನಾದ ನಾರಾಯಣನಲ್ಲಿ ಶರಣಾಗತಿಯನ್ನು ಮಾಡಬೇಕೆಂದೂ ಮತ್ತು ಕೈಂಕರ್ಯದೆಶೆಯಲ್ಲಿ (ಉಪೇಯದೆಶೆಯಲ್ಲಿ) ಲಕ್ಷ್ಮೀವಿಶಿಷ್ಟನಾದ ನಾರಾಯಣನ ಕೈಂಕರ್ಯವೇ

ನಮಗೆ ಸ್ವರೂಪಸಿದ್ಧವಾಗಿ ತಿಳಿದುಬರುತ್ತದೆ. ಆದುದರಿಂದ ಮಹಾ-ಲಕ್ಷ್ಮಿಯು ಕೇವಲ ಪುರುಷಾಕಾರಭೂತಳು ಮಾತ್ರವಲ್ಲ, ಪುರುಷಾರ್ಥ ಅನು-ಗ್ರಾಹಕಳೂ ಆಗಿದ್ದಾಳೆ. ಆದುದರಿಂದ ವರಾಹಚರಮಶ್ಲೋಕದಲ್ಲಿ ಹೇಳಿರುವ "ಮಾಂಸ್ಮರ್ತಾ" –'ನನ್ನನ್ನು ಸ್ಮರಣೆಮಾಡುವವರನ್ನು –ಎಂಬಲ್ಲಿ 'ಶ್ರಿಯಃ ಪತಿಯಾದ ನನ್ನನ್ನು ಸ್ಮರಣೆಮಾಡುವವರನ್ನು' –ಎಂದೂ, "ಅಹಂ ಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂಗತಿಂ"– (ದೇಹಾವಸಾನಕಾಲದಲ್ಲಿ) 'ಶ್ರಿಯಃ ಪತಿಯಾದ ನಾನೇ ನನ್ನ ಭಕ್ತನನ್ನು (ಶರಣಾಗತನನ್ನು) ಸ್ಮರಿಸಿಕೊಂಡು ಶ್ರೀವೈಕುಂಠಲೋಕಕ್ಕೆ ಕರೆದೊಯ್ಯುತ್ತೇನೆ' –ಎಂದೂ ಅರ್ಥವನ್ನು ಗ್ರಹಿಸ-ಬೇಕು –ಎಂಬ ಆಶಯದಿಂದಲೇ ಆಚಾರ್ಯರು ವರಾಹ ಚರಮಶ್ಲೋಕಾರ್ಥ-ವನ್ನು ತಿಳಿಯುವಲ್ಲಿ ಮೇಲಿನ ಶ್ರೀಮದ್ರಾಮಾಯಣದ ಎರಡು ಶ್ಲೋಕ-ಗಳನ್ನೂ ಉಪಕಾರಕವಾಗಿ ಅನುಸಂಧಾನ ಮಾಡಬೇಕೆಂದು ತಿಳಿಸಿದ್ದಾರೆ.

ಅಂತೆಯೇ, ವರಾಹಚರಮಶ್ಲೋಕಗಳ ಅರ್ಥವನ್ನು ಗ್ರಹಿಸುವಲ್ಲಿ, ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಉಪದೇಶಿಸಿದ-ಶ್ರೀಕೃಷ್ಣಚರಮಶ್ಲೋಕದ ಪೂರ್ವೋತ್ತರಾರ್ಧಗಳ ಅರ್ಥಗಳನ್ನೂ ಉಪ-ಕಾರಕವಾಗಿ ಅನುಸಂಧಾನ ಮಾಡಬೇಕು.

ಮಹಾಭಾರತದ ಯುದ್ಧವು ಪ್ರಾರಂಭವಾಗುವ ಸನ್ನಿವೇಶದಲ್ಲಿ, ಕೌರವ ಪಾಂಡವರ ಉಭಯಪಕ್ಷದ ಸೈನ್ಯವೂ ಪರಸ್ಪರ ಯುದ್ಧ ಮಾಡಲು ಸನ್ನದ್ಧರಾಗಿ ರಣರಂಗದಲ್ಲಿ ನಿಂತಿರುವಲ್ಲಿ, ಅಧರ್ಮವನ್ನು ನಿಗ್ರಹಿಸುವುದೇ ತನ್ನ ಕ್ಷತ್ರಿಯ ಧರ್ಮವಾಗಿದ್ದರೂ, ಅಧರ್ಮವೇ ಮೂರ್ತಿವೆತ್ತಂತಿರುವ ದುರ್ಯೋಧನಾದಿಗಳ ಪಕ್ಷದಲ್ಲಿ ನಿಂತು ಯುದ್ಧಮಾಡಲು ಸಿದ್ಧರಾಗಿರುವ ತನ್ನ ಗುರುಗಳೂ ಅನುಬಂಧಿಗಳೂ ಆದವರನ್ನು ತಾನು ಕೊಲ್ಲುವುದು ಅಧರ್ಮವೆಂದು ಭಾವಿಸಿ, ಏನೂ ತೋಚದೆ, ಕಿಂಕರ್ತವ್ಯಮೂಢನಾಗಿ, **"ಕಾರ್ಪಣ್ಯದೋಷೋಪಹತ ಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಂ-ಮೂಢ ಚೇತಾಃ । ಯಚ್ಛ್ರೇಯಸ್ಸ್ಯಾಂ ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥** "ಅಜ್ಞಾನದಿಂದ ಆವೃತ-

ವಾದ ಸ್ವಭಾವವುಳ್ಳವನಾಗಿ, ಧರ್ಮ ಮತ್ತು ಅಧರ್ಮವನ್ನು ವಿವಿಚ್ಯವಾಗಿ ತಿಳಿದುಕೊಳ್ಳುವ ಬುದ್ಧಿ ಸಾಮರ್ಥ್ಯವಿಲ್ಲದಿರುವ ನಾನು, ನಿನ್ನನ್ನು ಕುರಿತು ಬೇಡುತ್ತಿದ್ದೇನೆ. ಶ್ರೇಯಸ್ಕರವಾದುದಾವುದೋ ಅದನ್ನು ನೀನು ನನಗೆ ತಿಳಿಸು, ನಿನಗೆ ನಾನು ಶಿಷ್ಯನಾಗಿದ್ದೇನೆ. ನಿನ್ನಲ್ಲಿ ಶರಣುಹೋಗಿರುವ ನನ್ನನ್ನು ಕುರಿತು (ನಾನು ಏನು ಮಾಡಬೇಕೆಂಬುದನ್ನು) ವಿಧಿಸು (ಆಜ್ಞಾಪಿಸು)! ” –ಎಂದು ಬೇಡುತ್ತಾನೆ. ಆಗ ಕೃಷ್ಣಪರಮಾತ್ಮನು ಅರ್ಜುನನವ್ಯಾಜದಲ್ಲಿ ಚೇತನ ಸಾಮಾನ್ಯರೆಲ್ಲರಿಗೂ ಅನ್ವಯಿಸುವಂತೆ ಉಪನಿಷದರ್ಥಸಾರಭೂತ-ವಾದ ಭಗವದ್ಗೀತೆಯನ್ನುಪದೇಶಿಸುತ್ತಾನೆ. ಅದರಲ್ಲಿ, ಮೊದಲು ಕರ್ಮ-ಯೋಗ, ಜ್ಞಾನಯೋಗ ಸಹಕೃತವಾದ ಭಕ್ತಿಯೋಗವನ್ನುಪದೇಶಿಸಿದನು. ಆ ಉಪದೇಶವನ್ನು ಕೇಳಿದ ಅರ್ಜುನನು, ಆ ಭಕ್ತಿಯೋಗವು ತನ್ನ ಪಾಪ-ಗಳೆಲ್ಲವನ್ನೂ ತೊಳೆದುಹಾಕಿ, ತನಗೆ ಮೋಕ್ಷವನ್ನುಂಟುಮಾಡುವುದು ಸತ್ಯ-ವಾದರೂ, ಅದು ನಿರಂತರವಾಗಿ ದೀರ್ಘಕಾಲ ಬಹುಕಷ್ಟದಿಂದ ನಿರ್ವಹಿಸುವ ದುಷ್ಕರತ್ವದಿಂದ ಕೂಡಿರುವುದರಿಂದಲೂ, ಮತ್ತು ಭಗವತ್ಪ್ರಾಪ್ಯುಜ್ಯವೆಂಬ ಅದರ ಫಲವು ಬಹಳ ವಿಳಂಬವಾಗಿ ಲಭಿಸುವುದರಿಂದಲೂ, (“ದೀರ್ಘಕಾಲ ನೈರಂತರ್ಯಾದರಸೇವನೀಯೋಪಾಯದೌಷ್ಕರ್ಯಾತ್, ಫಲವಿಳಂ-ಬಾದ್ವಾ” –ತಾತ್ಪರ್ಯಚಂದ್ರಿಕಾ) ಆ ಭಕ್ತಿಯೋಗಾರಂಭಕ್ಕೆ ವಿಘ್ನವನ್ನು ತರುವ ತನ್ನ ಪಾಪಗಳಾದರೋ ಅನಂತವಾಗಿರುವುದರಿಂದಲೂ, ಅದನ್ನು ಕಳೆದುಕೊಳ್ಳಲು ಮಾಡಬೇಕಾದ ಪ್ರಾಯಶ್ಚಿತ್ತಗಳು ಬಹುಕಾಲ ಸಾಧ್ಯ-ವಾದುದರಿಂದಲೂ, ತನ್ನ ಆಯುಷ್ಯವಾದರೋ ಪರಿಮಿತಕಾಲವಾದುದರಿಂದಲೂ ತಾನು ಆ ಭಕ್ತಿಯೋಗಾನುಷ್ಠಾನಮಾಡಲು ಅನರ್ಹನೆಂದು ತಿಳಿದು, ತನಗೆ ಮೋಕ್ಷವೇ ಇಲ್ಲವೇ ? –ಎಂದು ಚಿಂತಿಸುತ್ತಾ ದುಃಖಿತನಾಗಿರಲು, ಶ್ರೀಕೃಷ್ಣಪರಮಾತ್ಮನು ಅವನನ್ನು ಕುರಿತು ಶರಣಾಗತ್ಯನುಷ್ಠಾನರೂಪ ಉಪಾಯವನ್ನು ತಿಳಿಸುವ ಚರಮಶ್ಲೋಕವನ್ನು ಉಪದೇಶಿಸುತ್ತಾನೆ. [ಭಕ್ತಿಯೋಗಸ್ಯತದಾರಂಭವಿರೋಧಿ ಪಾಪನಾಮಾನಂತ್ಯಾತ್ ತತ್ಪ್ರಾ-ಯಶ್ಚಿತ್ತ ರೂಪೈಃ ಧರ್ಮೈಃ ಪರಿಮಿತಕಾಲಕೃತ್ಯೈಃ | ತೇಷಾಂ ದುಸ್ತರ-ತಯಾ ಆತ್ಮನಃ ಭಕ್ತಿಯೋಗಾನರ್ಹತಾಮಾಲೋಚ್ಯ ಶೋಚತಃ

**ಅರ್ಜುನಸ್ಯ ಶೋಕಮಪನುದನ್ ಶ್ರೀಭಗವಾನುವಾಚ,"** -**ಭಗವ-ದ್ರಾಮಾನುಜ ಗೀತಾಭಾಷ್ಯ]** ಆ ಚರಮ ಶ್ಲೋಕವಾದರೋ ಇಂತಿದೆ :

**"ಸರ್ವಧರ್ಮಾನ್ ಪರಿತ್ಯಜ್ಯಮಾಮೇಕಂ ಶರಣಂ ವ್ರಜ|**
**ಅಹಂ ತ್ವಾ ಸರ್ವಪಾಪೇ ಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ||**

"**ಸರ್ವಧರ್ಮಾನ್ ಪರಿತ್ಯಜ್ಯ** = ಐಹಿಕಾಮುಷ್ಮಿಕ ಫಲಸಾಧನ-ಭೂತವಾದ ಕಾಮ್ಯಕರ್ಮಗಳನ್ನೂ, ಭಕ್ತಿಯೋಗಾಂಗವಾದ ಸಪರಿಕರವಾದ ೩೨ ವಿಧವಾದ ಬ್ರಹ್ಮವಿದ್ಯೋಪಾಸನಗಳನ್ನೂ ಬಿಟ್ಟು, **ಮಾಮೇಕಂ**= ನನ್ನೊಬ್ಬನನ್ನೇ, **ಶರಣಂವ್ರಜ**=ಮರೆಹೋಗು, **ಅಹಂ** = ನಾನು, **ತ್ವಾ**= ನಿನ್ನನ್ನು, **ಸರ್ವಪಾಪೇಭ್ಯಃ**=ಸರ್ವವಿಧವಾದ, ಸಂಚಿತ, ಆಗಾಮಿ ಮತ್ತು (ಅನಭ್ಯುಪಗತ) ಪ್ರಾರಬ್ಧ ಕರ್ಮಗಳಿಂದಲೂ, **ಮೋಕ್ಷಯಿಷ್ಯಾಮಿ**= ಬಿಡಿಸುತ್ತೇನೆ. **ಮಾಶುಚಃ**=(ಭಕ್ತಿಯೋಗಾನುಷ್ಠಾನಮಾಡಲು ಶಕ್ತನಲ್ಲ ವೆಂದು) ದುಃಖಿಸಬೇಡ."

ಈ ಮೇಲಿನ ಶ್ಲೋಕದಿಂದ ಮೋಕ್ಷಪ್ರದನಾದ ಪರಮಾತ್ಮನಲ್ಲಿ ಶರಣುಹೋದಬಳಿಕ, ಅನ್ಯದೇವತಾ ಭಜನಾದಿಗಳನ್ನು ಮಾಡಬಾರದೆಂಬುದು **'ಮಾಮೇಕಂ'**='ನನ್ನೊಬ್ಬನನ್ನೇ' -ಎಂಬ ಪದದಿಂದ ತಿಳಿದುಬರುತ್ತದೆ. **"ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂವ್ರಜ"** = ಎಂಬ ವಾಕ್ಯದಿಂದ ಮೋಕ್ಷಪ್ರದತ್ವ ಶ್ರೀಮನ್ನಾರಾಯಣನೊಬ್ಬನಿಗೆ ಇರುವುದೆಂದು ಮೋಕ್ಷೇಚ್ಛುವು ಅವನೊಬ್ಬನನ್ನೇ ಶರಣುಹೋಗಬೇಕೆಂದೂ, ಮೋಕ್ಷಪ್ರದಾ-ನಕ್ಕೆ ಪರಮಾತ್ಮನಲ್ಲಿ ಶರಣುಹೋಗುವುದನ್ನು ಬಿಟ್ಟು ಇನ್ನಾವುದೂ ಉಪಾಯಾಂತರವಿಲ್ಲವೆಂದೂ ಸ್ಪಷ್ಟವಾಗುತ್ತದೆ. ಈ ಮೇಲಿನ ಅರ್ಥವೆಲ್ಲ ವನ್ನೂ ವರಾಹ ಚರಮಶ್ಲೋಕದ **"ಮಾಂಸ್ಮರ್ತಾ"**=ನನ್ನನು ಸ್ಮರಿಸು-ವವನನ್ನೂ -ಎಂಬಲ್ಲಿ ಅನುಸಂಧಾನಮಾಡಬೇಕು.

ಮೇಲಿನ ಶ್ಲೋಕದ ಉತ್ತರಾರ್ಧವಾದ **"ಅಹಂ ತ್ವಾ ಸರ್ವಪಾಪೇ-ಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ"** -ಎಂಬಲ್ಲಿ, ಭಕ್ತಿಯೋಗನಿಷ್ಠನು

ವಿದ್ಯೋಪಾಸನೆಯನ್ನು ಕೈಗೊಂಡೊಡನೆ, ತತ್ಪೂರ್ವದಲ್ಲಿ ಅವನು ಮಾಡಿದ ಸಂಚಿತ ಆಗಾಮಿಕರ್ಮಗಳೂ, ತದುತ್ತರಕಾಲದಲ್ಲಿ ಅವನೆಸಗುವ ಅಬುದ್ಧಿ ಕೃತವಾದ ಕರ್ಮಗಳೂ ಅವನಿಗೆ ಅಂಟುವುದಿಲ್ಲವೆಂದು [**"ತದಧಿಗಮೇ ಉತ್ತರಪೂರ್ವಾಘಯೋಃ ಅಶ್ಲೇಷವಿನಾಶಾತ್"**](ಬ್ರಹ್ಮಸೂತ್ರ)ಹೇಳಿರುವುದು ಶರಣಾಗತನಿಗೂ ಅನ್ವಯವಾಗುವುದೆಂದೂ, ಆದುದರಿಂದಲೇ ಕರ್ಮದ-ಸಂಕೋಲೆಯಿಂದ ಬಿಡುಗಡೆಹೊಂದಿ ಶರಣಾಗತನು ಮೋಕ್ಷವನ್ನು ಪಡೆಯುವ-ನೆಂದೂ, ಆದುದರಿಂದ ಶರಣಾಗತನು ತಾನು ಭಕ್ತಿಯೋಗಕ್ಕೆ ಅನರ್ಹನೆಂದು ದುಃಖಪಡಬೇಕಾದುದಿಲ್ಲವೆಂದೂ, ತಿಳಿದುಬರುತ್ತದೆ. ಇದನ್ನು ವರಾಹ ಚರಮಶ್ಲೋಕದ ಉತ್ತರಾರ್ಧವಾದ**"ತತಸ್ತಂ ಮ್ರಿಯಮಾಣಂ ತಂ ಕಾಷ್ಠ-ಪಾಷಾಣ ಸನ್ನಿಭಮ್। ಅಹಂಸ್ಮರಾಮಿ ಮದ್ಭಕ್ತಂ ನಯಾಮಿ ಪರಮಾಂ-ಗತಿಂ ॥"** ಎಂಬಲ್ಲಿ, ಶರಣಾಗತನು ಒಂದುವೇಳೆ ಶರಣಾಗತ್ಯುತ್ತರಕಾಲದಲ್ಲಿ ಮಾಡಿದ ಪಾಪಕೆಲಸಗಳಿಗೆ ಯಥೋಕ್ತ ಪ್ರಾಯಶ್ಚಿತ್ತಗಳನ್ನು ಮಾಡಿ-ಕೊಳ್ಳದೆ, ದೇಹಾವಸಾನದಲ್ಲಿ ಅಂತ್ಯಕಾಲಸ್ಮೃತ್ಯಾದಿಗಳು ಪ್ರಾಪ್ತವಾಗದಿ-ದ್ದರೂ, ಪರಮಾತ್ಮನೆ, ಆ ಚೇತನನು ತನ್ನಲ್ಲಿ ಸಕೃತ್ ಅನುಷ್ಠಿಸಿದ ಶರ-ಣಾಗತಿರೂಪವಾದ ಸ್ಮರಣವನ್ನು ತಾನು ಸ್ಮರಿಸಿಕೊಂಡು, ಅವನನ್ನು ಸರ್ವ-ವಿಧವಾದ ಪಾಪದ ಸಂಕೋಲೆಯಿಂದ ಬಿಡಿಸಿ, ಶ್ರೀವೈಕುಂಠಲೋಕಕ್ಕೆ ಕರೆ-ದೊಯ್ದು ಅವನಿಗೆ ಮೋಕ್ಷಸಾಮ್ರಾಜ್ಯವನ್ನು ಅನುಗ್ರಹಿಸುತ್ತಾನೆಂದು ತಿಳಿಯಬೇಕು.

ಪ್ರಪನ್ನಜನಕೂಟಸ್ಥರಾದ ನಮ್ಮಾಳ್ವಾರ್ರವರು, ತಿರುಮಲೈಯ ಶ್ರೀನಿವಾಸನ ಅಡಿದಾವರೆಯಲ್ಲಿ ಶರಣಾಗತಿಯನ್ನನುಷ್ಠಿಸುವಲ್ಲಿ ಅನುಸಂಧಾನ ಮಾಡಿದ ಎರಡು ಪಾಶುರ (ಪದ್ಯ) ಗಳ ಅರ್ಥವನ್ನೂ ವರಾಹ ಚರಮ-ಶ್ಲೋಕದ ಅರ್ಥವನ್ನು ತಿಳಿಯುವಲ್ಲಿ ಉಪಕಾರಕವಾಗಿ ಅನುಸಂಧಾನ ಮಾಡಬೇಕೆಂದು ಆಚಾರ್ಯರು ಅಭಿಪ್ರಾಯಪಡುತ್ತಾರೆ. ಆ ಎರಡೂ ಪದ್ಯಗಳೂ ಇಂತಿವೆ :

**ಅಕಲಕಿಲ್ಲೇ ನಿರೈಯುಮೆನ್ರು ಅಲರ್ಮೇಲ್ ಮಂಗೈಯುರೈಮಾರ್ಬಾ।**
**ನಿಕರಿಲ್ ಪುಕಳಾಯ್ ಉಲಹಮೂನ್ರುಡೈಯಾಯ್ ಎನ್ನೈ ಆಳ್ವಾನೇ!**

**ನಿಕರಿಲ್ ಅಮರರ್ ಮುನಿಕ್ಕಣಂಗಳ್ ವಿರುಂಬುಂ ತಿರುವೇಂಗಡತ್ತಾನೇ!**
**ಪುಕಲೊನ್ರಿಲ್ಲಾ ವಡಿಯೇನ್ ಉನ್ನಡಿಕ್ಕೀಳ್ ಅಮರ್‌ನ್ದು**
**ಪುಕುನ್ದೇನೇ ||**

(ತಿರುವಾಯ್ಮೊಳಿ : ೬-೧೦-೧೦)

**ಇರೈಯುಮ್** = ಒಂದು ಕ್ಷಣವೂ, **ಅಕಲಕಿಲ್ಲೇನ್** = ಬಿಟ್ಟಿರಲು ನಾನು ಶಕ್ತನಲ್ಲ, **ಎನ್ರು** = ಎಂದು, **ಅಲರ್‌ಮೇಲ್‌ಮಂಗೈ** = ಕಮಲಪುಷ್ಪ-ದಲ್ಲಿ ವಾಸಮಾಡುವ ಮಹಾಲಕ್ಷ್ಮಿಯು, **ಉರೈ** = ನಿತ್ಯವಾಸಮಾಡುವ, **ಮಾರ್ಬಾ** = ವಕ್ಷಸ್ಥಲವುಳ್ಳವನೇ, **ನಿಕರಿಲ್** = ತನಗೆ ಸಮಾನವಿಲ್ಲದ, **ಪುಕಳಾಯ್** = ದಿವ್ಯಕೀರ್ತಿಯುಳ್ಳವನೇ, **ಮೂನ್ರುಲಹಮ್** = ತ್ರಿವಿಧ ಚೇತನಾಚೇತನ ಪ್ರಪಂಚಗಳನ್ನೂ, **ಉಡೈಯಾಯ್** = ಪಡೆದಿರುವ ಸ್ವಾಮಿಯೇ, **ಎನ್ನೈ** = ನನ್ನನ್ನು, **ಆಳ್ವಾನೇ** = ಆಳುವವನೇ, **ನಿಕರಿಲ್** = ಅನ್ಯಾದೃಶರಾದ, **ಅಮರರ್** = ದೇವತೆಗಳೂ, ನಿತ್ಯಸೂರಿಗಳೂ, **ಮುನಿ-ಕ್ಕಣಂಗಳ್** = ಮುನಿಗಳ ಸಮೂಹವೂ, **ವಿರುಂಬುಮ್** = ಆದರದೊಡನೆ ಬಂದು ಆಶ್ರಯಿಸುವ, **ತಿರುವೇಂಗಡತ್ತಾನೇ** = ಶ್ರೀವೆಂಕಟಾದ್ರಿಯಲ್ಲಿ ವಾಸ-ಮಾಡುವ ಸ್ವಾಮಿಯೇ, **ಪುಹಲ್** = ಶರಣ್ಯಾನ್ತರವು, **ಒನ್ರಿಲ್ಲಾ** = ಒಂದೂ ಇಲ್ಲದೆ, **ಅಡಿಯೇನ್** = ದಾಸನಾದ ನಾನು, **ಉನ್ನಡಿಕ್ಕೀಳ್** = ನಿನ್ನ ಪಾದದ ಕೆಳಗೆ, **ಅಮರ್‌ನ್ದು** = ಸೇರಿಕೊಂಡು, **ಪುಕುನ್ದೇನ್** ಪ್ರವೇಶಿಸಿದೆನು.

ಈ ಪಾಶುರದಲ್ಲಿ ನಮ್ಮಾಳ್ವಾರ್ರವರು ಲಕ್ಷ್ಮಿಯನ್ನು ವಕ್ಷಸ್ಥಲದಲ್ಲಿ ಧರಿಸಿರುವ ಶ್ರೀನಿವಾಸನಲ್ಲಿ ಶರಣಾಗತ್ಯನುಷ್ಠಾನಮಾಡಿರುವುದರಿಂದ, ನಾವು ಶ್ರೀ ವಿಶಿಷ್ಟನಾದ ಪರಮಾತ್ಮನಲ್ಲಿ ಶರಣುಹೋಗಬೇಕೆಂದೂ, ತ್ರಿವಿಧವಾದ ಚೇತನಾ ಚೇತನವರ್ಗಗಳಿಗೆ ಇವನು ಸ್ವಾಮಿಯೆಂದೂ, ನಿಸ್ಸಮಾಭ್ಯಧಿಕ-ನೆಂದೂ, ಇಹಲೋಕದಲ್ಲಿ ಪುರುಷಾರ್ಥಗಳನ್ನು ಗಳಿಸಬೇಕೆಂದು ಸಾಧನೆ-ಮಾಡುತ್ತಿರುವ ಮುನಿಗಳೂ ಮತ್ತು ಶ್ರೀವೈಕುಂಠಲೋಕದಲ್ಲಿರುವ ನಿತ್ಯ-ಸೂರಿಗಳೂ ಆಶ್ರಯಿಸಬೇಕೆಂದು ಆಸೆಪಡುವ ಸ್ವಾಮಿ ಇವನೆಂದು ಹೇಳಿರು-

ವುದರಿಂದ, ಉಪಾಯ ದೆಶೆಯಲ್ಲಿಯೂ ಉಪೇಯದೆಶೆಯಲ್ಲಿಯೂ ಶ್ರೀಯಃ-ಪತಿಯಾದ ಶ್ರೀಮನ್ನಾರಾಯಣನೇ ನಮಗೆ ರಕ್ಷಕನೆಂದೂ, ಪ್ರಾಪ್ಯಪ್ರಾಪಕ-ನೆಂದೂ ತಿಳಿದುಬರುತ್ತದೆ. ಈ ಅರ್ಥವೆಲ್ಲವನ್ನೂ ವರಾಹ ಚರಮಶ್ಲೋಕದ "ವಿಶ್ವರೂಪಂ ಚ ಮಾಮಜಂ -ಸ್ಮರ್ತಾ"–ಎಂಬಲ್ಲಿ ಅನುಸಂಧಾನ ಮಾಡ-ಬೇಕು.

**ಅಡಿಕ್ಕೀಳ್ ಅಮರ್ನ್ದುಪುಕುನ್ದು ಅಡಿಯಾರ್ವಾಳ್ಮಿನೆನ್ರೆನ್ರರುಳ್ ಕೊಡುಕ್ಕುಮ್, ಪಡಿಕ್ಕೇಳಿಲ್ಲಾ ಪ್ಪೆರುಮಾನ್ನೈ ಪಳನಕ್ಕುರುಕೂರ್ ಚ್ಚಡಗೋಪನ್, ಮುಡಿಪ್ಪಾನ್ ಶೊನ್ನವಾಯಿರತ್ತು ತಿರುವೇಂಗಡತ್ತು-ಕ್ಕಿವೈಪತ್ತುಮ್, ಪಿಡಿತ್ತಾರ್ ಪಿಡಿತ್ತಾರ್ ವೀಟ್ರಿರುನ್ದು ಪೆರಿಯವಾನುಳ್ ನಿಲಾವುವರೇ ॥**

(ತಿರುವಾಯ್ಮೊಳಿ: ೬–೧೦–೧೧)

**ಅಡಿಯಾರ್**=ದಾಸ ಭೂತರಾದವರೇ, **ಅಡಿಕ್ಕೀಳ್**=ನಮ್ಮ ಪಾದಗಳ ಕೆಳಗೆ, **ಅಮರ್ನ್ದು**=ಸೇರಿಕೊಂಡು, **ಪುಕುನ್ದು** = (ನಿರ್ಭಯ-ವಾಗಿ) ಪ್ರವೇಶಿಸಿ, **ವಾಳ್ಮಿನ್**=ಬಾಳಿರಿ, **ಎನ್ರು ಎನ್ರು**=ಎಂದು ಹೇಳಿ ಹೇಳಿ, **ಅರುಳ್‌ಕೊಡುಕ್ಕುಮ್**=ತನ್ನ ಅನುಗ್ರಹವನ್ನು ಮಾಡುವ, **ಪಡಿ**=ರೀತಿಗೆ, **ಕೇಳಿಲ್ಲಾ**=ಸಮಾನವಿಲ್ಲದ, **ಪೆರುಮಾನ್ನೈ**=ಪರಮಾತ್ಮನನ್ನು ಸ್ತುತಿಸಲು, **ಪಳನ**=ಸಸ್ಯಕ್ಷೇತ್ರಭರಿತವಾದ **ಕುರುಕೂರ್**=ಕುರುಕಾ-ಪುರಿಯ, **ಶಡಗೋಪನ್** = ಶ್ರೀಶಠಾರಿಮುನಿಯು (ನಮ್ಮಾಳ್ವಾರ್ರವರು) **ಮುಡಿಪ್ಪಾನ್**=ಪೂರ್ತಿ ಮಾಡಬೇಕೆಂದು, **ಶೊನ್ನ**=ರಚಿಸಿದ, **ಆಯಿರತ್ತು**=ಸಹಸ್ರ ಪದ್ಯಮಾಲೆಯೊಳು, **ತಿರುವೇಂಗಡತ್ತುಕ್ಕು**=ಶ್ರೀವೆಂಕಟಾದ್ರಿಗೆ ಸೇರಿದ, **ಇವೈಪತ್ತುಮ್**=ಈ ಹತ್ತು ಪದ್ಯಗಳನ್ನೂ, **ಪಿಡಿತ್ತಾರ್**=ಆಶ್ರ-ಯಿಸಿ ಪಠಿಸುವವರನ್ನು, **ಪಿಡಿತ್ತಾರ್**=ಆಶ್ರಯಿಸುವವರೂ ಕೂಡ, **ಪೆರಿ-ಯವಾನುಳ್**=ಪರಮಪದದಲ್ಲಿ, **ವೀಟ್ರಿರುನ್ದು** = ನಿತ್ಯವಾಸಮಾಡಿ, **ನಿಲಾವುವರೇ**=ಶಾಶ್ವತವಾಗಿ (ಬ್ರಹ್ಮಾನಂದವನ್ನೂ) ಅನುಭವಿಸು-ತ್ತಿರುವರು.

ಈ ಪದ್ಯದಲ್ಲಿ, ಆಳ್ವಾರವರು, ಪರಮಾತ್ಮನನ್ನು ತನ್ನ ಅವತಾರ ಕಾಲಗಳಲ್ಲಿ ಸರ್ವಚೇತನೋದ್ಧಾರ ಮಾಡಬೇಕೆಂಬ ಹೆಬ್ಬಯಕೆಯಿಂದ ರಾಮ, ಕೃಷ್ಣ, ವರಾಹ ಚರಮಶ್ಲೋಕಾದಿಗಳಲ್ಲಿ ತನ್ನನ್ನು ನಿರ್ಭಯವಾಗಿ ಆಶ್ರಯಿಸಿ ಪರಮ ಶ್ರೇಯಸ್ಸನ್ನು ಹೊಂದುವ ಉಪಾಯವನ್ನು ತಾನೇ ಪ್ರಕಾಶವಾಗಿ ತಿಳಿಸಿ ತನ್ನ ದಯಾಮಯತ್ವಗುಣವನ್ನು ಪ್ರಕಾಶಪಡಿಸಿಕೊಂಡಿರುವನೆಂದೂ, ಇವನಲ್ಲಿ ಶರಣುಹೋಗಿದವರು ಮಾತ್ರವಲ್ಲದೆ, ಆ ಶರಣಾಗತರ ಅಭಿಮಾನಕ್ಕೆ ಪಾತ್ರರಾದ ಚೇತನರೂ ಭಗವಂತನ ಕೃಪೆಯಿಂದ ಮೋಕ್ಷಸಾಮ್ರಾಜ್ಯವನ್ನು ಪಡೆದು, ಶ್ರೀವೈಕುಂಠಲೋಕದಲ್ಲಿ ಶಾಶ್ವತವಾದ ಆನಂದವನ್ನು ಅನುಭವಿಸುವರೆಂದೂ ತಿಳಿಸಿದ್ದಾರೆ.

ಈ ಅರ್ಥಗಳಲ್ಲಿ ವರಾಹ ಚರಮಶ್ಲೋಕದಲ್ಲಿನ **'ಮಾಂಸ್ಮರ್ತಾ'** 'ನನ್ನನ್ನು ಸ್ಮರಿಸುವನನ್ನು' –ಎಂದು ಹೇಳುವಲ್ಲಿ, ಅವರ ದಯಾಗುಣ ವಿಶಿಷ್ಟತ್ವವನ್ನೂ **'ನಯಾಮಿ ಪರಮಾಗತಿಂ'**='ಪರಮಪದಕ್ಕೆ ಒಯ್ಯುತ್ತೇನೆ' –ಎಂಬಲ್ಲಿ ಶರಣಾಗತನೂ ಅವನ ಅಭಿಮಾನಕ್ಕೆ ಪಾತ್ರವಾದ ಚೇತನರೂ ಭಗವಂತನಿಂದ ಪರಮಪದಕ್ಕೆ ಕೊಂಡೊಯ್ದು ಶಾಶ್ವತವಾದ ಆನಂದವನ್ನನುಭವಿಸುತ್ತಾರೆಂಬರ್ಥವನ್ನೂ ಗ್ರಹಿಸಬೇಕು. ಈ ರೀತಿಯಾಗಿ ವರಾಹ ಚರಮಶ್ಲೋಕಗಳ ಅರ್ಥವನ್ನು ತಿಳಿಯುವಲ್ಲಿ, ಮೇಲೆ ವರ್ಣಿಸಿರುವ ಶ್ರೀಮದ್ರಾಮಾಯಣದ, ಶ್ರೀಕೃಷ್ಣ ಚರಮಶ್ಲೋಕದ ಮತ್ತು ನಮ್ಮಾಳ್ವಾರ್ರವರ ಶ್ರೀಸೂಕ್ತಿಗಳ ಅರ್ಥವನ್ನೂ ಉಪಕಾರಕಗಳಾಗಿ ಅನುಸಂಧಾನ ಮಾಡಬೇಕೆಂದು ಆಚಾರ್ಯರು ಅಪ್ಪಣೆ ಕೊಟ್ಟಿದ್ದಾರೆ.

**ಇವ್ವೈ ಇರಂಡಿಲ್ ಪೂರ್ವಶ್ಲೋಕಂ "ಮತ್ಕೃತೇ ಸರ್ವಭೂತಾನಾಂ ಲಘೂಪಾಯಂ ವದ ಪ್ರಭೋ" –ಎನ್ರು ಕೇಟ್ಟ ಉಪಾಯ ವಿಶೇಷತ್ತೈ ಕಾಲಾಧಿಕಾರ ಪ್ರಕಾರ ವಿಷಯ ವಿಶೇಷಂಗಳೋಡೆ ಕೂಡ ಕಾಟ್ಟುಕಿರದು.**

**ಇವ್ವೈ ಇರಂಡಿಲ್**=ಈ ವರಾಹ ಚರಮಶ್ಲೋಕಗಳೆರಡರಲ್ಲಿ, **ಪೂರ್ವಶ್ಲೋಕಂ**=ಮೊದಲನೆಯ ಶ್ಲೋಕವು, **"ಮತ್ಕೃತೇ** = ನನಗೋಸ್ಕರ,

**ಸರ್ವಭೂತಾನಾಂ**=ಎಲ್ಲ ಚೇತನರಿಗೂ, **ಲಘೂಪಾಯಂ**=ಅನುಷ್ಠಿಸಲು ಬಹಳ ಸುಲಭವಾದ ಉಪಾಯವೊಂದನ್ನು, **ಪ್ರಭೋ**=ಎಲೈ ವರಾಹ ಸ್ವಾಮಿಯೇ, **ವದ**=ಹೇಳಿರಿ" –**ಎನ್ರು**=ಎಂದು, **ಕೇಟ್ಟ**=ಭೂಮಿ-ತಾಯಿಯು ಕೇಳಿದ, **ಉಪಾಯವಿಶೇಷತ್ತೈ** = ವಿಶೇಷವಾದ ಉಪಾಯ-ವನ್ನು, **ಕಾಲ**=ಅದನ್ನು ಅನುಷ್ಠಿಸುವಕಾಲ, **ಅಧಿಕಾರ**=ಆ ಉಪಾಯ-ವನ್ನು ಅನುಷ್ಠಿಸುವ ಚೇತನನಿಗಿರಬೇಕಾದ ಅರ್ಹತೆ, **ಪ್ರಕಾರ**=ಅನುಷ್ಠಿ-ಸುವ ಕ್ರಮ, **ವಿಷಯ**=ಉಪಾಯದ ವಿಷಯ, ಇವುಗಳನ್ನು **ವಿಶೇಷಂಗ-ಳೋಡೆಕೂಡ**=ವಿಶೇಷಗಳ ಸಮೇತ, **ಕಾಟ್ಟುಕಿರತು**=ತೋರಿಸುತ್ತದೆ.

**ಉತ್ತರಶ್ಲೋಕಂ ಉಪಾಸನತ್ತುಕ್ಕುಪ್ಪೋಲೆ ಅನ್ತಿಮಪ್ರತ್ಯಯ-ಮುಮ್ ಉಪಾಯಕೋಟಿಯಿಲೇ ಶೊರುಕಿ ಸ್ವಯತ್ನಸಾಧ್ಯಮಾಕ ವೇಂಡಾತಪಡಿ ಸರ್ವಭರಸ್ವೀಕಾರಂ ಪಣ್ಣಿನ ಶರಣ್ಯನುಡೈಯ ವ್ಯಾಪಾರ-ವಿಶೇಷತ್ತಾಲೇ ದೇಶಕಾಲಾದಿ ಪರಿಚ್ಛೇದರಹಿತ ಕೈಂಕರ್ಯಪರ್ಯಂತ ಪರಮ ಪುರುಷಾರ್ಥಲಾಭತ್ತೈಕಾಟ್ಟುಕ್ಕಿರತು.**

**ಉತ್ತರಶ್ಲೋಕಂ**=ವರಾಹ ಚರಮಶ್ಲೋಕದಲ್ಲಿನ "ತತಸ್ತಂಮ್ರಿಯ-ಮಾಣಂತು" –ಎಂದು ಪ್ರಾರಂಭವಾಗುವ ಎರಡನೆಯ ಶ್ಲೋಕವು, **ಉಪಾಸ-ನತ್ತುಕ್ಕುಪ್ಪೋಲೇ**=ಭಕ್ತಿಯೋಗನಿಷ್ಠನಿಗೆ ಹೇಳಿದಂತೆ, **ಅನ್ತಿಮಪ್ರತ್ಯಯ-ಮುಮ್**=ದೇಹಾವಸಾನಕಾಲದಲ್ಲಿ ಭಗವಂತನ ಸ್ಮರಣೆಯು, **ಉಪಾಯ-ಕೋಟಿಯಿಲೇ ಶೊರುಕಿ** = ಉಪಾಯಾನುಷ್ಠಾನದಲ್ಲಿಯೇ ಸೇರಿಸಿ, **ಸ್ವಯತ್ನಸಾಧ್ಯಮಾಕ**=ಚೇತನನು ತನ್ನ ಪ್ರಯತ್ನದಿಂದಲೇ ಸಾಧಿಸಲ್ಪಡು-ವಂತೆ **ವೇಂಡಾತಪಡಿ**=ಬೇಡದಂತೆ, **ಸರ್ವಭರಸ್ವೀಕಾರಂ ಪಣ್ಣಿನ**=ಸರ್ವ ವಿಧವಾದ ರಕ್ಷಣೆಯ ಹೊಣೆಯನ್ನೂ ಒಪ್ಪಿಕೊಂಡ, **ಶರಣ್ಯನುಡೈಯ**= (ಶರಣುಹೋದ) ಎಲ್ಲ ಚೇತನರ ರಕ್ಷಕನಾದ ಪರಮಾತ್ಮನ, **ವ್ಯಾಪಾರ-ವಿಶೇಷತ್ತಾಲೆ**=ವಿಶೇಷವಾದ ವ್ಯಾಪಾರದಿಂದ, **ದೇಶಕಾಲಾದಿಪರಿಚ್ಛೇದ-ರಹಿತ**=ದೇಶ ಅಥವಾ ಕಾಲವೇ ಮೊದಲಾದುದರಿಂದ ನಿಯಮಿತವಲ್ಲದ, **ಕೈಂಕರ್ಯ ಪರ್ಯಂತ**=ನಿತ್ಯ ಕೈಂಕರ್ಯವನ್ನು ಪಡೆಯುವವರೆವಿಗೂ,

**ಪರಮಪುರುಷಾರ್ಥಲಾಭತ್ತ್ಯೈ** = ಉಂಟಾಗುವ ಶ್ರೇಷ್ಠವಾದ ಪರಮ ಪುರುಷಾರ್ಥ ಲಾಭವನ್ನು ತೋರಿಸುತ್ತದೆ.

ಭಕ್ತಿಯೋಗನಿಷ್ಠನು ತೈಲಧಾರೆಯಂತೆ ಪರಮಾತ್ಮನನ್ನು ನಿರಂತರ ಚಿಂತಿಸುತ್ತಲೇ ಇರಬೇಕಾದುದರಿಂದ, ಅವನಿಗೆ ದೇಹಾವಸಾನಕಾಲದಲ್ಲಿಯೂ ಪರಮಾತ್ಮನ ಸ್ಮರಣೆ ಅತ್ಯವಶ್ಯವಾದುದರಿಂದ ಅದೂ ಉಪಾಯಾನುಷ್ಠಾನ-ದಲ್ಲಿ ಸೇರಿದುದು. ಆದುದರಿಂದ ಅನ್ತಿಮಪ್ರತ್ಯಯವನ್ನು ಭಕ್ತಿಯೋಗ-ನಿಷ್ಠನು ಸ್ವಪ್ರಯತ್ನದಿಂದ ಪಡೆದುಕೊಳ್ಳಬೇಕು. ಶರಣಾಗತನಾದರೋ ತನ್ನ ಸರ್ವವಿಧವಾದ ರಕ್ಷಾಭರವನ್ನು ಒಮ್ಮೆಲೆ ಪರಮಾತ್ಮನಲ್ಲಿಯೇ ಅರ್ಪಿಸಿರು-ವುದರಿಂದ, ಮುಂದೆ ರಕ್ಷಣೆಗಾಗಿ ತಾನು ಮಾಡಬೇಕಾದ ಕೃತ್ಯಗಳಾವುದೂ ಇಲ್ಲದಿರುವುದರಿಂದ ಅನ್ತಿಮಪ್ರತ್ಯಯವನ್ನು ತನ್ನ ಪ್ರಯತ್ನದಿಂದ ಪಡೆಯ-ಬೇಕಾದುದಿಲ್ಲ. ಶರಣಾಗತನ ರಕ್ಷಾಭರವೆಲ್ಲವನ್ನೂ ಒಪ್ಪಿಕೊಂಡ ಪರಮಾ-ತ್ಮನು, ಚೇತನನು ತನ್ನಲ್ಲಿ ಶರಣುಹೋದ ಕ್ಷಣದಿಂದ ಹಿಡಿದು ದೇಶಕಾಲ-ಪರಿಚ್ಛೇದರಹಿತವಾದ ಶ್ರೀವೈಕುಂಠದಲ್ಲಿ ನಿತ್ಯಕೈಂಕರ್ಯವನ್ನು ಮಾಡುವ ಸ್ಥಿತಿಯನ್ನು ಪಡೆಯುವವರೆಗೂ ಇರುವ ಅವನ ಸರ್ವವಿಧವಾದ ರಕ್ಷಣೆ-ಯನ್ನು ತಾನೇ ಹೊತ್ತಿರುವುದರಿಂದ ಶರಣಾಗತನಿಗೆ, ಅವನ ದೇಹಾವಸಾನ-ಕಾಲದಲ್ಲಿ ಅವನು ತನ್ನನ್ನು ಸ್ಮರಿಸದಿದ್ದರೂ, ತಾನೇ ಅವನನ್ನು ಸ್ಮರಣೆ-ಮಾಡಿಕೊಂಡು ಅವನಿಗೆ ಪರಮಪುರುಷಾರ್ಥ ಲಾಭವನ್ನುಂಟುಮಾಡುತ್ತಾನೆ -ಎಂದು ವರಾಹ ಚರಮಶ್ಲೋಕದಲ್ಲಿನ ಎರಡನೆಯ ಶ್ಲೋಕದಿಂದ ತಿಳಿದು ಬರುತ್ತದೆ.

**ಇಂಗೇ 'ಸ್ಥಿತೇ ಮನಸಿ' -ಎನ್ಱುವೇಂಡುವೋ? ಸರ್ವಸ್ಮೃತಿ-ಕಳುಕ್ಕುಮ್ ಇಂಗೇ ಮನಸ್ಸುಡೈಯಸ್ಥಿತಿವೇಂಡಿಯನ್ಱೋಯಿರು-ಪ್ಪದು? -ಎನ್ನಿಲ್, "ಚಂಚಲಂಹಿ ಮನಃ ಕೃಷ್ಣ" ಎನ್ಱುಮ್ "ಅಸಂ-ಶಯಂ ಮಹಾಬಾಹೋ ಮನೋದುರ್ನಿಗ್ರಹಂ ಚಲಂ" ಎನ್ಱುಂ ಶೊಲ್ಲುಕಿರಪಡಿಯೇ ವಾನರಂಪೋಲೇ ಕಟ್ಟಿವೈತ್ತಾಲುಂ ಕಾಪೇಯಮ್ ವಿಡಾದ ಮನಸ್ಸು ಒರು ಸುಕೃತವಿಶೇಷಮಡಿಯಾಕ ಉಂಡಾನ**

ಸಕ್ತೋ್ವೇನ್ನೀಷವಶತ್ತಾಲೇ ಸದಾಚಾರ್ಯೋಪದಿಷ್ಟಮಾನ ಪರತತ್ತ್ವ ಪರಮಹಿತ ಪರಮ ಪುರುಷಾರ್ಥಂಗಳಿಲ್ ತೆಳಿವುಮ್ ತುಣಿವುಮ್ ತ್ವರೆಯುಮ್ ಪಿರಕ್ಕುಂ ಪಡಿ ಪ್ರತಿಷ್ಠಮಾನವಳವೋಳಿಯ ಇಂಗು- ಕೊಲ್ಲುಕಿರ ಸ್ಮರಣವಿಶೇಷತ್ತುಕ್ಕು, ಕರ್ಮಾನ್ತರಂಗಳಿಲ್ ಪ್ಪೋಲೇ ಒರುದೇಶಕಾಲ ವಿಶೇಷ ನಿಯಮಮಿಲ್ಲೈ, ಪುಣ್ಯಾಪುಣ್ಯ ದೇಶಕಾಲ ವಿಶೇಷಂಗಳಾಲ್ ವರುವದೊರು ಫಲೋತ್ಕರ್ಷಾಪಕರ್ಷಮುಮಿಲ್ಲೈ ಯೆನ್ಗೈಕ್ಕಾಕ – ಇಂಗು 'ಮನಸ್ಸು ಸ್ಥಿತಮಾಯುಳ್ಳವಿಡತ್ತಿಲ್' -ಎನ್ಗಿರದು.

ಇಂಗೇ = ಈ ವರಾಹ ಚರಮಶ್ಲೋಕದಲ್ಲಿ (ಶರಣಾಗತಿಯನ್ನನುಷ್ಠಿ- ಸಲು ಸಮಯವನ್ನು ತಿಳಿಸುವ ಸನ್ನಿವೇಶದಲ್ಲಿ) 'ಸ್ಥಿತೇಮನಸಿ' = ಮನಸ್ಸು ಸ್ಥಿರವಾಗಿರಲು ಎನ್ರು ವೇಂಡುಮೋ = ಎಂದು ಹೇಳುವುದು ಆವಶ್ಯಕವೋ ? (ಏಕೆಂದರೆ) ಸರ್ವಸ್ಮೃತಿಗಳುಕ್ಕುಮ್ = ಸರ್ವವಿಧವಾದ ಭಕ್ತಿಯೋಗದ ಅಂಗಗಳಾದ ಉಪಾಸನೆಗಳಿಗೂ, ಇಂಗೇ = ಇಲ್ಲಿ, ಮನಸ್ಸಿನುಡೈಯಸ್ಥಿತಿ = ಮನಸ್ಸು ಸ್ಥಿರವಾಗಿರುವಿಕೆಯು (ಏಕಾಗ್ರಚಿತ್ತತೆಯು) ವೇಂಡ್ರಿಯನ್ರೋ ಇರುಪ್ಪದು = ಬೇಕಾಗಿಯೇ ಇರುವುದಲ್ಲವೇ ? ಎನ್ರಿಲ್ = ಎಂದರೆ, (ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಕರ್ಮಯೋಗ, ಜ್ಞಾನಯೋಗ, ಮತ್ತು ಭಕ್ತಿಯೋಗಗಳನ್ನು, ಅರ್ಜುನನಿಗೆ ಉಪದೇಶಿಸಿದ ಕೂಡಲೆ, ಆ ಉಪದೇಶ- ವನ್ನು ಕೇಳಿದ ಅರ್ಜುನನು ಆ ಯೋಗಗಳನ್ನು ತಾನು ಅನುಷ್ಠಿಸುವುದು ಸಾಧ್ಯವಿಲ್ಲವೆಂದು ಹೇಳುತ್ತಾನೆ. ಏಕೆಂದರೆ ಈ ಮೇಲೆ ಹೇಳಿದ ಯೋಗಗಳು ನಿರಂತರವಾದ ವಿಚ್ಛಿತ್ತಿಯಿಲ್ಲದ ಏಕಾಗ್ರಚಿತ್ತತೆಯಿಂದ ಭಗವಂತನ ಸ್ಮರಣೆ- ಯಿಂದ ಮಾಡಲ್ಪಡಬೇಕಾದುವು. ಆದರೆ ಚಂಚಲಮನಸ್ಕನಾದ ತನಗೆ ಅದು ಸಾಧ್ಯವಿಲ್ಲವೆಂದು –ಹೇಳುವ ಸನ್ನಿವೇಶದಲ್ಲಿ) "ಕೃಷ್ಣ = ಎಲೈ ಕೃಷ್ಣನೇ ! ಮನಃ = ಮನಸ್ಸು, ಚಂಚಲಂಹಿ = ಚಂಚಲವಾದುದು" –ಎನ್ರುಮ್ = ಎಂದೂ, (ಅದಕ್ಕೆ ಪ್ರತ್ಯುತ್ತರವಾಗಿ ಕೃಷ್ಣನು ಅರ್ಜುನನಿಗೆ ಹೇಳುವಲ್ಲಿ) "ಮಹಾಬಾಹೋ = ಅತಿಯಾದ ತೋಳ್ಬಲದಿಂದ ಕೂಡಿದ ದಪ್ಪನಾದ ತೋಳುಗಳುಳ್ಳವನೇ, ಮನಃ = ಮನಸ್ಸು, ದುರ್ನಿಗ್ರಹಂ' = ಒಂದುಕಡೆ

ತಡೆದಿಡಲು ಬಹಳ ಕಷ್ಟಕರವಾದುದು, **ಚಲಂ**=ಚಂಚಲ ಸ್ವಭಾವ-
ವುಳ್ಳದುದು, (ಎಂಬ ವಿಷಯದಲ್ಲಿ) **ಅಸಂಶಯಂ**=ಸಂಶಯವೇ ಇರುವುದಿಲ್ಲ"
**-ಎನ್ರು**=ಎಂದು, **ಶೊಲ್ಲುಕಿರಪಡಿಯೇ**=ಹೇಳಿರುವಂತೆಯೇ, **ವಾನರಂ-**
**ಪೋಲೆ**=ಕಪಿಯಂತೆ, **ಕಟ್ಟಿವೈತ್ತಾಲುಂ**=(ಬಹಳ ಕಷ್ಟಪಟ್ಟು) ಕಟ್ಟಿ-
ಟ್ಟರೂ, **ಕಾಪೇಯಮ್**=ತನ್ನ ಕಪಿಸ್ವಭಾವವನ್ನು (ಚಾಂಚಲ್ಯವನ್ನು)
**ವಿಡಾದ**=ಬಿಡದಿರುವ, **ಮನಸ್ಸು**=ಮನಸ್ಸಾದರೋ, **ಒರು** = ಒಂದು,
**ಸುಕೃತವಿಶೇಷಮಡಿಯಾಕ**=ವಿಶೇಷವಾದ ಒಂದು ಒಳ್ಳೆಯ ಕೆಲಸ ಮಾಡು-
ವಿಕೆಯಿಂದಲೇ, **ಉಂಡಾನ**=ಉಂಟಾದ, **ಸತ್ತ್ವೋನ್ಮೇಷವಶತ್ತಾಲೆ**=
ಸತ್ವಗುಣವು ತಲೆಯೆತ್ತಿರುವ ಕಾರಣದಿಂದ, **ಸದಾಚಾರ್ಯೋಪದಿಷ್ಟಮಾನ**
=ಸದಾಚಾರ್ಯರಿಂದ ಉಪದೇಶಿಸಲ್ಪಟ್ಟ, **ಪರತತ್ವ ಪರಮಹಿತ ಪುರು-**
**ಷಾರ್ಥಂಗಳಿಲ್** = ಚೇತನಾ ಚೇತನರಿಗೆಲ್ಲ ಸ್ವಾಮಿಯಾದ ಶ್ರಿಯಃ-
ಪತ್ತಿಯೇ ಪರತತ್ತ್ವವೆಂದೂ, ಅವನ ಅಡಿದಾವರೆಗಳನ್ನಾಶ್ರಯಿಸಿ ಶರಣು
ಹೋಗುವುದೇ ಚೇತನನಿಗೆ ಪರಮ ಹಿತವಾದುದೆಂದೂ, ದಾಸನಾದ ಚೇತನನು
ತನ್ನ ಸ್ವಾಮಿಯಾದ ಪರಮಾತ್ಮನಿಗೆ ಸರ್ವದೇಶ, ಸರ್ವಕಾಲ, ಸರ್ವಾವಸ್ಥೆ-
ಗಳಲ್ಲಿಯೂ ನಿರಂತರವಾಗಿ ಕೈಂಕರ್ಯವನ್ನೆಸಗುವುದೇ ಪರಮಪುರುಷಾರ್ಥ-
ವೆಂದೂ ತಿಳಿದು, ಅವುಗಳಲ್ಲಿ, **ತೆಳಿವುಮ್**=ತಿಳಿಯಾದ ಜ್ಞಾನವೂ. **ತುಣಿ-**
**ವುಮ್**=ಅವುಗಳನ್ನು ತಾನು ಪಡೆಯಲು ಪ್ರಯತ್ನಿಸುವಿಕೆಯು, **ತ್ವರಿ-**
**ಯುಮ್**=ಆದಷ್ಟು ಜಾಗ್ರತೆ ಅವುಗಳನ್ನು ಪಡೆಯುವ ಉಪಾಯಾನು-
ಷ್ಠಾನ ಮಾಡಬೇಕೆಂಬ ಆಸೆಯೂ, **ಪಿರಕ್ಕುಂಪಡಿ** = ಉಂಟಾಗುವಂತೆ,
**ಪ್ರತಿಷ್ಠಮಾನವಳವೋಳಿಯು** = ಸ್ಥಿರವಾಗಿ ಮನಸ್ಸಿರುವಿಕೆಯೊಂದನ್ನು
ಬಿಟ್ಟು, **ಇಂಗು**=ಈ (ಶರಣಾಗತಿ ಅನುಷ್ಠಾನವನ್ನು ಹೇಳುವ) ವರಾಹ
ಚರಮಶ್ಲೋಕ ಪ್ರಕರಣದಲ್ಲಿ **ಶೊಲ್ಲುಕಿರ**=ಹೇಳುವ, **ಸ್ಮರಣವಿಶೇಷ-**
**ತ್ತುಕ್ಕು**=ಭಗವಂತನನ್ನು ಸ್ಮರಣೆಮಾಡಬೇಕೆಂದು ವಿಧಿಸುವ ಉಪಾಯ
ವಿಶೇಷಕ್ಕೆ, **ಕರ್ಮಾಂತರಂಗಳಿಲ್ ಪೋಲೇ**=ಇತರೇತರ ಕರ್ಮಗಳಂತೆ,
**ಒರುದೇಶಕಾಲನಿಯಮಮಿಲ್ಲೈ** = ಈ ದೇಶದಲ್ಲಿ ಮಾತ್ರವೇ ಅಥವಾ
ಈ ಕಾಲದಲ್ಲಿ ಮಾತ್ರವೇ ಅನುಷ್ಠಿಸಬೇಕೆಂಬ ನಿಯಮವಿಲ್ಲ. **ಪುಣ್ಯಾಪುಣ್ಯ-**

**ದೇಶಕಾಲವಿಶೇಷಂಗಳಾಲ್**=ಪುಣ್ಯವಾದ ತೀರ್ಥಕ್ಷೇತ್ರಾದಿಗಳಲ್ಲಿ ಅಥವಾ ಪುಣ್ಯವೆಂದು ಪರಿಗಣಿಸದ ಸಾಮಾನ್ಯ ಸ್ಥಳಗಳಲ್ಲಿ, ಅಥವಾ ಪರ್ವಾದಿ ಪುಣ್ಯ-ಕಾಲಗಳಲ್ಲಿ ಅಥವಾ ಸಾಮಾನ್ಯವಾದ ಕಾಲಗಳಲ್ಲಿ ಕರ್ಮಾದಿಗಳನ್ನು ಅನುಷ್ಠಿ-ಸುವಲ್ಲಿ ದೇಶಕಾಲ ವಿಶೇಷಗಳಿಂದ, **ವರುವದು**=ಬರುವ, **ಒರುಫಲೋಪಕ-ರ್ಷಾಪಕರ್ಷಮುಮಿಲ್ಲೈ**=ಪುಣ್ಯದೇಶ ಪುಣ್ಯಕಾಲಗಳಲ್ಲಿ ಅನುಷ್ಠಿಸು-ವುದರಿಂದ ಒಂದು ವಿಶೇಷವಾದ ಅಧಿಕವಾದ ಫಲ ಬರುವಿಕೆಯಾಗಲೀ ಅಥವಾ ಪುಣ್ಯೇತರ ದೇಶಕಾಲಗಳಲ್ಲಿ ಅನುಷ್ಠಿಸುವುದರಿಂದ ಕಡಿಮೆ ಫಲ ಬರುವಿಕೆ-ಯಾಗಲೀ ಇರುವುದಿಲ್ಲ. **ಯೆನ್ಗೈಕ್ಕಾಗ**=ಎಂದು ತಿಳಿಸುವುದಕ್ಕೋಸ್ಕರ, **ಇಂಗು**=ಈ ಚರಮಶ್ಲೋಕದಲ್ಲಿ, **'ಮನಸ್ಸುಸ್ಥಿತನಾಯುಳ್ಳವಿಡತ್ತಿಲ್'**=ಮನಸ್ಸು ಸ್ಥಿರವಾಗಿರುವ ಸಮಯದಲ್ಲಿ, **ಎನ್ಗಿರದು**=ಎಂದು ಹೇಳಿರು ವುದು.

ಭಕ್ತಿಯೋಗನಿಷ್ಠನು ನಿರಂತರವಾಗಿ ತೈಲಧಾರೆಯಂತೆ ಅವಿಚ್ಛಿನ್ನವಾಗಿ ಪರಮಾತ್ಮನ ಚಿಂತನೆಯನ್ನು ಮಾಡುತ್ತಿರಬೇಕು. ಅವನಿಗೆ ಮನಸ್ಸು ಸ್ಥಿರ-ವಾಗಿರುವಿಕೆ ಅಥವಾ ಏಕಾಗ್ರಚಿತ್ತತೆ -ಎಂಬುದು ನಿರಂತರವಾಗಿರಬೇಕು. ಶರಣಾಗತನಿಗಾದರೋ, ಅವನು ಶರಣಾಗತ್ಯನುಷ್ಠಾನಮಾಡುವ ಒಂದು ಕ್ಷಣ-ಕಾಲದಲ್ಲಿ ಮಾತ್ರ ಏಕಾಗ್ರಚಿತ್ತತೆ ಇದ್ದರೆ ಸಾಕು ಎನ್ನುವುದನ್ನು ತಿಳಿಸಲು, ಈ ಪ್ರಕರಣದಲ್ಲಿ 'ಸ್ಥಿತೇ ಮನಸಿ' -ಎಂದು ಹೇಳಿದ್ದಾರೆ.

ಚೇತನರು ತಮ್ಮ ಅನಾದಿಯಾದ ಕರ್ಮವಾಸನೆಯಿಂದ ನಾನಾ-ಯೋನಿಗಳಲ್ಲಿ ಜನ್ಮತಾಳಿ, ಅನೇಕವಿಧವಾದ ಕೆಟ್ಟ ಕೆಲಸಗಳಲ್ಲಿ ನಿರತರಾಗಿ-ದ್ದರೂ, ದಯಾನಿಧಿಯಾದ ಪರಮಾತ್ಮನು, ಆ ಚೇತನರನ್ನೂ ಕರ್ಮಬಂಧ-ದಿಂದ ಬಿಡಿಸಿ ರಕ್ಷಿಸಬೇಕೆಂದು ಸಂಕಲ್ಪಿಸುತ್ತಾನೆ. ಆಗ ಆ ಚೇತನರು ಬುದ್ಧಿ ಪೂರ್ವಕವಾಗಿಯಾಗಲೀ ಅಥವಾ ಅಬುದ್ಧಿಪೂರ್ವಕವಾಗಿಯಾಗಲೀ ಮಾಡುವ ಒಳ್ಳೆಯ ಕೆಲಸವೊಂದನ್ನು ಎದಿರುನೋಡುತ್ತಿರುತ್ತಾನೆ. ಕ್ಷೇತ್ರವಾಸ, ಪರ್ವಕಾಲಗಳಲ್ಲಿನ ಪುಣ್ಯತೀರ್ಥಗಳಲ್ಲಿನ ಸ್ನಾನ ಇತ್ಯಾದಿ ಕ್ರಿಯೆಗಳು -ಸುಕೃತ ವಿಶೇಷಗಳಲ್ಲಿ ಸೇರುತ್ತವೆ. ಉದಾಹರಣೆಗೆ, ಒಬ್ಬ ಕೇವಲ ಹೊಟ್ಟೆಹೊರುವ ಉದ್ದೇಶದಿಂದ, ಮಾರಾಟವೇ ಮೊದಲಾದ ಕೆಲಸ-

ಗಳಲ್ಲಿ ನಿರತನಾಗಿ ತಿರುಮಲೆಯೇ ಮೊದಲಾದ ಕ್ಷೇತ್ರಗಳಲ್ಲಿ ವಾಸಮಾಡು-ವಿಕೆಯೂ, ಬೆಸ್ತನೊಬ್ಬನು ಗ್ರಹಣಾದಿ ಪರ್ವಕಾಲಗಳಲ್ಲಿ ಕೇವಲ ಪ್ರಾಣಿಹಿಂಸೆ-ಯಾದ ಮೀನು ಹಿಡಿಯುವ ಕೆಲಸದಲ್ಲೇ ನಿರತನಾಗಿ ಅಕಸ್ಮಾತ್ತಾಗಿ ತನ್ನ ಕೈಯಲ್ಲಿದ್ದ ಬಲೆಯು ಜಾರಿ ಗಂಗಾನದಿಯಲ್ಲಿ ಬಿದ್ದಾಗ, ಆ ಬಲೆಯನ್ನು ತೆಗೆದುಕೊಳ್ಳುವ ಉದ್ದೇಶದಿಂದ ನದಿಯಲ್ಲಿ ಮುಳುಗಿದಾಗ, ಅದು ಪರ್ವ-ಕಾಲ ಮಹಾನದೀ ಸ್ನಾನ ಪುಣ್ಯಪ್ರದವೆಂದು ಅವನು ಮುಳುಗದಿದ್ದರೂ, ದಯಾನಿಧಿಯಾದ ಪರಮಾತ್ಮನು, ಅವರಿಬ್ಬರೂ ಮಾಡಿದ ಕ್ಷೇತ್ರವಾಸ ಮತ್ತು ಗಂಗಾನದೀ ಸ್ನಾನವು ಅಬುದ್ಧಿಕೃತವಾದರೂ ಸುಕೃತ ವಿಶೇಷವೆಂದೇ ಪರಿಗಣಿ-ಸುತ್ತಾನೆ. ಈರೀತಿಯಾಗಿ ಯಾವ ಚೇತನರೇ ಆಗಲೀ ಬುದ್ಧಿಕೃತವಾಗಲೀ ಅಬುದ್ಧಿಕೃತವಾಗಲೀ ಮಾಡಿದ ಯಾದೃಚ್ಛಿಕವಾದ ಸುಕೃತ ವಿಶೇಷಗಳಿಂದ, ಅವರಿಗೆ ಮೊದಲು ಪರಮಾತ್ಮನ ಕೃಪೆಯುಂಟಾಗುತ್ತದೆ. ಇದರಿಂದ ಆ ಚೇತನರಿಗೆ ಮುಂದಿನ ಜನ್ಮ ಪಡೆಯುವಾಗ ಮಧುಸೂದನನ ಕಟಾಕ್ಷವು ಏರ್ಪಡುತ್ತದೆ. "**ಜಾಯಮಾನಂ ಹಿ ಪುರುಷಂ ಯಂ ಪಶ್ಯೇನ್ಮಧುಸೂದನಃ ಸಾತ್ವಿಕಃ ಸ ತು ವಿಜ್ಞೇಯಃ ಸ ವೈಮೋಕ್ಷಾರ್ಥ ಚಿಂತಕಃ ॥**"–ಜನ್ಮ ಪಡೆ-ಯುವ ಸಮಯದಲ್ಲಿ ಯಾವ ಚೇತನನನ್ನು ಮಧುಸೂದನನು ಕಟಾಕ್ಷಿಸು-ತ್ತಾನೆಯೋ, ಅವನು ಸತ್ತ್ವಗುಣ ಪ್ರಚುರವಾಗಿ ಸಾತ್ತ್ವಿಕನಾಗಿರುತ್ತಾನೆ, ಕರ್ಮದಿಂದ ಬಿಡುಗಡೆ ಹೊಂದಿ ಪರಮಪುರುಷನನ್ನು ಸೇರುವ ಪುರುಷಾ-ರ್ಥದ ಬಗ್ಗೆ ಚಿಂತಿಸುವವನಾಗುತ್ತಾನೆ. ಇದರಿಂದ ವಿಷ್ಣುವಿನ ವಿಷಯದಲ್ಲಿ ದ್ವೇಷ ವಿಲ್ಲದಿರುವಿಕೆಯೂ, ಪರಮಾತ್ಮನ ವಿಷಯದಲ್ಲಿ ಆಭಿಮುಖ್ಯ (ಭಕ್ತಿಯೂ), ಸಾತ್ತ್ವಿಕರೊಂದಿಗೆ ಸಂಭಾಷಣೆಯೂ, ಉಂಟಾಗುತ್ತದೆ. ಈ ಸಂಭಾಷಣೆ-ಯಿಂದ ಸ್ಥೂಲವಾಗಿ ತತ್ತ್ವ, ಹಿತ, ಪುರುಷಾರ್ಥಗಳ ಪರಿಚಯವಾಗಿ, ಅವು-ಗಳನ್ನು ಸ್ಪಷ್ಟವಾಗಿ ತಿಳಿಯಬೇಕೆಂದು ಸದಾಚಾರ್ಯರನ್ನು ಆಶ್ರಯಿ-ಸುತ್ತಾನೆ.

**ಈಶ್ವರಸ್ಯ ಚ ಸೌಹಾರ್ದಂ ಯದೃಚ್ಛಾಸುಕೃತಂ ತಥಾ ।**
**ವಿಷ್ಣೋಃ ಕಟಾಕ್ಷ ಮದ್ವೇಷಂ ಅಭಿಮುಖ್ಯಂ ಚ ಸಾತ್ತ್ವಿಕೈಃ ।**
**ಸಂಭಾಷಣಂ ಷಡೇತಾನಿ ಆಚಾರ್ಯ ಪ್ರಾಪ್ತಿಹೇತವಃ ॥**

–ರಹಸ್ಯತ್ರಯಸಾರ ಉಪೋದ್ಘಾತಾಧಿಕಾರ.

ಸದಾಚಾರ್ಯರಿಂದ ತತ್ತ್ವಹಿತ ಪುರುಷಾರ್ಥಗಳನ್ನು ಸ್ಪಷ್ಟವಾಗಿ ತಿಳಿದು, ತನಗೆ ಪರಮಹಿತವಾದ 'ಶರಣಾಗತಿ' –ಎಂಬ ಉಪಾಯಾನುಷ್ಠಾನ ಮಾಡು–ತ್ತಾನೆ. ಆ ಉಪಾಯಾನುಷ್ಠಾನ ಮಾಡುವ ಕ್ಷಣದಲ್ಲಿ ಮಾತ್ರವೇ ಶರಣಾ-ಗತನಿಗೆ 'ಮನಸ್ಸು ಸ್ಥಿರವಾಗಿ ಪರಮಾತ್ಮನ ಚಿಂತನೆಯಲ್ಲಿರಬೇಕು' ಎಂದು–ತಿಳಿಸುವುದಕ್ಕಾಗಿ ವರಾಹಸ್ವಾಮಿಯು ಈ ಚರಮಶ್ಲೋಕದಲ್ಲಿ 'ಸ್ಥಿತೇ–ಮನಸಿ' –ಎಂದು ಹೇಳಿದ್ದಾನೆ.

**ಆನಾಲ್ ಶರೀರಸ್ವಾಸ್ಥ್ಯವಿಲ್ಲಾದ ಪೋದು ಮನಸ್ಸಿನುಡೈಯ ಸ್ಥಿತಿ ಕೂಡುಮೋ ? ಅಪ್ಪೋದು ಇವನ್ ಪ್ರಮಾದನಿದ್ರಾದಿಗಳಾಲೇ ಅಪೇಕ್ಷಿತಸ್ಮರಣತ್ತೈ ಪಣ್ಣಮಾಟ್ಟಾದೊಳಿಯಾನೋ ? ಆಗೈಯಾಲ್ 'ಸುಸ್ವಸ್ಥೇ ಶರೀರೇ' ಎನ್ರುವೇಂಡುಮೊ ? –ಎನ್ರಿಲ್ ಶಿಲ ಕರ್ಮಂ–ಗಳುಕ್ಕು ಶರೀರಾವಸ್ಥಾರೂಪಮಾನ ವಯೋ ವಿಶೇಷಮುಮ್, ಶುದ್ಧ್ಯಾದಿಗಳುಮ್, ಪ್ರಾಙ್ಮುಖಾಸೀನತ್ವಾದಿಗಳುಮ್ ಅಪೇಕ್ಷಿತಂಗಳಾ-ಯಿರುಕ್ಕುಮ್. ಇದುಕ್ಕು ಅಪ್ಪಡಿಯನ್ರು. ಶಾಸ್ತ್ರಾರ್ಥಪ್ರತಿಸಂಧಾನ–ತ್ತುಕ್ಕುಅನುಗುಣಮಾಗ ಶರೀರತ್ತಿನುಡೈಯ ಸುಸ್ವಸ್ಥದಶೆಯೈ ವೇಂಡು–ವದು. ಮಟ್ರುಂ ಯೋಗೋಪಯುಕ್ತ ಮನೋನಿಯಮನತ್ತುಕ್ಕು ಚೊನ್ನ ಅಭ್ಯಾಸಾದಿಗಳುಮ್ ವೇಂಡಾ ವೆನ್ಗೈಕ್ಕಾಗ ಶರೀರಂ ಸುಸ್ವಸ್ಥ–ಮಾನವಳವಿಲೇ ಎನ್ಗಿರದು.**

**ಆನಾಲ್**='ಮನಸ್ಸು ಸ್ಥಿರವಾಗಿರಲು' –ಎಂದು ಮಾತ್ರ ಹೇಳಿದರೆ, **ಶರೀರಸ್ವಾಸ್ಥ್ಯಮಿಲ್ಲಾದಪೋದು**=ಶರೀರವು ಆರೋಗ್ಯದಿಂದ ತಾನಿರ–ಬೇಕಾದ ದೆಶೆಯಲ್ಲಿಲ್ಲದಿರಲು, **ಮನಸ್ಸಿನುಡೈಯಸ್ಥಿತಿ**=ಮನಸ್ಸು ಸ್ಥಿರ–ವಾಗಿರುವಿಕೆಯು, **ಕೂಡುಮೋ**=ಸಂಭವಿಸುತ್ತದೆಯೋ ? **ಅಪ್ಪೋದು**=ಶರೀರ ಸ್ವಾಸ್ಥ್ಯವಿಲ್ಲದ ಸಮಯದಲ್ಲಿ, **ಇವನ್**=ಈ ಚೇತನನು, **ಪ್ರಮಾದ–ನಿದ್ರಾದಿಗಳಾಲೇ**=ಎಚ್ಚರಿಕೆ ತಪ್ಪಿರುವಿಕೆ, ನಿದ್ರೆಯೇ ಮೊದಲಾದುವು-ಗಳಿಂದ, **ಅಪೇಕ್ಷಿತಸ್ಮರಣತ್ತೈ**=ಈ ಚರಮಶ್ಲೋಕದಲ್ಲಿ ಉಪದಿಷ್ಟವಾದ, ಭಗವಂತನಿಂದ ನಿರೀಕ್ಷಿಸಲ್ಪಡುವ, ಶರಣಾಗತಿಗೆ ಆವಶ್ಯಕವಾದ ಭಗವಂತನ–

ಸ್ಮರಣೆಯನ್ನು, **ಪಣ್ಣವಾಟ್ಟಾದೊಳಿಯಾನೋ**=ಮಾಡದೇ ಹಾಗೆಯೇ ಇರುವವನಲ್ಲವೋ? **ಆಗೈಯಾಲ್**=ಆದುದರಿಂದಲೇ,'**ಸುಸ್ವಸ್ಥೇ ಶರೀರೇ**'= "ಶರೀರವು ಒಳ್ಳೆಯ ಸ್ವಾಸ್ಥ್ಯದಿಂದಿರಲು -**ಎನ್ರುವೇಡುಂವೋ**=ಎಂದು ಹೇಳಬೇಕೋ? -**ಎನ್ರಿಲ್**=ಎಂದು ಪ್ರಶ್ನಿಸಿದರೆ, **ಶಿಲಕರ್ಮಂಗಳುಕ್ಕು**= ಕೆಲವು ಕರ್ಮಗಳಿಗೆ, **ಶರೀರಾವಸ್ಥಾರೂಪಮಾನ**=ಶರೀರದ ಒಂದು ಅವಸ್ಥೆಯ ರೂಪದಲ್ಲಿರುವ, **ವಯೋವಿಶೇಷಮುಮ್**=ವಿಶೇಷವಾದ ವಯಸ್ಸು **ಶುದ್ಧ್ಯಾದಿಗಳುಮ್**=ದೇಹ ಶುದ್ಧಿಯೇ ಮೊದಲಾದುವುಗಳೂ, **ಪ್ರಾಙ್ಮುಖಾಸೀನತ್ವಾದಿಗಳುಮ್**=ಪೂರ್ವಾಭಿಮುಖವಾಗಿ ಕುಳಿತುಕೊಳ್ಳುವುದೇ ಮೊದಲಾದುವುಗಳೂ, **ಅಪೇಕ್ಷಿತಂಗಳಾಯಿರುಕ್ಕುಮ್** = ಅವಶ್ಯವಾಗಿಬೇಕಾಗಿರುತ್ತವೆ. **ಇದುಕ್ಕು**=ಈ ವರಾಹ ಚರಮಶ್ಲೋಕದಲ್ಲಿ ಹೇಳಿರುವ 'ಶರಣಾಗತಿ'ರೂಪವಾದ ಭಗವತ್ಸ್ಮರಣಕ್ಕೆ, **ಅಪ್ಪಡಿಯನ್ರು**= ಆ ಮೇಲೆ ಹೇಳಿದಂತೆ ಕರ್ಮಾಂತರಗಳಿಗೆ ಹೇಳಿದ ನಿಯಮಗಳ ಆವಶ್ಯಕತೆಯಿಲ್ಲ, **ಶಾಸ್ತ್ರಾರ್ಥಪ್ರತಿಸಂಧಾನತ್ತುಕ್ಕು**=ಭಗವಂತನ ಶಾಸನವಾದ ಚರಮಶ್ಲೋಕದಲ್ಲಿನ ಅರ್ಥಾನುಸಂಧಾನರೂಪವಾದ ಭಗವತ್‌ಸ್ಮರಣಕ್ಕೆ, **ಅನುಗುಣಮಾಗ**=ಅನುಗುಣವಾದ, **ಶರೀರತ್ತಿನುಡೈಯ**=ಶರೀರದ, **ಸುಸ್ವಸ್ಥದಶೆಯೈ**=ಸರಿಯಾದ ಆರೋಗ್ಯದ ಸ್ಥಿತಿಯು, **ವೇಂಡುವದು**=ಅಪೇಕ್ಷಿಸಲ್ಪಡುತ್ತದೆ. **ಮಟ್ರುಂ**=ಮತ್ತು, **ಯೋಗೋಪಯುಕ್ತ**=ಕರ್ಮಯೋಗಾದಿಗಳಿಗೆ ಉಪಯುಕ್ತವಾದ, **ಮನೋನಿಯಮನತ್ತುಕ್ಕು**=ಮನಸ್ಸನ್ನು ಚಂಚಲಗೊಳ್ಳದಂತೆ ಸ್ಥಿರಗೊಳಿಸಲು, **ಶೊನ್ನ**=ಹೇಳಲ್ಪಟ್ಟ, **ಅಭ್ಯಾಸಾದಿಗಳುಂ**=ಮತ್ತೆ ಮತ್ತೆ ಅಭ್ಯಾಸಮಾಡುವುದೇ ಮೊದಲಾದುವುಗಳೂ, **ವೇಂಡಾವೆನ್ಗೈಕ್ಕಾಗ** = ಬೇಡವೆಂದು ಹೇಳುವುದಕ್ಕೋಸ್ಕರ, **ಶರೀರಂ ಸುಸ್ವಸ್ಥಮಾನವಳವಿಲೇ** = 'ಶರೀರವು ಒಳ್ಳೆಯ ಸ್ವಾಸ್ಥ್ಯದಿಂದಿರುವ ಸಮಯದಲ್ಲಿ', -**ಎನ್ಗಿರದು**=ಎಂದು ಹೇಳಿರುವುದು.

**ಇಙ್ಗು ಸ್ವಸ್ಥಮಾಗೈಯಾವದು, ಅಪೇಕ್ಷಿತ ವಿಸ್ಮರಣೋನ್ಮಾದ ನಿದ್ರಾದಿಹೇತುವಾನ ದಶೈಕಳಿಕ್ಕೆ, ಸುಸ್ವಸ್ಥಮಾಗೈಯಾವದು, ಸಪ್ತ್ರೋ-**

**ನ್ನೇಷವಿಶೇಷತ್ತಾಲೇ ಪರಮಪುರುಷಾರ್ಥರುಚಿಪಿರಕ್ಕೈಕ್ಕು ಅನುಗುಣ-ಮಾಕ್ಕೈ, ಇಂದ ಶರೀರಸ್ವಾಸ್ಥ್ಯಂ ತಾನ್ ಆಯುರ್ವೇದೋಕ್ತಮಾನ ಧಾತುಸಾಮ್ಯತ್ತೈ ಯೊಳಿಯುವರುಮೊ? ಆನಾಲ್ 'ಧಾತು ಸಾಮ್ಯೇ ಸ್ಥಿತೇ' ಎನ್ರುದೆನ್ನೆನ್ರಿಲ್ ? ಇವ್ವಿಡತ್ತಿಲ್ ಸರ್ವರುಕ್ಕುಂ ಸಂಭಾವಿತಮಾನ ಧಾತುಸಾಮ್ಯತ್ತಾಲೇ ವರುಮ್ ಶರೀರಸ್ವಸ್ಥತೈಯೊಳಿಯ ಸಮಾರ್ಥಿ ಪರರ್‌ಕ್ಕುಪ್ಪೋಲೇ ಆಸನಪ್ರಾಣಾಯಾಮಾದಿಕಳಾಲೇ ಒರು ಅಪೂರ್ವ-ಶರೀರಸ್ವಾಸ್ಥ್ಯಮ್ ತೇಡವೇಂಡಾ –ಎನ್ರುಪಡಿ.**

**ಇಙ್ಙು** = ಈ ಪ್ರಕರಣದಲ್ಲಿ(ಹೇಳಿರುವ), **ಸ್ವಸ್ಥಮಾಗೈಯಾವದು** = ಶರೀರ ಸ್ವಾಸ್ಥ್ಯವಾದರೋ, **ಅಪೇಕ್ಷಿತ** = ಅತ್ಯವಶ್ಯವಾಗಿ ಬೇಕಾಗಿರುವ, **ವಿಸ್ಮರಣ** = ಮಾಡಬೇಕಾದ ಭಗವಚ್ಚಿಂತನ (ಶರಣಾಗತಿ) ಕ್ರಿಯೆಯನ್ನೇ ಮರೆಯುವಿಕೆ, **ಉನ್ಮಾದ** = ಎಚ್ಚರತಪ್ಪುವಿಕೆ, **ನಿದ್ರಾದಿಹೇತುವಾನ** = ನಿದ್ರೆಯೇ ಮೊದಲಾದುವುಗಳಿಗೆ ಕಾರಣವಾದ, **ದಶೈಕಳಿಕ್ಕೈ** = ಸ್ಥಿತಿಯಿಲ್ಲ-ದಿರುವಿಕೆ, **ಸುಸ್ವಸ್ಥ್ಯಮಾಗೈಯಾವದು** = ಸುಸ್ವಾಸ್ಥ್ಯವಾದರೋ, **ಸತ್ತ್ವೋನ್ನೇಷವಿಶೇಷತ್ತಾಲೆ** = ಚೇತನನಿಗೆ ವಿಶೇಷವಾಗಿ ಸತ್ವಗುಣ **ಉದ್ರೇಕವಾದುದರಿಂದ, ಪರಮಪುರುಷಾರ್ಥರುಚಿ ಪಿರಕ್ಕೈಕ್ಕು** = ಪರಮ-ಪುರುಷಾರ್ಥವಾದ, ಭಗವಂತನನ್ನೇ ಪಡೆಯುವ ಆಸೆಯುಂಟಾಗುವುದಕ್ಕೆ, **ಅನುಗುಣಮಾಕ್ಕ** = ಅನುಗುಣವಾಗಿರುವಿಕೆ, **ಇಂದಶರೀರಸ್ವಾಸ್ಥ್ಯಂತಾನ್** = ಈ ಶರೀರಸ್ವಾಸ್ಥ್ಯವಾದರೋ, **ಆಯುರ್ವೇದೋಕ್ತಮಾನ** = ಆಯುರ್ವೇದದಲ್ಲಿ ಹೇಳಲ್ಪಟ್ಟಿರುವ, **ಧಾತುಸಾಮ್ಯತ್ತೈ** = ರಸ, ರಕ್ತ, ಮಾಂಸ, ಮೇದಸ್, ಅಸ್ಥಿ, ಮಜ್ಜಾ, ಶುಕ್ರ (ಅಥವಾ ಶೋಣಿತ) –ಎಂಬ ಏಳು ಧಾತುಗಳೂ ತಾವಿರಬೇಕಾದ ಪ್ರಮಾಣಗಳಲ್ಲಿ ಇರುವಿಕೆ–ಎಂದು 'ಧಾತು ಸಾಮ್ಯ' –ಸ್ಥಿತಿಯನ್ನು, **ಒಳಿಯುವರುಮೋ ?** = ಹೊಂದದೇ ಉಂಟಾಗು-ತ್ತದೆಯೋ ? **ಆನಾಲ್** = ಹಾಗೆ ಒಂದುವೇಳೆ ಶರೀರ ಸ್ವಾಸ್ಥ್ಯವು, ಆಯು-ರ್ವೇದದಲ್ಲಿ ಹೇಳಿದ ಧಾತುಸಾಮ್ಯತೆಯಿಲ್ಲದೆಯೇ ಉಂಟಾಗುವುದಾದರೆ, **"ಧಾತುಸಾಮ್ಯೇ ಸ್ಥಿತೇ"–ಎನ್ರು ಎನ್ನೆನ್ರಿಲ್** = 'ಧಾತುಸಾಮ್ಯವಿರುವಲ್ಲಿ'

–ಎಂದು ಹೇಳುವುದೇಕೆಂದರೆ, **ಇನ್ನಿಡತ್ತಿಲ್** = ಈ ಪ್ರಕರಣದಲ್ಲಿ **ಸರ್ವ-ರುಕ್ಕುಂ ಸಂಭಾವಿತಮಾನ**=ಆಯುರ್ವೇದೋಕ್ತವಾದ ಧಾತುಸಾಮ್ಯವು ಇರುವ, ಇಲ್ಲದಿರುವ – ಎಲ್ಲರಿಗೂ ಉಂಟಾಗುವ, **ಧಾತುಸಾಮ್ಯತ್ತಾಲೆ**= ಧಾತುಸಾಮ್ಯದಿಂದ, **ವರುಮ್** = ಬರುವ, **ಶರೀರಸ್ವಸ್ಥತೈ ಒಳಿಯ**= ಶರೀರ ಸ್ವಾಸ್ಥ್ಯವನ್ನು ಬಿಟ್ಟು, **ಸಮಾಧಿಪರರ್ಕ್ಕುಪ್ಪೋಲೆ** = ಭಕ್ತಿ-ಯೋಗನಿಷ್ಠರಿಗೆ ಹೇಳಿರುವಂತೆ, **ಆಸನ ಪ್ರಾಣಾಯಾಮಾದಿಗಳಾಲೇ**= ಆಸನ, ಪ್ರಾಣಯಾಮ, ಪ್ರತ್ಯಾಹಾರಾದಿಗಳಿಂದ (ಉಂಟಾಗುವ), **ಒರು ಅಪೂರ್ವ ಶರೀರಸ್ವಾಸ್ಥ್ಯಮ್**=ಒಂದು ಅಪೂರ್ವವಾದ ಶರೀರಸ್ವಾಸ್ಥ್ಯ-ವನ್ನು, **ತೇಡವೇಂಡಾ** = ಹುಡುಕಬೇಡ, **ಎನ್ರಪಡಿ** = ಎಂದು ಹೇಳಿದಂತಾಯಿತು.

**ಇಙ್ಗು ಪ್ರಪತ್ತಿಕ್ಕು ವೇಂಡುಮಳವು ಮನಸ್ಥಿತ್ಯಾದಿಗಳೈ ಚೊಲ್ಲು-ಗಿರದಾಹೈಯಾಲೇ ಆಧಿವ್ಯಾಧಿ ಮಾನ್ಗಳುಕ್ಕು ಪ್ರಪತ್ತಿ ಚೊಲ್ಲುಮದು ವಿರುದ್ಧಮನ್ರು. ಇಪ್ಪಡಿಕಳಾಲೇ "ಪ್ರಪತ್ತೇಃ ಕ್ವಚಿದಪ್ಯೇವಂ ಪರಾಪೇಕ್ಷಾ ನ ವಿದ್ಯತೇ" –ಎನ್ರು ಶೊನ್ನ ನೈರಪೇಕ್ಷ್ಯಂ ಪ್ರಕಾಶಿತ ಮಾಯಿಟ್ರು.**

**ಇಂಗು** = ಈ ಪ್ರಕರಣದಲ್ಲಿ, **ಪ್ರಪತ್ತಿಕ್ಕು**=ಶರಣಾಗತಿಗೆ, **ವೇಂಡು-ಮಳವು**=ಬೇಕಾದಷ್ಟು ಮಾತ್ರ, **ಮನಃಸ್ಥಿತ್ಯಾದಿಗಳೈ** = ಸ್ಥಿರವಾಗಿ ಮನಸ್ಸಿರುವಿಕೆಯೇ ಮೊದಲಾದುವು, **ಚೊಲ್ಲುಗಿರಿದಾಹೈಯಾಲೇ**= ಹೇಳುವುದರಿಂದ, **ಆಧಿವ್ಯಾಧಿಮಾನ್ಗಳುಕು** = ಮನೋರೋಗ (ಆಧಿ), ದೈಹಿಕ ರೋಗ (ವ್ಯಾಧಿ) ಗಳಿಂದ ಕೂಡಿದ ಚೇತನರಿಗೂ, **ಪ್ರಪತ್ತಿ ಚೊಲ್ಲುಮದು**= ಭರಸಮರ್ಪಣಮಾಡುವುದನ್ನು ಹೇಳುವುದು, **ವಿರುದ್ಧಮನ್ರು**=ವಿರೋಧ-ವಾದುದಲ್ಲ. **ಇಪ್ಪಡಿಕಳಾಲೇ** = ಈ ರೀತಿ ಹೇಳಲ್ಪಟ್ಟಿರುವುದರಿಂದ, **"ಪ್ರಪತ್ತೇಃ**=ಪ್ರಪತ್ಯನುಷ್ಠಾನಕ್ಕೆ, **ಕ್ವಚಿದಪಿ**=ಎಲ್ಲಿಯೂ, **ಏವಂ**= ಈ ರೀತಿಯಾಗಿ, **ಪರಾಪೇಕ್ಷಾ**=ಬೇರೊಂದರ ಅಪೇಕ್ಷೆಯು, **ನವಿದ್ಯತೇ**= ಇರುವುದಿಲ್ಲ" — **ಎನ್ರು**=ಎಂದು, **ಶೊನ್ನ**=ಹೇಳಿದ, **ನೈರಪೇಕ್ಷ್ಯಂ**= ಮತ್ತೊಂದರ ಅಪೇಕ್ಷೆ ಇಲ್ಲದಿರುವಿಕೆಯು, **ಪ್ರಕಾಶಿತಮಾಯಿಟ್ರು**= ಸ್ಪಷ್ಟವಾಗಿ ತಿಳಿಸಲ್ಪಟ್ಟಿತು.

1 "ನಿನ್ರವಾನಿಲ್ಲಾನೆ ಂಜಿನ್ನೈಯುಡ್ಯೈಯೇ" (ಪೆರುಯತಿರುಮೊಳಿ : ೧-೧-೪), "ಮಹತಾಪುಣ್ಯಪಣ್ಯೇನ ಕ್ರೀತೇಯಂ ಕಾಯನೌ-ಸ್ತ್ವಯಾ! ಪ್ರಾಪ್ತುಂ ದುಃಖೋದಧೇಃ ಪಾರಂ ತ್ವರಯಾವನ್ನ-ಭಿದ್ಯತೇ ॥ (ಭಾಗವತ)

"ನಿನ್ರವಾನಿಲ್ಲ=ನಿಂತಕಡೆ ನಿಲ್ಲದಿರುವ (ಚಂಚಲ ಸ್ವಭಾವವುಳ್ಳ) ನೆಂಜಿನ್ನೈ=ಮನಸ್ಸನ್ನು, ಉಡ್ಯೈಯೇನ್=ಹೊಂದಿರುವ ನಾನು"-[ಎಂದು ತಿರುಮಂಗೈ ಆಳ್ವಾರವರು ಹೇಳಿರುವಂತೆ ಚಂಚಲಸ್ವಭಾವವುಳ್ಳ ಚೇತನರು], "ತ್ವಯಾ=ನಿನ್ನಿಂದ, ಮಹತಾ=ಅತ್ಯಧಿಕವಾದ, ಪುಣ್ಯಪಣ್ಯೇನ=ಪುಣ್ಯ-ವೆಂಬ ಬೆಲೆಯನ್ನು ಕೊಟ್ಟು, ಇಯಂ=ಈ, ಕಾಯನೌಃ=ದೇಹವೆಂಬ ದೋಣಿಯು, ಕ್ರೀತಾ=ಕೊಂಡುಕೊಳ್ಳಲ್ಪಟ್ಟದೆ. ಯಾವನ್ನಭಿದ್ಯತೆ= (ಅದು) ಒಡೆದುಹೋಗುವುದರೊಳಗಾಗಿ, ದುಃಖೋದಧೇಃ=ದುಃಖದಿಂದ ಕೂಡಿದ ಈ ಸಂಸಾರಸಾಗರದ, ಪಾರಂ = ಮತ್ತೊಂದು ದಡವನ್ನು, ಪ್ರಾಪ್ತುಂ=ಸೇರಲು, ತ್ವರ=ಆದಷ್ಟು ಜಾಗ್ರತೆ ಪ್ರಯತ್ನಿಸು".

1 ಮೇಲೆ ಹೇಳಿದ ತಿರುಮಂಗೈ ಆಳ್ವಾರ್ರವರ ಪೂರ್ಣ ಪದ್ಯವೂ ಅದರ ಅರ್ಥವೂ ಈರೀತಿಯಾಗಿರುತ್ತದೆ:—

"ವೆನ್ರಿಯೇ ವೇಂಡಿ ವೀಳ್ ಪೊರುಟ್ಕಿರುಂಗಿ ವೇಳ್ಕಣಾರ್ ಕಲವಿಯೇ ಕರುದಿ, ನಿನ್ರವಾನಿಲ್ಲಾನೆಂಜಿನ್ನೈಯುಡ್ಯೈಯೇನ್ ಎನ್ ಶೆಯ್‌ಗೇನ್ ನೆಡುವಿ-ಶುಂಬಣವುವ್, ಪನ್ರಿಯಾಯ್ ಅನ್ರು ಪಾರಗವ್ ಕೀಂಡ ಪಾಳಿಯ್ಯಾ-ನಾಳಿಯಾನರುಳೇ, ನನ್ರುನಾನ್ ಉಯ್ಯನಾನ್ ಕಂಡುಕೊಂಡೇನ್ ನಾರಾಯಣಾವೆನ್ನುಂ ನಾಮಮ್ ||"

ವೆನ್ರಿಯೇ ವೇಂಡಿ – (ತಂದೆ, ತಾಯಿ, ಆಚಾರ್ಯರೇ ಮೊದಲಾದ ಪರಮಪೂಜ್ಯರನ್ನು) ಜಯಿಸಬೇಕೆಂದು ಇಚ್ಛಿಸಿ, ವೀಳ್ ಪೊರುಕ್ಕಿರಂಗಿ – ನಶ್ವರವಾದ ವಸ್ತುಗಳಿಗೆ ಆಸೆಪಟ್ಟು, ವೇಲ್‌ಕಣಾರ್ ಕಲವಿಯೇ ಕರುದಿ – ವೇಲಾಯುಧದಂತೆ ತೀಕ್ಷ್ಣವಾದ ದೃಷ್ಟಿಯಿಂದ ಕೂಡಿದ ಸುಂದರವಾದ

2 ಕಿಳರೊಳಿಯಿಳಮ್ಮೈ ಕೆಡುವ್ವುದನ್ಮ್ನನವ್" (ತಿರುವಾಯ್-ಮೊಳಿ-೨-೧೦-೧) -ಎನ್ರುಮ್ ಅರ್ಥಂ ಕೊಟ್ರು 'ಸತಿ' —ಎನ್ಗಿರದು. ಇದು ಮೂನ್ರಿಲುಮ್ ಅನ್ವಯಿಕ್ಕಿರದು.

---

ಕಣ್ಣುಗಳುಳ್ಳ ಸ್ತ್ರೀಯರಿಗೆ ಆಸೆಪಟ್ಟು, (ಈ ರೀತಿಯಾಗಿ ನಾನಾಬಗೆಯಾಗಿ) ನಿನ್ರುಅನಿಲ್ಲ = ನಿಂತಕಡೆ ನಿಲ್ಲದೆ ಚಂಚಲವಾದ, ನ್ನೆಂಜಿನ್ನೈಯುಡ್ಡೈಯೇನ್ = ಮನಸ್ಸನ್ನು ಹೊಂದಿರುವ ನಾನು, ಎನ್ ಶೆಯ್ ಕೇನ್ = ಏನು ಮಾಡುವೆನು? ಅನ್ರು = ಹಿಂದೆ ಒಂದು ಕಾಲದಲ್ಲಿ, ನೆಡುವಿಶುಂಬು ಅಣವುಂ = ವಿಸ್ತಾರ-ವಾದ ಆಕಾಶ, ಅನಾಕಾಶವೆರಡೂ ಒಂದುಕ್ಕೊಂದು ಕೂಡಿಕೊಳ್ಳುವಂತೆ ಬೆಳೆದ, ಪನ್ರಿಯಾಯ್ ಪಾರಕವ್ ಕೀಂಡ ಪಾಳಿಯಾನ್ = ಮಹಾ-ವರಾಹಸ್ವರೂಪನಾಗಿ, ಭೂಮಂಡಲವನ್ನೇ ಉದ್ಧರಿಸುವ ಸಲುವಾಗಿ ಸಮುದ್ರದಡಿಯಿಂದ ಕಿತ್ತು ತಂದ ಕೈಯುಳ್ಳ, ಆಳಿಯಾನ್ = ಸುದರ್ಶನ ಚಕ್ರಧಾರಿಯಾದ ಸರ್ವೇಶ್ವರನ, ಅರುಳೇ = ಕೃಪೆಯಿಂದಲೇ, ನಾನ್ = ನಾನು, ನನ್ರುಉಯ್ಯ = ಚನ್ನಾಗಿ ಉಜ್ಜೀವಿಸಲು, ನಾರಾಯಣಾ ಎನ್ರುಂ ನಾಮಮ್ = 'ನಾರಾಯಣ' -ಎಂಬ ಭಗವಂತನ ನಾಮವನ್ನು, ಕಂಡುಕೊಂಡೇನ್ = ಕಂಡುಕೊಂಡೆನು.

ಅಹಂಕಾರ ಮಮಕಾರಗಳಿಂದ ವರ್ತಿಸುತ್ತಾ ತುಚ್ಛವಾದ ವಿಷಯ ಗಳಲ್ಲಿ ಆಸೆಪಟ್ಟು ಚಂಚಲಗೊಂಡ ಮನಸ್ಸುಳ್ಳ ನಾನು ಉಜ್ಜೀವಿಸುವುದೆಂತು -ಎಂದಿರುವಲ್ಲಿ, ಭೂದೇವಿಯನ್ನುದ್ಧರಿಸಿದ ವರಾಹಸ್ವಾಮಿಯಿಂದ ಕೃಪೆಗೈದು ಉಪದಿಷ್ಟವಾದ ವರಾಹ ಚರಮಶ್ಲೋಕದಲ್ಲಿ ಹೇಳಿರುವ, ಅವನ ಸ್ಮರಣೆ-ಮಾಡುವುದಕ್ಕೆ ಸಾಧನವಾದ, 'ಓಂನಮೋ ನಾರಾಯಣಾಯ'—ಎಂಬ ಅಷ್ಟಾ-ಕ್ಷರವನ್ನೇ ನಾನು ಚನ್ನಾಗಿ ಉಜ್ಜೀವಿಸಲು ಸಾಧನವಾಗಿ ಅರಿತುಕೊಂಡೆ.

2 ಮೇಲೆ ಹೇಳಿರುವ ನಮ್ಮಾಳ್ವಾರವರ ಪಾಶುರವಾದ 'ಕಿಳರೊಳಿ-ಯಿಳಮ್ಮೈ'— ಪದ್ಯದ ಪೂರ್ಣರೂಪವೂ ,ಮತ್ತು ಪ್ರತಿ ಪದಾರ್ಥ-ತಾತ್ಪರ್ಯವೂ ಇಂತಿದೆ :—

'ಕಿಳ್‌ರ್' = ಪ್ರವೃದ್ಧಮಾನವಾದ, ಒಳಿ= ತೇಜಸ್ಸು, ಇಳ್‌ಮೈ= ಯೌವನವು, ಕೆಡುವುದನ್ ಮುನ್ನಮ್ = ನಾಶಹೊಂದುವುದಕ್ಕೆ ಮುಂಚಿತವಾಗಿಯೇ !' –ಎನ್ರುಂ ಅರ್ಥಂಕೊಟ್ರಾ = ಎಂಬ ಅರ್ಥಗಳನ್ನು ತೋರ್ಪಡಿಸಬೇಕೆಂದೇ 'ಸತಿ'—(ದೇಹಸ್ವಾಸ್ಥ್ಯವಿದ್ದು ಮನಸ್ಸು ಸ್ಥಿರವಾಗಿ)

---

ಕಿಳರೊಳಿಯಿಳಮೈ ಕೆಡುವದರ್ಮುನ್ನಮ್,
ವಳರೊಳಿಮಾಯೋ‌ನ್ ಮರುವಿಯಕೋಯಿಲ್,
ವಳರಿಳಮ್ ಪೊಳಿಲ್ ಶೂಳ್ ಮಾಲಿರುಂ ಶೋಲೈ
ತಳರ್ವಿಲರಾಕಿಲ್ ಶಾರ್ವದು ಶದಿರೇ ॥ (೨-೧೦-೧)

ಕಿಳರ್ = ಪ್ರವರ್ಧಮಾನವಾದ, ಒಳಿ= ತೇಜಸುಳ್ಳ, ಇಳಮೈ = ಯೌವನವು, ಕೆಡುವದನ್ ಮುನ್ನಮ್ = ನಾಶಹೊಂದುವುದಕ್ಕೆ ಮುಂಚೆ, ವಳರ್ = ಬೆಳೆಯುತ್ತಿರುವ, ಒಳಿ = (ಗುಣೋತ್ಕರ್ಷಪ್ರಯುಕ್ತವಾದ) ಕಾನ್ತಿಯುಳ್ಳ, ಮಾಯೋ‌ನ್ = ಆಶ್ಚರ್ಯಗುಣಚೇಷ್ಟಿತನಾದ ಸರ್ವೇಶ್ವರನು, ಮರುವಿಯ = ವಾಸಮಾಡುತ್ತಿರುವ, ಕೋಯಿಲ್ = ದಿವ್ಯಕ್ಷೇತ್ರವಾಗಿ, ವಳರ್ = ವೃದ್ಧಿಹೊಂದುತ್ತಿರುವ, ಇಳಮ್ ಪೊಳಿಲ್ = ಎಳೇಗಿಡಗಳಿಂದ, ಶೂಳ್ = ಪರಿವೃತವಾದ, ಮಾಲಿರಂಶೋಲೈ = 'ತಿರುಮಾಲಿರುಂ ಶೋಲೈ' ಪರ್ವತವನ್ನು, ತಳರ್ವು ಇಲರಾಕಿ(ಲ್) = ಆಯಾಸವಿಲ್ಲದಂತೆ, ಶಾರ್ವದೇ = ಆಶ್ರಯಿಸುವುದೇ, ಶದಿರ್ = ಚಾತುರ್ಯವು (ಯುಕ್ತವು).

ಯೌವನವಿರುವಾಗಲೇ ದಿವ್ಯಮಾಯಾಗುಣ ಚೇಷ್ಟಿತನಾದ ಸರ್ವೇಶ್ವರನ ದಿವ್ಯಕ್ಷೇತ್ರವಾದ ತಿರುಮಾಲಿರುಂ ಶೋಲೈ ಮಲೈ ಎಂಬ ಪರ್ವತ ಪ್ರದೇಶವನ್ನು (ಅಲ್ಲಿ ಬಿಜಯಮಾಡಿಸಿರುವ 'ಸುಂದರ ಬಾಹು' ನಾಮಾಂಕಿತನಾದ ಪರಮಾತ್ಮನನ್ನು) ನಿರಾಯಾಸವಾಗಿ ಆಶ್ರಯಿಸುವುಕೆಯೇ ಯುಕ್ತವಾದುದು. ಇದೇ ಪ್ರಾಪ್ಯವಾದ ಪರಮಪುರುಷಾರ್ಥವಾದುದು, ಈ ಅರ್ಥವನ್ನೇ ವರಾಹ ಚರಮಶ್ಲೋಕದಲ್ಲಿ 'ಸುಸ್ವಸ್ಥೇ ಶರೀರೆ ಸತಿ' –ಎಂಬಲ್ಲಿ ಹೇಳಿರುವುದು.

'ಇರುವಲ್ಲಿ' **ಎನ್ಗಿರದು** = ಎಂದು ಹೇಳಿರುವುದು. **ಇದು** = ಈ 'ಸತಿ' (ಇರುವಲ್ಲಿ) ಎಂಬ ಅವ್ಯಯುವನ್ನು, **ಮೂನ್ರಿಲುಮ್**—'ಸ್ಥಿತೇ ಮನಸಿ', (ಸ್ಥಿರವಾದ ಮನಸ್ಸನ್ನು), 'ಸುಸ್ವಸ್ಥೇ ಶರೀರೇ' (ಸ್ವಾಸ್ಥ್ಯದಿಂದಕೂಡಿದ ಶರೀರವಿರಲು) 'ಧಾತುಸಾಮ್ಯೇ ಸತಿ' (ಸಪ್ತಧಾತುಗಳೂ ಸಮವಾದ ಸ್ಥಿತಿ-ಯಲ್ಲಿರಲು) –ಎಂಬ ಮೂರು ಪದಗಳೊಡನೆಯೂ, **ಅನ್ವಯಿಕ್ಕಿರದು**–ಒಂದೊಂದು ಪದಕ್ಕೂ ಬೇರೆ ಬೇರೆಯಾಗಿ ಕೂಡಿಸಿ ಅರ್ಥಮಾಡಬೇಕು.

ತಿರುಮಂಗೈ ಆಳ್ವಾರವರು ಹೇಳಿದಂತೆ ಚಂಚಲ ಮನಸ್ಸಿನಿಂದ ಕೂಡಿದ ಚೇತನರು, ಭಾಗವತ ಪುರಾಣವಲ್ಲಿ ಶುಕಬ್ರಹ್ಮರು ಪರೀಕ್ಷಿತ ಮಹಾರಾಜರಿಗೆ ಹೇಳಿದಂತೆಯೇ ಕರ್ಮಬಂದದಿಂದ ಬಿಡುಗಡೆ ಹೊಂದಿ ಪರಮಾತ್ಮನನ್ನು ಸೇರಲು, ಸಾಧನವಾದ 'ಶರಣಾಗತಿ' –ಎಂಬ ಉಪಾಯಾನುಷ್ಠಾನ ಮಾಡಲು ಸಹಾಯಕವಾದ ಬುದ್ಧಿಯಿಂದ ಕೂಡಿದ ಈ ದೇಹವನ್ನು ಪೂರ್ವಾರ್ಜಿತವಾದ ಅತ್ಯಧಿಕವಾದ ಪುಣ್ಯದಿಂದ ಪಡೆದಿದ್ದಾರೆ. ಆದರೆ, ನಶ್ವರವಾದ ಈ ದೇಹವು ಎಂದು ನಷ್ಟವಾಗುವುದೋ ತಿಳಿಯದು. ಆದುದರಿಂದ ಎಂದೋ ವೃದ್ಧಾಪ್ಯ–ದಲ್ಲಿ ಉಪಾಯಾನುಷ್ಠಾನ ಮಾಡೋಣವೆಂದಿಲ್ಲದೆ, ನಮ್ಮಾಳ್ವಾರವರು ಹೇಳಿದಂತೆ – 'ಪ್ರವೃದ್ಧಮಾನವಾದ ತೇಜಸ್ಸು ಮತ್ತು ಯೌವನವು ನಷ್ಟ ಹೊಂದುವ ಮುನ್ನವೇ', ಅಂದರೆ ಆದಷ್ಟು ಜಾಗ್ರತೆ, ದೇಹಸ್ವಾಸ್ಥ್ಯವಿದ್ದು ಮನಸ್ಸು ಸ್ಥಿರವಾಗಿರುವಲ್ಲಿಯೇ, ಪರಮಾತ್ಮನನ್ನು ಆಶ್ರಯಿಸಬೇಕೆಂಬ ಬುದ್ಧಿಬಂದ ಕ್ಷಣದಲ್ಲಿಯೇ ಭಗವಂತನಲ್ಲಿ ರಕ್ಷಾಭರವನ್ನರ್ಪಿಸಿ ಕೃತಾರ್ಥ–ರಾಗಬೇಕೆಂದು ತಿಳಿಸುವುದಕ್ಕೋಸ್ಕರವೇ, ವರಾಹ ಚರಮಶ್ಲೋಕದಲ್ಲಿ ದೇಹ ಸ್ವಾಸ್ಥ್ಯವಿದ್ದು ಧಾತುಸಾಮ್ಯವಿದ್ದು ಮನಸ್ಸು ಸ್ಥಿರವಾಗಿ '**ಇರುವಲ್ಲಿ**' '**ಸತಿ**' –ಎಂದು ಹೇಳಿದ್ದಾರೆ.

**"ಸಾಹಿ ಸರ್ವತ ಸರ್ವೇಷಾಂ"– ಎನ್ಗಿರಪಡಿಯೇ ಪ್ರಪತ್ತಿಯನು-ಷ್ಠೈಯು ಸರ್ವಾಧಿಕಾರವಮ್ ಕೋಟ್ರ 'ಯೋ ನರಃ' ಎನ್ಗಿರದು. ಇದುಕ್ಕು ಒರು ವರ್ಣಾಶ್ರಮಾದಿ ಅಧಿಕಾರನಿಯಮು ಮಿಲ್ಲೈ ಸತ್ಯವಚನಾದಿಗಳೈ-ಪ್ಪೋಲೇ ಸಾಮಾನ್ಯಧರ್ಮಮಾಗೈಯಾಲೇ ಶರಣ್ಯ, ಶರಣಾಗತಿ**

**ತತ್ಫಲಜ್ಞಾನಂ ಉಡೈಯಾರೆಲ್ಲಾರುಕ್ಕುಮ್ ರುಚಿಯಿರುನ್ದಪೋದು "ಸರ್ವಯೋಗ್ಯಮನಾಯಾಸಂ", "ಸರ್ವಲೋಕ ಶರಣ್ಯಾಯ"- ಎನ್ಗಿರ ವಿಷಯತ್ತಿಲ್ಯ ಪಟ್ಟಿಕುರೈಯಿಲ್ಲೈ -ಎನ್ರು ತಾತ್ಪರ್ಯಮ್.**

"**ಸಾಹಿ** = ಆ ಪ್ರಪತ್ತಿಯಾದರೋ, **ಸರ್ವತ್ರ** = ದೇಶಕಾಲ ಭೇದವಿಲ್ಲದೆ ಎಲ್ಲೆಡೆಯಲ್ಲಿಯೂ, **ಸರ್ವೇಷಾಂ** = ಜಾತಿ, ವರ್ಣ, ಲಿಂಗ, ವಯೋಭೇದವಿಲ್ಲದೆ ಎಲ್ಲರಿಗೂ (ಅನುಷ್ಠಿಸಲು ಯೋಗ್ಯವಾದ ಉಪಾಯವಾಗಿದೆ" –ಎನ್ಗಿರ**ಪಡಿಯೇ** ಎಂದು ಹೇಳುವಂತೆಯೇ, **ಪ್ರಪತ್ತಿಯಿನುಡೈಯ ಸರ್ವಾಧಿಕಾರಂ** = ಪ್ರಪತ್ತಿ ಅಥವಾ ಶರಣಾಗತ್ಯನುಷ್ಠಾನಕ್ಕೆ ಎಲ್ಲರಿಗೂ ಅಧಿಕಾರವುಂಟೆಂದು, **ತೋಟ್ರ** = ತೋರಿಸಲು, '**ಯೋ ನರಃ**' = ವರಾಹ ಚರಮಶ್ಲೋಕದಲ್ಲಿ '**ಯೋ ನರಃ**' (ಯಾವ ಒಬ್ಬ ಮನುಷ್ಯನೂ),**ಎನ್ಗಿರದು** = ಎಂದು ಹೇಳಿರುವುದು. **ಇದುಕ್ಕು** = ಈ ಪ್ರಪತ್ತಿಗೆ, **ಒರುವರ್ಣಾಶ್ರಮಾದಿ ಅಧಿಕಾರಿ ನಿಯಮಮುಂ ಇಲ್ಲೈ** = (ಕರ್ಮ ಯೋಗಾದಿಗಳಿಗಿರುವಂತೆ) ಈ ಒಂದು ವರ್ಣದವರು ಮಾತ್ರವೇ, ಅಥವಾ ಈ ಆಶ್ರಮದವರು ಮಾತ್ರವೇ ಅನುಷ್ಠಿಸಬಹುದು. ಇವರು ಮಾತ್ರವೇ, ಇದಕ್ಕೆ ಅಧಿಕಾರಿಗಳು –ಎಂಬ ನಿಯಮವಿಲ್ಲ. **ಸತ್ಯ-ವಚನಾದಿಗಳೈಪ್ಪೋಲೇ** = 'ನಿಜವನ್ನೇ ಹೇಳಬೇಕು' ಮೊದಲಾದುವುಗಳಂತೆ **ಸಾಮಾನ್ಯ ಧರ್ಮಮಾಗೈಯಾಲೆ** = ಎಲ್ಲ ಚೇತನರಿಗೂ ಸಾಮಾನ್ಯವಾದ ಧರ್ಮವಾದುದರಿಂದ, **ಶರಣ್ಯ** = ರಕ್ಷಕನಾದ ಪರಮಾತ್ಮ, **ಶರಣಾಗತಿ** = ಅವ-ನನ್ನು ಪಡೆಯಲು ಮಾಡಬೇಕಾದ 'ಶರಣಾಗತಿ'-ಎಂಬ ಉಪಾಯಾನುಷ್ಠಾನ-ಕ್ರಮ, **ತತ್ಫಲಜ್ಞಾನಂ** = ಆ ಉಪಾಯಾನುಷ್ಠಾನದಿಂದ ತಾನು ಸಂಸಾರಬಂಧವನ್ನು ನೀಗಿ, ಮುಕ್ತದೆಶೆಯಲ್ಲಿ ನಿತ್ಯವಿಭೂತಿಯಲ್ಲಿ ಪಡೆಯುವ ಪರಿಪೂರ್ಣ ಬ್ರಹ್ಮಾನಂದವೇ ಮೊದಲಾದುವುಗಳ ಜ್ಞಾನವನ್ನು, **ಉಡೈಯಾರೆಲ್ಲಾ-ರುಕ್ಕುಮ್** = ಹೊಂದಿರುವ ಎಲ್ಲರಿಗೂ, **ರುಚಿಯಿರುನ್ದಪೋದು** = ಭಗವಂತನಲ್ಲಿ ಶರಣಾಗತಿ ಮಾಡಬೇಕೆಂಬ ಅಭಿರುಚಿ ಉಂಟಾದ ಸಮಯದಲ್ಲಿ "**ಅನಾಯಾಸಂ** = ಸ್ವಲ್ಪವೂ ಆಯಾಸವಿಲ್ಲದೆ, **ಸರ್ವಯೋಗ್ಯಂ** = ಎಲ್ಲರಿಂದಲೂ ಮಾಡಲು ಯೋಗ್ಯನಾದ,[**ಅಪ್ರಮಾದಂ** = ಸ್ವತಃ ಎಂದೂ

ಎಚ್ಚರತಶಪ್ಪದಿರುವ ಮತ್ತು ಬೇರೆಯವರೂ ಎಚ್ಚರತಪ್ಪುವಿಕೆಯನ್ನು ಹೋಗ-ಲಾಡಿಸುವ, **ಅನೂಪಮಂ** = ಅವನಿಗೆ ಹೋಲಿಸಲು ಅವನಂತೆ ಗುಣವಿರುವ ಮತ್ತೊಂದು ವಸ್ತುವೇ ಇಲ್ಲದಿರುವ, **ಪ್ರಪನ್ನಾರ್ತಿಹರಂ** = ತನ್ನಲ್ಲಿ ಶರಣು-ಹೋದ ಚೇತನರ ಪೀಡೆ ಅಥವಾ ದುಃಖವನ್ನು ಹೋಗಲಾಡಿಸುವ, **ವಿಷ್ಣುಂ** = ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವ – ಶ್ರೀಮನ್ನಾರಾಯಣನನ್ನು, **ಶರಣಂ-ಗಂತುಮರ್ಹಸಿ** = ಮರೆಹೋಗಲು ನೀನು ಯೋಗ್ಯನಾಗಿದ್ದೀಯೇ) –ಎಂದೂ, [ವಿಭೀಷಣನು ರಾಮಾವತಾರಕಾಲದಲ್ಲಿ, ಶ್ರೀರಾಮನಲ್ಲಿ ಶರಣಾಗತ್ಯನು-ಷ್ಠಾನಮಾಡಿದ ಕಾಲದಲ್ಲಿ ಹೇಳಿದ] **ಸರ್ವಲೋಕ ಶರಣ್ಯಾಯ** = ಚೇತನಾ ಚೇತನರಿಂದ ಕೂಡಿದ ಎಲ್ಲ ಲೋಕಕ್ಕೂ ರಕ್ಷಕನಾದ [**ಮಹಾತ್ಮನೇ** = ಮಹಾತ್ಮನಾದ, **ರಾಘವಾಯ** = ಶ್ರೀರಾಮಚಂದ್ರನಿಗೆ, **ಉಪಸ್ಥಿತಂ** = ಅವನಲ್ಲಿ ದಾಸನಾಗಿ ಶರಣುಹೋಗಲು ಬಂದು ನಿಂತಿರುವ, **ಮಾಂ** = ನನ್ನ ವಿಷಯವನ್ನು, **ನಿವೇದಯತ** = ತಿಳಿಸಿರಿ] **ಎನ್ಗಿರವಿಷಯತ್ತೈ** = –ಎಂದು ಮೇಲೆ ಹೇಳಿದ ಎರಡು ಶ್ಲೋಕಗಳಲ್ಲಿನ ಶರಣ್ಯನಾದ ಪರಮಾತ್ಮನ ಗುಣ ಗಳನ್ನೂ ಮತ್ತು ಚೇತನನ ಶರಣಾಗತ್ಯನುಷ್ಠಾನದ ಅರ್ಹತೆಯನ್ನೂ **ಪಟ್ರಿ** ಅನುಸಂಧಾನ ಮಾಡುವುದರಿಂದ, **ಕುರೈಯಿಲ್ಲೈ** = ಯಾವವಿಧವಾದ ಕೊರತೆಯೂ ಇಲ್ಲ, **ಎನ್ರುತಾತ್ಪರ್ಯಮ್** = ಎಂದು ತಾತ್ಪರ್ಯ.

**ಆನಾಲುಮ್ 'ಯ' ಎನ್ಗಿರವಳವೇ ಅಮೈಯಾದೋ ? 'ನರ' ಎನ್ರದು ಮಿಕುವಿಯನ್ರೋ ? ಇದು ತಾನ್ "ಸಿದ್ಧಗಂಧರ್ವ ಯಕ್ಷಾಶ್ಚ ತತಸ್ತ್ವಾಂ ಶರಣಂ ಗತಾಃ" (ರಾಮಾಯಣ, ಬಾಲಕಾಂಡ. ೧೫ಸರ್ಗ– ೨೪ಶ್ಲೋಕ), "ತದುಪರ್ಯಪಿ ಬಾದರಾಯಣಃ ಸಂಭವಾತ್" (೧–೩–೨೫ ಬ್ರಹ್ಮಸೂತ್ರ) –ಎನ್ರುಮ್ ದೇವಾದಿಗಳುಕ್ಕುಂ ಪರಮ ಪುರುಷ ಸಮಾಶ್ರಯಣಾಧಿಕಾರಮ್ ಶೊನ್ನ ವಿಡಂಗಳೋಡೇ ವಿರೋಧಿ ಯಾದೋ ? –ಎನ್ರಿಲ್, "ದುರ್ಲಭೋ ಮಾನುಷೋದೇಹಃ", "ಮಾನುಷ್ಯಂ ಪ್ರಾಪ್ಯಲೋಕೇಽಸ್ಮಿನ್" ಇತ್ಯಾದಿಗಳಿಪ್ಪಡಿಯೇ ಸ್ಥಾವ-ರಾದಿ ದಶೈಕಳಿಸ್ಪ ಮಹಾಲಾಭತ್ತೈಯುಮ್ "ವಿಚಿತ್ರಾ ದೇಹ ಸಂಪತ್ತಿಃ**

**ಈಶ್ವರಾಯ ನಿವೇದಿತುಮ್" -ಇತ್ಯಾದಿಕಳಿಲ್ ಚೊನ್ನ ವಳಿತಪ್ಪಿನಾಲ್ ಉಳ್ಳ ಅನರ್ಥತ್ತೈಯುಮ್ ನಿಷ್ಪ್ರೈಪ್ಪಿಕ್ಕೈಯಾಲೇ ನರಶಬ್ದಂ ಸಪ್ರಯೋಜನಮ್.**

**ಆನಾಲುಮ್**=ಆದರೂ, **'ಯಃ'-ಎನ್ಗಿರುವಳವೇ**='ಯಃ'(ಯಾವ ಒಬ್ಬನು) ಎಂದು ಹೇಳುವಲ್ಲಿಯೇ, **ಅನ್ವೈಯಾದೋ** = ಈ ಅರ್ಥವು ಕೂಡುವುದಿಲ್ಲವೋ ? **'ನರಃ' -ಎನ್ರದು**='ನರಃ' ಎಂದು ಮತ್ತೆ ಹೇಳುವುದು **ಮಿಗುದಿಯನ್ರೋ**=ಅಧಿಕವಲ್ಲವೋ ? **ಇದು ತಾನ್**=ಈ 'ನರಃ' ಎಂಬ ಶಬ್ದವು (ಲೋಕಕಂಟಕನಾದ ರಾವಣನ ಕಾಟದಿಂದ ತಮ್ಮನ್ನು ಪಾರುಮಾಡ ಬೇಕೆಂದು ಶ್ರೀಮನ್ನಾರಾಯಣನಲ್ಲಿ ಸಿದ್ಧಗಂಧರ್ವ ಯಕ್ಷಾದಿಗಳೂ ಶರಣು ಹೋದ ಸನ್ನಿವೇಶವನ್ನು ತಿಳಿಸುವ ಶ್ರೀಮದ್ರಾಮಾಯಣದಲ್ಲಿನ) **ಸಿದ್ಧ-ಗಂಧರ್ವ ಯಕ್ಷಾಶ್ಚ**=ಸಿದ್ಧರೂ, ಗಂಧರ್ವರೂ, ಮತ್ತು ಯಕ್ಷರೂ, **ತ್ವಾಂ** =ನಿನ್ನನ್ನು, **ಶರಣಂಗತಾಃ** = ಶರಣುಹೋಗಿದ್ದಾರೆ (ಎಂದು ಹೇಳುವ ವಾಕ್ಯದಿಂದಲೂ), **"ತತ್** = ಬ್ರಹ್ಮೋಪಾಸನೆಯು, **ಉಪರ್ಯಪಿ**= ನಮಗೆ ಮೇಲೆ ಸ್ವರ್ಗಾದಿಲೋಕಗಳಲ್ಲಿರುವ ದೇವತೆಗಳಿಗೂ ಕೂಡ ವುಂಟೆಂದು, **ಬಾದರಾಯಣಃ** = ಶ್ರೀವ್ಯಾಸಮಹರ್ಷಿಯು ಹೇಳುತ್ತಾರೆ. ಏಕೆಂದರೆ, **ಸಂಭವಾತ್** = ಅರ್ಥಿತ್ವ, ಸಾಮರ್ಥ್ಯಗಳೆರಡೂ ಅವರಿಗೂ ಮನುಷ್ಯರ ಹಾಗೆ ಇರುವುದರಿಂದ" **ಎನ್ರುಮ್** = ಎಂದು ಹೇಳುವ (ಬ್ರಹ್ಮಸೂತ್ರದ ವಾಕ್ಯದಿಂದ ತಿಳಿದುಬರುವ) **ದೇವಾದಿಗಳುಕ್ಕುಂ** = ದೇವಾದಿಗಳಿಗೂ '**ಪರಮಪುರುಷ ಸಮಾಶ್ರಯಣಾಧಿಕಾರಮ್** = ಪರಮ ಪುರುಷನನ್ನು ಆಶ್ರಯಿಸುವಿಕೆಯು ಉಂಟೆಂದು, **ಶೊನ್ನ**=ಹೇಳಿದ, **ಇಡಂ-ಗಳೋಡೇ**=ವಾಕ್ಯಗಳೊಂದಿಗೆ, **ವಿರೋಧಿಯಾದೋ**=ವಿರೋಧವಿಲ್ಲವೋ? **-ಎನ್ರಿಲ್** = ಎಂದರೆ, (**ದೇಹಿನಾಂ** = ದೇಹಪಡೆಯುವ ಚೇತನರಿಗೆ, **ಕ್ಷಣಭಂಗುರಃ**=ಕೆಲಕಾಲ ಮಾತ್ರವಿದ್ದು ನಾಶವಾಗುವ) **ಮಾನುಷಃ**= ಮನುಷ್ಯನ, **ದೇಹಃ**=ದೇಹವನ್ನು ಪಡೆಯುವಿಕೆಯಾದರೋ, **ದುರ್ಲಭಃ** =ಕಷ್ಟಸಾಧ್ಯವಾದುದು. (**ತತ್ರಾಪಿ** = ಆ ಮನುಷ್ಯದೇಹ ಪಡೆದಾಗಲೂ, **ವೈಕುಂಠಪ್ರಿಯದರ್ಶನಂ** = ಆನಂದದಾಯಕವಾದ ಯಾವ ವಿಕಾರಕ್ಕೂ

ಒಳಗಾಗದ ಭಗವಂತನ ಸಾಕ್ಷಾತ್ಕಾರ ಪಡೆಯುವಿಕೆಯಾದರೋ, **ಧುರ್ಲಭ** ಮತ್ತೂ ಕಷ್ಟಸಾಧ್ಯವಾದುದು)," **ಅಸ್ಮಿನ್ ಲೋಕೇ** = ಈ ಲೋಕದಲ್ಲಿ, **ಮಾನುಷ್ಯಂ ಪ್ರಾಪ್ಯ** = ಮನುಷ್ಯ ದೇಹವನ್ನು ಹೊಂದಿ, (**ಮೂಕೋವಾ** ಮೂಗನಾಗಿರಲಿ, **ವಾ** = ಅಥವಾ. **ಬಧಿರೋಽಪಿ** = ಕಿವುಡನಾಗಿರಲಿ, ಯಾರು, **ಸಂಸಾರಾತ್** = ಜನ್ಮಮರಣಚಕ್ರದಿಂದ ಕೂಡಿದ ಸಂಸಾರದಿಂದ **ನಾಪಕ್ರಾಮತಿ** = (ಬಿಡುಗಡೆ ಹೊಂದುವ ಸಾಧನವನ್ನೆಸಗಿ) ದೂರನಾಗುವುದಿಲ್ಲವೋ **ಸಖಲು** = ಅವನಾದರೋ **ಬ್ರಹ್ಮಹಾಭವೇತ್** = ಆತ್ಮಹತ್ಯೆ ಮಾಡಿಕೊಂಡವ-ನಾಗುತ್ತಾನೆ)," **ಇತ್ಯಾದಿಗಳಿಲ್ ಪಡಿಯೇ** = ಇದೇ ಮೊದಲಾದ ಪುರಾಣ-ವಚನಗೆಳಲ್ಲಿ ಹೇಳಿರುವಂತೆಯೇ, **ಸ್ಥಾವರಾದಿದಶೈ ಕಳಿನ್ದ** = ವೃಕ್ಷವೇ ಮೊದಲಾದ ಸ್ಥಾವರಗಳಾಗಿರುವ ಸ್ಥಿತಿಯನ್ನು ಕಳೆದುಕೊಂಡವನಾಗಿ, **ಮಹಾಲಾಭತ್ತೈಯುಮ್** = ಅತಿ ಮಹತ್ತರವಾದ ಲಾಭವನ್ನೂ; "**ವಿಚಿತ್ರಾದೇಹಸಂಪತ್ತಿಃ** = ನಾನಾ ತರಹವಾದ ದೇಹವನ್ನು ಪಡೆದು ಕೊಂಡಿರುವಿಕೆಯಾದರೋ; **ಈಶ್ವರಾಯ** = ಪರಮೇಶ್ವರನಿಗೆ, **ನಿವೇದ-ಯಿತುಂ** = (ಚೇತನನನ್ನು) ಅರ್ಪಿಸಿಕೊಳ್ಳಲು" **ಇತ್ಯಾದಿಗಳಿಲ್** = ಇದೇ ಮೊದಲಾದ ವಾಕ್ಯಗಳಲ್ಲಿ, **ಚೊನ್ನ** = ಹೇಳಿದ, **ವಳಿತಪ್ಪಿನಾಲ್** = ದಾರಿತಪ್ಪಿದರೆ, **ಉಳ್ಳ** = ಉಂಟಾಗುವ, **ಅನರ್ಥತ್ತೈಯುಂ** = ಅನರ್ಥ-ವನ್ನೂ, **ನಿನೈಪ್ಪಿಕ್ಕೈಯಾಲೇ** = ಸ್ಮರಣೆಗೆ ತರುವುದರಿಂದಲೂ, **ನರಶಬ್ದಂ** '**ನರಃ**' = ಎಂಬ ಶಬ್ದವು, **ಸಪ್ರಯೋಜನಮ್** = ಪ್ರಯೋಜನವುಳ್ಳದು-ದಾಗಿದೆ.

**ಇದು ದೇವಾದಿಗಳುಕ್ಕುಂ ವ್ಯವಚ್ಛೇದಕಮನ್ರು, ಕರ್ಮಭೂಮಿ ಗತರಾನ ಉಚಿತಾಧಿಕಾರಿಗಳೈ ಮುನ್ನಿಟ್ಟು ದೇವಾದಿಗಳೈಯುಮ್ ಉಪಲಕ್ಷಿಕ್ಕಿರದು. ಇಙ್ಗು ನರಶಬ್ದಂ ಯೋಗತ್ತಾಲೇ ಆತ್ಮವಾಚಿ-ಯಾಯ್ ವಿಧಿಸ್ವಭಾವತ್ತಾಲೇ ಶಾಸ್ತ್ರವಶ್ಯರೆಲ್ಲಾರೈಯುಮ್ ಕಾಟ್ಟು ಕಿರದಾಗವುಮಾಮ್: ಯಾವನೊರು ನರನ್ ಎನ್ಗಿರವಿತ್ತಾಲ್ ಎಲ್ಲಾರು-ಕ್ಕುಮ್ ನಿನೈವುಕೂಡಾದು, ಇವ್ವಧಿಕಾರಿ ದುರ್ಲಭನ್ –ಎನ್ಗಿರ ಅರ್ಥತ್ತೈಯುಮ್ ತೋತ್ತುಕಿರದು.**

**ಇದು**--ಈ ವರಾಹ ಚರಮಶ್ಲೋಕದಲ್ಲಿರುವ 'ನರ' ಶಬ್ದವು, **ದೇವಾದಿಗಳುಕ್ಕುಂ ವ್ಯವಚ್ಛೇದಕಮನ್ರು**=ದೇವಾದಿಗಳಿಗನ್ವಯಿಸುವುದಿಲ್ಲ-ವೆಂದು ತಿಳಿಯಬಾರದು, **ಕರ್ಮಭೂಮಿಗತರಾನ**=ಕರ್ಮಭೂಮಿಯಲ್ಲಿ ಜನ್ಮತಾಳಿರುವ, **ಉಚಿತಾಧಿಕಾರಿಗಳೈಮುನ್ನಿಟ್ಟು** = (ಪೂರ್ವಜನ್ಮದಲ್ಲಿ ಮಾಡಿದ ಯಾವುದಾದರೊಂದು ಪುಣ್ಯವಿಶೇಷದಿಂದ, ಈ ಜನ್ಮ ಪಡೆಯುವಲ್ಲಿ, ಮಧುಸೂದನನಕಟಾಕ್ಷಕ್ಕೆ ಪಾತ್ರರಾದ,) ಶರಣಾಗತಿಮಾಡಲು ಯೋಗ್ಯರಾದ ಅಧಿಕಾರಿಗಳನ್ನು ಮುಂದಿಟ್ಟುಕೊಂಡು, **ದೇವಾದಿಗಳೈಯುಂ**=[ಮೋಕ್ಷ ಪಡೆಯಬೇಕೆಂದು ಆಸೆಯುಳ್ಳ] ದೇವಾದಿಗಳನ್ನೂ, **ಉಪಲಕ್ಷಿಕ್ಕಿರದು**= ಲಕ್ಷೀಕರಿಸುತ್ತದೆ. **ಇಙ್ಗು** = ಈ ಸನ್ನಿವೇಶದಲ್ಲಿ **ನರಶಬ್ದಂ**='ನರಃ' -ಎನ್ನುವ ಶಬ್ದವಾದರೋ, **ಯೋಗತ್ತಾಲೇ**='ರೀಙ್-ಕ್ಷಯೇ, ನ ವಿದ್ಯತೇ ಕ್ಷಯಃ ಯಸ್ಯ' -ಎಂಬವ್ಯುತ್ಪತ್ತಿಯಿಂದ, 'ಕ್ಷಯ ಅಥವಾ ನಾಶವಿಲ್ಲದವನು ನರ' ಎಂಬ ಯೌಗಿಕ ಅರ್ಥದಿಂದ, **ಆತ್ಮವಾಚಿಯಾಮ್**=(ನಾಶವಿಲ್ಲದ) ಆತ್ಮನನ್ನೇ ಬೋಧಿಸುವುದಾಗಿ, **ವಿಧಿಸ್ವಭಾವತ್ತಾಲೇ** = ಭಗವಂತನನ್ನು ಸ್ಮರಣಪೂರ್ವಕವಾಗಿ ಶರಣುಹೋಗಬೇಕೆಂದು ವಿಧಿಸಿರುವುದರಿಂದ, **ಶಾಸ್ತ್ರ-ವಶ್ಯರೆಲ್ಲಾರ್ಕ್ಕೈಯುಮ್** = ಶಾಸ್ತ್ರದಲ್ಲಿ ನಂಬಿಕೆಯಿಟ್ಟು, ಆ ಮಾತಿಗೆ ಕಟ್ಟುಬೀಳುವವರೆಲ್ಲರನ್ನೂ, **ಕಾಟ್ಟುಕಿರದಾಗವುಮಾಮ್** = ತೋರಿಸಿ ಕೊಡುವುದಾಗಿರುತ್ತದೆ. **ಯಾವನೊರು ನರನ್**='ಯಃ ನರಃ' -'ಯಾವ-ನೊಬ್ಬ ನರನೂ', **ಎನ್ಗಿರವಿತ್ತಾಲ್**=ಎಂದು ಹೇಳಿರುವುದರಿಂದ, **ಎಲ್ಲಾ-ರುಕ್ಕುಮ್**=ಶಾಸ್ತ್ರದಲ್ಲಿ ನಂಬಿಕೆ ಇಲ್ಲದೆ, ಅನಧಿಕಾರಿಗಳಾದ, ಎಲ್ಲರಿಗೂ, **ನಿನೈವುಕೂಡಾದು** = ಸ್ಮರಣೆ ಉಂಟಾಗುವುದೆಂದು ಅನ್ವಯಿಸಬಾರದು. (ಈ 'ಯೋ ನರಃ' ಎಂಬ ಶಬ್ದವು), **ಇವ್ವಧಿಕಾರಿ** = ಈ ಭಗವಂತನಲ್ಲಿ ಮೋಕ್ಷಾರ್ಥವಾಗಿ ಮೊರೆಯಿಡುವ ಅಧಿಕಾರಿಯು, **ದುರ್ಲಭನ್** = ಬಹಳ ಅಪರೂಪ **ಎನ್ಗಿರ** = ಎಂಬ, **ಅರ್ಥತ್ತೈಯುಮ್** = ಅರ್ಥವನ್ನೂ, **ತೋತ್ತುಕಿರುದ**=ತೋರಿಸುತ್ತದೆ.

**ಇಪ್ಪಡಿಕಾಲತ್ತೈಯುಮ್ ಅಧಿಕಾರತ್ತೈಯುಮ್ ಶೋಧಿತ್ತು,**

**ಅಕಿಂಚನತಮನಾನು ಇವ್ವಧಿಕಾರಿಯಿನುಡ್ಡೈಯ ಕೃತ್ಯವಿಶೇಷತ್ತೈ ಅರುಳಿಚ್ಚೈಯ್‌ಕಿರಾನ್.**

**ಇಪ್ಪಡಿ** = ಈ ಮೇಲೆ ಹೇಳಿದ ರೀತಿಯಲ್ಲಿ, **ಕಾಲತ್ತೈಯುಮ್** = ಭಗವಂತನನ್ನು ಸ್ಮರಣಪೂರ್ವಕವಾಗಿ ಶರಣುಹೋಗಲು **ಉಚಿತವಾದ** ಸಮಯವನ್ನೂ, **ಅಧಿಕ್ಕಾರತ್ತೈಯುಮ್** = (ಅದಕ್ಕೆ ಬೇಕಾದ) ಅಧಿಕಾರವನ್ನೂ, **ಶೋಧಿತ್ತು** = ವಿಚಾರಣೆಮಾಡಿ, **ಅಕಿಂಚನತಮನಾನ್** = ಶರಣಾಗತಿಯನ್ನು ಮಾಡಲು ಅವಶ್ಯಕವಾದ ಅತಿಶಯವಾದ ಆಕಿಂಚನ್ಯವುಳ್ಳ, **ಇವ್ವಧಿಕ್ಕಾರಿಯಿನುಡ್ಡೈಯ** = ಈ ಅಧಿಕಾರಿಯು ಮಾಡಬೇಕಾದ, **ಕೃತ್ಯವಿಶೇಷತ್ತೈ** = ವಿಶೇಷವಾದ ಕೃತ್ಯಗಳನ್ನು, **ಅರುಳಿಚ್ಚೈಯ್‌ಗಿರಾನ್** = (ವರಾಹಸ್ವಾಮಿಯು, ಮುಂದೆ,) ಕೃಪೆಗೈದು ತಿಳಿಸುತ್ತಾನೆ.

**'ಸ್ಮರ್ತಾ' – ಉಪಾಸನಂ ಪೋಲೇ ಪ್ರಪದನಮುಮ್ ಶಾಸ್ತ್ರಜನ್ಯ ಜ್ಞಾನತ್ತಳವನ್ರಿಕ್ಕೇ "ಮಾಮೇಕಂ ಶರಣಂ ವ್ರಜ" ಎನ್ಗಿರಪಡಿಯೇ ವಿಧೇಯ ಮಾಯಿರುಪದೊರು ಸ್ಮೃತಿವಿಶೇಷಮಾಗೈಯಾಲೇ. ಇಂಗೆ, ಅವಿಧೇಯ ಜ್ಞಾನವಾದಿಗಳುಕ್ಕು ಅವಕಾಶಮಿಲ್ಲೈ.**

**'ಸ್ಮರ್ತಾ'** = 'ಭಗವಂತನನ್ನು ಸ್ಮರಣೆಮಾಡುವವನು' –ಎಂದು ಹೇಳಿರುವುದರಿಂದ, **ಉಪಾಸನಂಪೋಲೇ** = ಭಕ್ತಿಯೋಗದಲ್ಲಿನ ಪರಮಾತ್ಮೋಪಾಸನೆಗಳಂತೆಯೇ, **ಪ್ರಪದನಮುಂ** = ಶರಣಾಗತಿಯೂ **ಶಾಸ್ತ್ರಜನ್ಯಜ್ಞಾನತ್ತಳವೆನ್ರಿಕ್ಕೆ** = (ಭಕ್ತಿಯೋಗಕ್ಕೆ ಅತ್ಯವಶ್ಯಕವಾದ) ಶಾಸ್ತ್ರಾಧ್ಯಯನಗಳಿಂದ ಉಂಟಾಗುವ ಜೀವಪರಮಾತ್ಮರ ಸ್ವಸ್ವರೂಪಜ್ಞಾನಾದಿಗಳನ್ನು ಅವಶ್ಯವಾಗಿ ತಿಳಿದಿರಲೇಬೇಕೆಂಬ ವಿಷಯವೊಂದನ್ನು ಬಿಟ್ಟು, **"ಮಾಮೇಕಂಶರಣಂವ್ರಜ"** = "ನನ್ನೊಬ್ಬನನ್ನೇ ಮರೆಹೋಗು" –(ಎಂದು ಕೃಷ್ಣ ಪರಮಾತ್ಮನು ಭಗವದ್ಗೀತೆಯಲ್ಲಿ) **ಎನ್ಗಿರಪಡಿಯೇ** = ಹೇಳಿರುವಂತೆಯೇ, **ವಿಧೇಯ ಮಾಯಿರುಪ್ಪದೊರು ಸ್ಮೃತಿವಿಶೇಷಮಾಗೈಯಾಲೇ** = ಅನುಷ್ಠಿಸಿಯೇತೀರಬೇಕಾದ ಒಂದು ಸ್ಮರಣವಿಶೇಷವಾದುದರಿಂದ, **ಇಂಗೆ** =

ಈ ಪ್ರಕರಣದಲ್ಲಿ, ಅವಿಧೇಯಜ್ಞಾನವಾದಿಗಳುಕ್ಕು—(ಭಗವಂತನಿಗೆ ನಾನು ದಾಸ, ಅವನು ನನ್ನನ್ನು ತನ್ನ ನಿರ್ಹೇತುಕವಾದ ಕರುಣೆಯಿಂದಲೇ ಮೋಕ್ಷವನ್ನೂ ಅನುಗ್ರಹಿಸುತ್ತಾನೆ, ಆದುದರಿಂದ ಮೋಕ್ಷಾರ್ಥವಾಗಿ ನಾವು ಶರಣಾಗತಿ ಮಾಡಬೇಕಾಗಿಲ್ಲ ಎಂದಾಗಲೀ, ಅಥವಾ ಭಗವದ್ರಾಮಾನುಜರೇ ನಮಗಾಗಿ ಶರಣಾಗತಿ ಮಾಡಿದ್ದಾರೆ, ಅವರಿಗೆ ನಾವು ಸೇರಿದವರು –ಎಂಬ ಜ್ಞಾನಮಾತ್ರದಿಂದಲೇ ನಮಗೆ ಮುಕ್ತಿ ಉಂಟಾಗುತ್ತದೆ, ಅದಕ್ಕೆ ಬೇರೆಯಾಗಿ ಶರಣಾಗತಿ ಮಾಡಬೇಕಾದುದಿಲ್ಲ ಎಂದು ವಾದಿಸಿ 'ಮಾ ಮೇಕಂ ಶರಣಂ ವ್ರಜ' -ಎಂಬಲ್ಲಿ, 'ಶರಣಂ ವ್ರಜ' -ಶರಣುಹೋಗು -ಎಂಬಲ್ಲಿನ ಗತ್ಯರ್ಥಕ. ವಾದ 'ವ್ರಜ'ಧಾತುವಿಗೆ, ಜ್ಞಾನಾರ್ಥವನ್ನು ಹೇಳಿ 'ನಾನೇ ರಕ್ಷಕನೆಂದು ತಿಳಿ' -ಎಂದು ಅರ್ಥಮಾಡಿ, 'ಜ್ಞಾನಾನ್ಮುಕ್ತಿಃ' -ಕೇವಲ ಈ ಜ್ಞಾನದಿಂದಲೇ ಮುಕ್ತಿ -ಎಂದು ಹೇಳಿ, ಇಲ್ಲಿನ 'ವ್ರಜ' ಶಬ್ದವು, ಅನುಷ್ಠಿಸಬೇಕಾದ ಯಾವ ಒಂದು ಕ್ರಿಯೆಯನ್ನೂ ಹೇಳುವುದಿಲ್ಲವೆಂದು ವಾದಿಸುವ –ಅವಿಧೇಯ ಜ್ಞಾನವಾದಿಗಳಿಗೆ, ಅವಕಾಶಮಿಲ್ಲೈ !......ಅವರ ಅಭಿಪ್ರಾಯವನ್ನು ಮಂಡಿಸಲು ಅವಕಾಶವಿರುವುದಿಲ್ಲ.

**ಇಂದ ಸ್ಶ್ರುತಿಯಿಲ್, ಆವೃತ್ತಿಕ್ಕು ಜ್ಞಾಪಕಮಿಲ್ಲಾಮೈಯಾಲುಂ, ಪ್ರಕರಣಾಂತರಂಗಳಿಲೇ ಸಕೃತ್‌ಶಬ್ದಾದಿಗಳಾಲ್ ಅನಾವೃತ್ತಿ ಕಾಣ್ಗೈ-ಯಾಲುಮ್, ಇಂಗೇ ಸರ್ವಕಾಲತ್ತಿಲುಂ ಸರ್ವರುಕ್ಕುಂ 'ಮಾಂ' ಎನ್ಗೈಯಾಲುಂ, ಪ್ರಾರಬ್ಧ ಶರೀರಾವಸಾನತ್ತಿಲ್ ಮೋಕ್ಷಮೆನ್ರು ಕೋಟ್ರುಕಿರ ಸ್ವಾರಸ್ಯತ್ತುಕ್ಕು ಬಾಧಕಮಿಲ್ಲಾಮೈಯಾಲುಮ್, ಸ್ವಯತ್ನಸಾಧ್ಯ – ಅಂತಿಮಪ್ರತ್ಯಯ ನಿರಪೇಕ್ಷತ್ತೈ ಶೊಲ್ಲುಕೈಯಾಲುಂ, 'ತತಃ –ಎನ್ಗಿರಶಬ್ದಂ ಆವೃತ್ತಿಕ್ಕು ವಿಲಕ್ಕಾಗ ತೋಟ್ರುಕೈಯಾಲುಂ, ಇದು ಉಪಾಸನಾದಿ ಶಾಸ್ತ್ರಂಗಳಿಲ್ ಶೊಲ್ಲುಕಿರ ಸ್ಶ್ರುತಿಯನ್ರು.**

**ಇಂದ ಸ್ಶ್ರುತಿಯಿಲ್** =ಈ ವರಾಹ ಚರಮಶ್ಲೋಕದಲ್ಲಿ, **ಆವೃತ್ತಿಕ್ಕು** =ಮತ್ತೆ ಮತ್ತೆ ಅನುಸಂಧಾನ ಮಾಡಲು, **ಜ್ಞಾಪಕಮಿಲ್ಲಾಮೈಯಾಲುಂ** =ತಿಳುವಳಿಕೆ ನೀಡಿಲ್ಲದಿರುವುದರಿಂದಲೂ, **ಪ್ರಕರಣಾಂತರಂಗಳಿಲೇ**=

(ಪರಮಾತ್ಮನು, ರಾಮಾವತಾರಾದಿಕಾಲಗಳಲ್ಲಿ 'ಶರಣು' -ಎಂದು ಒಮ್ಮೆ ತನ್ನನ್ನು ಆಶ್ರಯಿಸಿದವಂಗೂ ಸರ್ವವಿಧದಲ್ಲೂ ಮೋಕ್ಷವನ್ನು ಕೊಡುವೆನೆಂದು ಹೇಳಿರುವ, ಶ್ರೀರಾಮ ಚರಮಶ್ಲೋಕವೇ ಮೊದಲಾದ) ಇತರ ಪ್ರಕರಣಗಳಲ್ಲಿ, **'ಸಕೃತ್' ಶಬ್ದಾದಿಗಳಾಲ್** = 'ಸಕೃತ್' (ಒಮ್ಮೆ) -ಮುಂತಾದ ಶಬ್ದಗಳಿಂದ, **ಅನಾವೃತ್ತಿ** = ಮತ್ತೆ ಮತ್ತೆ ಅನುಷ್ಠಿಸಬೇಕೆಂದು ಹೇಳದಿರುವುದು, **ಕಾಣ್ಗೈಯಾಲುಂ** = ಕಾಣುವುದರಿಂದಲೂ, **ಇಂಗೇ** = ಈ ವರಾಹ ಚರಮಶ್ಲೋಕದಲ್ಲಿ, **ಸರ್ವಕಾಲತ್ತಿಲುಂ** = (ನಿಷ್ಕೃಷ್ಟವಾದ ಸಮಯನಿರ್ದೇಶವಿಲ್ಲದೆ) ಎಲ್ಲ ಕಾಲದಲ್ಲಿಯೂ, **ಸರ್ವರುಕ್ಕುಂ** = (ಯಾವ ಭೇದವೂ ಇಲ್ಲದೆ) ಎಲ್ಲ ಚೇತನನಿಗೂ, **'ಮಾಂ' -ಎನ್ಗೈಯಾಲುಂ** = "ನನ್ನನ್ನು" -(ಸತ್ಪ್ರ್-ಸ್ಮರಿಸುವವನನ್ನು)ಎಂದು ಹೇಳಿರುವುದರಿಂದಲೂ, **ಪ್ರಾರಬ್ಧಶರೀರಾವಸಾನತ್ತಿಲ್** = ಪ್ರಾರಬ್ಧಕರ್ಮದಿಂದುಂಟಾಗಿರುವ ಈ ಶರೀರವು ಬಿದ್ದೊಡನೆ, **ಮೋಕ್ಷಮೆನ್ರು** = ಕರ್ಮಬಂಧದಿಂದುಂಟಾಗುವ ಜನ್ಮ-ಮರಣ ಚಕ್ರದಿಂದ ಬಿಡುಗಡೆ ಹೊಂದಬಹುದೆಂದು, **ತೊಟ್ರಿಕಿರ** = ತಿಳಿದು ಬರುವ, **ಸ್ವಾರಸ್ಯತ್ತುಕ್ಕು** = ಸ್ವಾರಸ್ಯಕ್ಕೆ, **ಬಾಧಕಮಿಲ್ಲಾಮೈಯಾಲುಂ** = ಬಾಧಕವಿಲ್ಲದಿರುವಿಕೆಯಿಂದಲೂ; **ಸ್ವಯತ್ನಸಾಧ್ಯ** = ಚೇತನನು ತನ್ನ ಪ್ರಯತ್ನದಿಂದಲೇ ಪಡೆಯಲು ಸಾಧ್ಯವಾದ, **ಅಂತಿಮಪ್ರತ್ಯಯ** = ದೇಹ ಬಿದ್ದುಹೋಗುವ ಕೊನೆಯ ಕಾಲದಲ್ಲಿ ಇರಬೇಕಾದ ಪರಮಾತ್ಮ ವಿಷಯವಾದ ಜ್ಞಾನದ, ನಿರಪೇಕ್ಷತ್ವೈ = ಅವಶ್ಯಕತೆಯಿಲ್ಲವೆಂಬುದು, **ಶೊಲ್ಲುಗೈಯಾಲುಂ** = ಹೇಳಲ್ಪಟ್ಟಿರುವುದರಿಂದಲೂ, **ತತಃ** = (ಒಮ್ಮೆ ಪರಮಾತ್ಮನನ್ನು ಸ್ಮರಣೆ ಮಾಡಿದ) 'ಬಳಿಕ' ಎನ್ನಿಗಿರಶಬ್ದಂ = ಎನ್ನುವ ಪದವು, **ಆವೃತ್ತಿಕ್ಕು** = ಮತ್ತೆ ಮತ್ತೆ ಅನುಸಂಧಾನ ಮಾಡುವಿಕೆಯನ್ನು, **ವಿಲಕ್ಕಾಗ** = ತಳ್ಳಿಹಾಕುವಂತೆ, **ತೋಟ್ರುಗೈಯಾಲುಂ** = ತೋರುವುದರಿಂದಲೂ, **ಇದು** = ಈ ವರಾಹ ಚರಮಶ್ಲೋಕವು, **ಉಪಾಸನಾದಿ ಶಾಸ್ತ್ರಂಗಳಿಲ್** = ಭಕ್ತಿಯೋಗದ ಉಪಾಸನಾದಿಗಳನ್ನು ಹೇಳುವ ಶಾಸ್ತ್ರಗಳಲ್ಲಿ, **ಶೊಲ್ಲುಗಿರ** = ಹೇಳುವ, **ಸ್ಮೃತಿಯನ್ರು** = ಸ್ಮೃತಿಯಲ್ಲ.

ಮೋಕ್ಷವನ್ನು ಪಡೆಯುವುದಕ್ಕೆ ಶ್ರುತಿ - ಸ್ಮೃತೀತಿಹಾಸಗಳಿಂದ

ತಿಳಿದುಬರುವ ಮಾರ್ಗವು ಎರಡು : ಮೊದಲನೆಯದು ಕರ್ಮಯೋಗ, ಜ್ಞಾನಯೋಗ ಸಹಕೃತವಾದ ಭಕ್ತಿಯೋಗ, ಎರಡನೆಯದು ಶರಣಾಗತಿ. [ಈ ಎರಡು ಉಪಾಯಗಳ ವಿಷಯವೂ, ಈ ಪುಸ್ತಕದ ಉಪೋದ್ಘಾತ ಭಾಗದ ೩, ೪ ಮತ್ತು ೫ನೆಯ ಪುಟಗಳಲ್ಲಿ ವಿವರವಾಗಿ ತಿಳಿಸಲ್ಪಟ್ಟಿದೆ].

ಭಕ್ತಿಯೋಗನಿಷ್ಠನಿಗೆ, ಉಪಾಸನೆ ಕೈಗೊಂಡೊಡನೆ ಅವನ ಆಗಾಮಿ ಮತ್ತು ಸಂಚಿತಕರ್ಮಗಳೆರಡೂ ಅಳಿದುಹೋಗುತ್ತದೆ. ಆದರೆ ಪ್ರಾರಬ್ಧ ಕರ್ಮವನ್ನು ಮಾತ್ರ, ಅವನು ಅನುಭವಿಸಿಯೇ ತೀರಬೇಕು. **"ಪ್ರಾರಬ್ಧ ಕರ್ಮಣಾಂ ಭೋಗಾದೇವಕ್ಷಯಃ"** ಈ ಪ್ರಾರಬ್ಧ ಕರ್ಮವು ಉಪಾಸಕನ ಅದೇ ಜನ್ಮದಲ್ಲಿಯೇ ತೀರಬಹುದು. ಅಥವಾ ಜನ್ಮಾಂತರಗಳಲ್ಲಿ ತೀರಬಹುದು. ಆದುದರಿಂದ ಉಪಾಸಕನಿಗೆ ಉಪಾಸನೆ ಪ್ರಾರಂಭಿಸಿದ ದೇಹಾಂತ್ಯದಲ್ಲಿಯೇ ಮೋಕ್ಷವೆಂಬುದಿಲ್ಲ. ಅದೂ ಅಲ್ಲದೆ ಇವನ ಉಪಾಸನೆ ಒಂದು ಕ್ಷಣ ಒಮ್ಮೆ ಅನುಷ್ಠಿಸಿ ನಿಲ್ಲಿಸುವಂತಿಲ್ಲ. ನಿರಂತರವಾಗಿ (ಮತ್ತೆ ಮತ್ತೆ) ಉಪಾಸನೆ ಮಾಡುತ್ತಲೇ ಇರಬೇಕು. ಅವನು ಮಾಡುವ ಉಪಾಸನಾಬಲದಿಂದ, ಸ್ವಯತ್ನ ಸಾಧ್ಯವಾಗಿ, ಉಪಾಸಕನಿಗೆ ದೇಹಾವಸಾನ ಸಮಯದಲ್ಲಿ ಅಂತಿಮ ಪ್ರತ್ಯಯ ಅಥವ ಕೊನೆಯ ಕಾಲದಲ್ಲಿ ಭಗವಂತನ ಚಿಂತನೆಯು ಅತ್ಯವಶ್ಯಕ. ಇದರಿಂದಲೇ ಇವನಿಗೆ ಪ್ರಾರಾಬ್ಧ ಕರ್ಮವು ಕಳೆದಿದ್ದರೆ ತಕ್ಷಣದಲ್ಲಿ ಮೋಕ್ಷ ಲಭಿಸುತ್ತದೆ. ಕರ್ಮವು ಕಳೆಯದಿದ್ದರೆ ಮುಂದಿನ ಜನ್ಮದಲ್ಲಿ ಇವನ ವಿದ್ಯಾ ಉಪಾಸನೆಯು ಮುಂದುವರಿಸುವುದಕ್ಕೆ ಸಹಾಯವಾಗುತ್ತದೆ. ಆದುದರಿಂದ ಭಕ್ತಿಯೋಗನಿಷ್ಠನಿಗೆ ಅಂತಿಮಸ್ಮೃತಿ ಅತ್ಯವಶ್ಯಕವಾದುದು. ಈ ರೀತಿಯಾದ ಭಕ್ತಿಯೋಗಕ್ಕೆ ಈ ಮೊದಲೇ ಹೇಳಿದ ಅಧಿಕಾರಿಯನ್ನು ಬಿಟ್ಟು, ಉಳಿದವರಾದ ಸ್ತ್ರೀ ಶೂದ್ರಾದಿಗಳೂ ವೇದಾಧ್ಯಯನಾದಿಗಳನ್ನು ಮಾಡದ ತ್ರೈವರ್ಣಿಕ ಪುರುಷರೂ ಅನಧಿಕಾರಿಗಳು. ಇವರೂ ಮೋಕ್ಷವನ್ನು ಪಡೆಯಲು ಬಹಳ ಸುಲಭವಾದ ಉಪಾಯವೆಂದರೆ, ಶರಣಾಗತಿ. ಶರಣಾಗತಿಯ ವಿಷಯವನ್ನೇ ಪರಮಾತ್ಮನು ಶ್ರೀರಾಮಾವತಾರಕಾಲದಲ್ಲಿ ವಿಭೀಷಣನು ಶರಣಾಗತಿ ಮಾಡಿದ ಪ್ರಸಂಗದಲ್ಲಿ ಎಲ್ಲ ಚೇತನವರ್ಗಕ್ಕೂ ಅನ್ವಯಿಸುವಂತೆ- **'ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚಯಾಚತೇ | ಅಭಯಂ ಸರ್ವ ಭೂತೇಭ್ಯೋ ದದಾಮ್ಯೇ-**

**ತ್ವದ್ವ್ರತಂ ಮಮ ॥"** (ಯಾವ ಒಬ್ಬನು, ಒಮ್ಮೆ (ಸಕೃತ್) ನನ್ನಲ್ಲಿ ಬಂದು ಶರಣುಹೋಗಿ ನಿನ್ನನ್ನೇ ನಾನು ಸೇರಿದವನು, ನನ್ನ ರಕ್ಷಾಭರ ನಿನಗೆ ಸೇರಿದುದೆಂದು ಹೇಳುವನೋ, ಅವನಿಗೆ ಎಲ್ಲ ಚೇತನಾ ಚೇತನಗಳಿಂದಲೂ ಯಾವ ತೊಂದರೆಯೂ ಒದಗದಂತೆ ಅಭಯಪ್ರಧಾನ ಮಾಡಿ ರಕ್ಷಿಸುತ್ತೇನೆ. –ಇದೇ ನನ್ನ ವ್ರತ) –ಎಂದು ಹೇಳಿದ್ದಾನೆ. ಆದುದರಿಂದ ಈ ಶರಣಾಗತಿಗೆ ಕಾಲನಿಯಮವಿಲ್ಲ, ಅಧಿಕಾರಿನಿಯಮವಿಲ್ಲ, ಅಂದರೆ, ಜಾತಿಭೇದ, ಲಿಂಗಭೇದ ವರ್ಣಭೇದ, ಆಶ್ರಮಭೇದಗಳಿಲ್ಲದೆ ಯಾವ ಚೇತನನಾದರೂ ಈ ಶರಣಾಗತಿ-ಯನ್ನನುಷ್ಠಿಸಬಹುದು.

ಮೇಲಿನ ಈ ರಾಮಚರಮ ಶ್ಲೋಕದಲ್ಲಿ 'ಸಕೃತ್" (ಒಮ್ಮೆ) –ಎಂದು ಹೇಳಿರುವುದರಿಂದಲೂ, ವರಾಹ ಚರಮಶ್ಲೋಕದಲ್ಲಿ ಶರೀರ ಮನಸ್ಸುಗಳು 'ಸುಸ್ವಸ್ಥವಾಗಿರುವಲ್ಲಿ ಮಾತ್ರವೇ ತನ್ನನ್ನು ಚಿಂತಿಸಿದರೆ ಸಾಕು' –ಎಂದು ಹೇಳಿ ಮತ್ತೆ ಮತ್ತೆ ಆ ಚಿಂತನೆಗೆ ಭಕ್ತಿಯೋಗದಂತೆ ನಿರಂತರವಾದ ಆ ವೃತ್ತಿಯು ಹೇಳದಿರುವುದರಿಂದಲೂ, ಅಂತೆಯೇ ವರಾಹ ಚರಮಶ್ಲೋಕದಲ್ಲಿ ಈ ರೀತಿ ಒಮ್ಮೆ ಚಿಂತಿಸಿದರೆ ಸಾಕು, (ತತಃ) ಬಳಿಕ ಅವನು ದೇಹಾವಸಾನ ಕಾಲದಲ್ಲಿ ಕಲ್ಲು ಕಟ್ಟಿಗೆಗಳಂತೆ ಬಿದಿದ್ದರೂ ನಾನಾಗಿ ಅವನನ್ನು ಸ್ಮರಣೆಮಾಡಿ-ಕೊಂಡು ಬಂದು ಪರಮಗತಿಗೆ ಅವನನ್ನು ಒಯ್ಯುತ್ತೇನೆಂದು ಹೇಳಿರುವುದರಿಂದ, ಇಲ್ಲಿನ 'ತತಃ' –ಎಂಬ ಶಬ್ದವು ಆ ವೃತ್ತಿಯನ್ನು ತಳ್ಳಿಹಾಕುವುದರಿಂದಲೂ ಮತ್ತು ಭಕ್ತಿಯೋಗನಿಷ್ಠನಂತೆ ಈ ಶರಣಾಗತನಾದ ಚೇತನನಿಗೆ ಸ್ವಯತ್ನ ಸಾಧ್ಯವಾದ ದೇಹಾವಸಾನಕಾಲದಲ್ಲಿನ ಅಂತಿಮಪ್ರತ್ಯಯದ ಆವಶ್ಯಕತೆ ಇಲ್ಲದಿರುವುದರಿಂದಲೂ–ಈ ವರಾಹ ಚರಮಶ್ಲೋಕವು ಉಪಾಸನಾದಿಗಳನ್ನು ತಿಳಿಸುವ ಶಾಸ್ತ್ರಗಳನ್ನು ಬೋಧಿಸುವ ಸ್ಮೃತಿಯಲ್ಲ.

**ಇಂಗುಂ "ಸಕೃದೇವ ಪ್ರಪನ್ನಾಯ" –ಎನ್ಗಿರ ಅರ್ಥಂ ಕೊಟ್ರು ಕಿರದು. ಇದು ಪ್ರಾರ್ಥನಾಪೂರ್ವಕಭರನ್ಯಾಸಂ ಎನ್ರುಮಿಡಂ ಇದುಕ್ಕು ಮಹಾವಿಶ್ವಾಸಾದಿಕಳ್ ಅಂಗಂಗಳೆನ್ರುಮಿಡಮುವವ್ ವರ್ಣಾಶ್ರಮಾದಿ ಧರ್ಮಂಗಳಿತುಕ್ಕು ಅಂಗಗಳನ್ರಿಕ್ಕ ಸ್ವಂತಂತ್ರಾಜ್ಞೈಯಾರೇ ವರುಕಿನ್ರನ ಎನ್ನುಮಿಡಮುವಮು ಪ್ರಕರಣಾಂತರಂಗಳಿಲೇ ಕಂಡುಕೊಳ್ವದು.**

**ಇಂಗುಂ**=ಈ ವರಾಹ ಚರಮಶ್ಲೋಕದಲ್ಲಿಯೂ, 'ಸಕೃದೇವ ಪ್ರಪನ್ನಾಯ' –ಎನ್ಗಿರ='ಒಮ್ಮೆ ಶರಣುಹೋದವನಿಗೆ' ಎಂದು ಹೇಳುವ (ಶ್ರೀರಾಮ ಚರಮಶ್ಲೋಕದ) **ಅರ್ಥಂ** = ಅರ್ಥವು, **ಕೊಟ್ರಿಕಿರದು**= **ತೋರಿಬರುತ್ತದೆ**. **ಇದು**=ಈ ವರಾಹ ಚರಮಶ್ಲೋಕದಲ್ಲಿ ಹೇಳಿರುವ ಭಗವಂತನನ್ನು ಸ್ಮರಣಮಾಡುವಿಕೆಯಾದರೋ, **ಪ್ರಾರ್ಥನಾಪೂರ್ವಕ-ಭರನ್ಯಾಸಂ** = 'ನನ್ನನ್ನು ರಕ್ಷಿಸು' –ಎಂದು ಪ್ರಾರ್ಥನೆಯನ್ನು ಮಾಡಿ, ನಮ್ಮ ರಕ್ಷಣೆಯ ಹೊಣೆಯನ್ನು ಪರಮಾತ್ಮನಲ್ಲಿ ಅರ್ಪಣಮಾಡುವಿಕೆ (ಭರನ್ಯಾಸ), **–ಎನ್ರುಮಿಡಂ** = ಎಂದು ತಿಳಿಸುವ ಸಂದರ್ಭವಾಗಿದೆ. ಎಂಬುದನ್ನೂ, **ಇದುಕ್ಕು** = ಈ ರೀತಿಯಾದ ಸ್ಮರಣಪೂರ್ವಕವಾದ ಭರನ್ಯಾಸಕ್ಕೆ, **ಮಹಾವಿಶಾಸಾದಿಗಳ್ ಅಂಗಂಗಳೆನ್ರುಮಿಡಮುಮ್**= ಮಹಾವಿಶ್ವಾಸವೇ ಮೊದಲಾದುವು ಅಂಗಗಳು ಎಂದು ತಿಳಿಸುವ ವಿಷಯಗಳನ್ನೂ, **ವರ್ಣಾಶ್ರಮಾದಿ ಧರ್ಮಂಗಳ್** = ವರ್ಣ–ಧರ್ಮ, ಆಶ್ರಮ ಧರ್ಮಗಳು, **ಇದುಕ್ಕು**=ಈರೀತಿಯಾದ ಸ್ಮರಣಪೂರ್ವಕವಾದ ಶರಣಾಗತಿಗೆ, **ಅಂಗಂಗಳನ್ರಿಕ್ಕೆ**=(ಭಕ್ತಿಯೋಗವಂತೆ)ಅಂಗಗಳಾಗದಿದ್ದರೂ,**ಸ್ವತಂತ್ರಾಜ್ಞೈಯಾಲೇ** = ಭಗವಂತನ ಆಜ್ಞಾರೂಪಕವಾದ ಶ್ರುತಿ ಸ್ಮೃತಿಗಳಲ್ಲಿ ವರ್ಣಾಶ್ರಮಧರ್ಮಗಳು ಸ್ವತಂತ್ರವಾಗಿ ವಿಧಿಸಿರುವುದರಿಂದಲೇ, **ವರುಗಿನ್ರನ** =ಶರಣಾಗತನೂ ಅನುಷ್ಠಿಸಿಯೇ ತೀರಬೇಕೆಂದು ಅರ್ಥಬರುವಿಕೆಯನ್ನೂ, **ಪ್ರಕರಣಾಂತರಂಗಳಿಲೇ** = ಇತರ ಪ್ರಕರಣಗಳಲ್ಲಿ ಹೇಳಿರುವುದರಿಂದಲೇ **ಕಂಡುಕೊಳ್ವದು**=ಕಂಡು ಅರಿಯುವುದು.

ವರಾಹ ಚರಮಶ್ಲೋಕದಲ್ಲಿ 'ಮಾಂಸ್ಮರ್ತಾ' –'ನನ್ನನ್ನು ಸ್ಮರಣೆ-ಮಾಡುವವನನ್ನು' –ಎಂದು ಹೇಳುವಲ್ಲಿ ಆವರ್ತಿ ಹೇಳದಿರುವುದರಿಂದ, ಶ್ರೀರಾಮ ಚರಮಶ್ಲೋಕದಲ್ಲಿ ಹೇಳಿರುವ 'ಸಕೃದೇವ ಪ್ರಪನ್ನಾಯ'– 'ಒಮ್ಮೆ ಶರಣುಹೋದವನಿಗೂ' –ಎಂಬ ಅರ್ಥವು ತೋರಿಬಂದು, ಒಮ್ಮೆ ಸ್ಮರಣಪೂರ್ವಕವಾಗಿ ಭಗವಂತನಲ್ಲಿ ಶರಣುಹೋದವನನ್ನು, ದೇಹಾವ-ಸಾನದಲ್ಲಿ ಭಗವಂತನು ಪರಮಗತಿಗೆ ಒಯ್ಯುತ್ತಾನೆಂದು ಅರಿಯಬೇಕು.

ಈ ವರಾಹ ಚರಮಶ್ಲೋಕದಲ್ಲಿ ಹೇಳಿರುವ ಪರಮಾತ್ಮನ ಸ್ಮರಣ, ಕೇವಲ ಸ್ಮರಣಮಾತ್ರವಲ್ಲ, ಭಗವಂತನನ್ನು ಸ್ಮರಿಸುತ್ತಾ ಚೇತನನು ತನ್ನನ್ನು ರಕ್ಷಿಸಬೇಕೆಂದು ಪ್ರಾರ್ಥನೆಮಾಡಿ, ಅವನಲ್ಲಿ ತನ್ನ ರಕ್ಷಾಭರ ಸಮರ್ಪಣೆಮಾಡುವುದಾಗಿರುತ್ತದೆ. ಇದನ್ನೇ 'ನ್ಯಾಸ', 'ಭರಸಮರ್ಪಣ', 'ಶರಣಾಗತಿ', 'ಪ್ರಪತ್ತಿ'–ಮೊದಲಾದ ಶಬ್ದಗಳಿಂದ ಹೇಳುತ್ತಾರೆ. ಆದುದ-ರಿಂದಲೇ ಈ ವರಹ ಚರಮಶ್ಲೋಕದಲ್ಲಿ, ಈ ಶರಣಾಗತಿಗೆ ಬೇಕಾಗಿರುವ ಐದು ಅಂಗಗಳು ಸ್ಪಷ್ಟವಾಗಿ ತಿಳಿಸದಿದ್ದರೂ, ಇತರ ಪ್ರಕರಣಗಳಲ್ಲಿ ಪಾಂಚ-ರಾತ್ರಾದಿ ಆಗಮ ಗ್ರಂಥಗಳಲ್ಲಿ ಹೇಳಿರುವ ಮಹಾವಿಶ್ವಾಸಾದಿ ಅಂಗಗಳನ್ನು ಈ ಸ್ಮರಣರೂಪಕ್ಕೆ ಅಂಗಗಳಾಗಿ ತಿಳಿದುಕೊಳ್ಳಬೇಕು.

ಶರಣಾಗತಿಮಾಡುವವನಿಗೆ, ಶಾಸ್ತ್ರಗಳಲ್ಲಿ–ಐದು ಅಂಗಗಳನ್ನು ಪ್ರಧಾನ ವಾಗಿ ವಿಧಿಸಿದ್ದಾರೆ. ಅವು– **"ಆನುಕೂಲ್ಯಸ್ಯ ಸಂಕಲ್ಪಃ ಪ್ರಾತಿಕೂಲ್ಯಸ ವರ್ಜನಂ। ರಕ್ಷಿಷ್ಯತೀತಿ ವಿಶ್ವಾಸಃ ಗೋಪ್ತೃತ್ವವರಣಂ ತಥಾ। ಆತ್ಮನಿಕ್ಷೇಪ ಕಾರ್ಪಣ್ಯೇ ಷಡ್ವಿಧಾ ಶರಣಾಗತಿಃ ॥"** –ಎಂದು.

ಭಗವಂತನಲ್ಲಿ ಶರಣುಹೋಗುವ ಮುನ್ನ ಪ್ರಧಾನವಾಗಿ ಶರಣಾಗತಿಯ ಐದು ಅಂಗಗಳನ್ನೂ ದೃಢಪಡಿಸಿಕೊಳ್ಳಬೇಕು. ೧. **ಆನುಕೂಲ್ಯಸ್ಯಸಂಕಲ್ಪಃ** = ಭಗವಂತನಿಗೆ ಅನುಕೂಲವಾದ ಕೆಲಸವನ್ನೇ – ಅಂದರೆ ಅವನ ಆಜ್ಞಾ-ಅನುಜ್ಞಾ ಕೈಂಕರ್ಯರೂಪಗಳಾದ ವರ್ಣಾಶ್ರಮಧರ್ಮಗಳಲ್ಲಿ, ನಿತ್ಯನೈಮಿತ್ತಿಕ ಕರ್ಮಗಳನ್ನು ಮಾಡುತ್ತೇನೆ, ಭಗವಂತನಿಗೆ ವಿಶೇಷವಾಗಿ, ಸಂತೋಷವನ್ನು ಉಂಟುಮಾಡುವ ಅವನ ಭಕ್ತರ ಪರಿಚರ್ಯಾದಿಗಳನ್ನು ಮಾಡುತ್ತೇನೆಂದು ಸಂಕಲ್ಪ ಮಾಡುವುದು. ೨. **ಪ್ರಾತಿಕೂಲ್ಯಸ್ಯವರ್ಜನಂ** = ಭಗವಂತನಿಗೆ ಪ್ರತಿ ಕೂಲವಾದ ಕೆಲಸವನ್ನು ಮಾಡದಿರುವಿಕೆ, –ಅಂದರೆ, ಭಗವನ್ನಿಗ್ರಹಕ್ಕೆ ಕಾರಣವಾಗುವ ಭಗವಂತನ ಆಜ್ಞಾ, ಅನುಜ್ಞಾ ಕೈಂಕರ್ಯರೂಪವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡದಿರುವಿಕೆ, ವಿಶೇಷವಾಗಿ ಭಾಗವತಾಪಚಾರ ಗಳನ್ನು ಮಾಡುವುದೂ, ಅನ್ಯದೇವತಾ ಭಜನಾದಿಗಳನ್ನು ಮಾಡುವಿಕೆಯೇ ಮೊದಲಾದುವನ್ನು ಬಿಟ್ಟು ಅವುಗಳಿಂದ ದೂರನಾಗಿರುವುದು. ೩. **ರಕ್ಷಿಷ್ಯತೀತಿ**

**ವಿಶ್ವಾಸಃ**-ಭಗವಂತನಲ್ಲಿ ಶರಣುಹೋದವರೆ, ಅವನು ರಕ್ಷಿಸಿಯೇ ತೀರುತ್ತಾನೆಂಬ ಮಹಾವಿಶ್ವಾಸವನ್ನು ಹೊಂದಿರುವುದೂ; ೪. **ಗೋಪ್ತೃತ್ವವರಣಂ** – **ಮೋಕ್ಷವು** ಪುರುಷಾರ್ಥವಾದುದರಿಂದ, ಪುರುಷನಿಂದ ಪ್ರಾರ್ಥಿಸಿ ಪಡೆಯಲ್ಪಡ-**ಬೇಕಾದುದು**. ಆದುದರಿಂದಲೇ 'ರಕ್ಷಿಸು' –ಎಂದು ಕೇಳದವರಿಗೆ ಭಗವಂತನು, **ಮೋಕ್ಷವನ್ನು** ನೀಡುವುದಿಲ್ಲ. ಆದುದರಿಂದಲೇ **"ರಕ್ಷಾಪೇಕ್ಷಾಂ ಪ್ರತೀಕ್ಷತೇ"** = ಭಗವಂತನು, 'ನನ್ನನ್ನು ರಕ್ಷಿಸು' –ಎಂದು ಚೇತನನು ಪ್ರಾರ್ಥಿಸುವುದನ್ನೇ ಎದಿರುನೋಡುತ್ತಿರುವುದರಿಂದ, ಅವನಲ್ಲಿ 'ನೀನೇ ನನಗೆ ರಕ್ಷಕನಾಗಿರ ಬೇಕೆಂದು ಬೇಡಿ' ಅವನನ್ನು ವರಿಸುವುದು – ಮತ್ತು ೫. **ಕಾರ್ಪಣ್ಯ**=ತಾನು ಭಕ್ತಿಯೋಗಾದಿಗಳನ್ನನುಷ್ಠಿಸಲು ಶಕ್ತ-ನಲ್ಲವೆಂದೂ, ತಾನು ಅಕಿಂಚನನೆಂದೂ, ಭಗವಂತನನ್ನು ಮರೆಹೋಗುವುದನ್ನು ಬಿಟ್ಟು ಬೇರೆ ಹಾದಿಯೇ ಇಲ್ಲ– ಅನನ್ಯಗತಿಕನೆಂದೂ ತನ್ನ ಅಶಕ್ತತೆಯನ್ನು ಭಗವಂತನಲ್ಲಿ ಅರುಹುವಿಕೆ –ಈ ಐದು ಅಂಗಗಳ ಸಹಿತವಾಗಿ ತನ್ನ ರಕ್ಷಾ ಭರವನ್ನು ಪರಮಾತ್ಮನಲ್ಲಿ ಸಮರ್ಪಿಸುವುದೇ 'ಆತ್ಮ ನಿಕ್ಷೇಪ' ಅಥವಾ 'ಭರಸಮರ್ಪಣ'. ವರಾಹ ಚರಮಶ್ಲೋಕದಲ್ಲಿ ಹೇಳಿರುವ **'ಸ್ಮರ್ತಾ'** –ಎಂಬ ಪದದಲ್ಲಿ, ಮೇಲಿನ ಶರಣಾಗತಿಯು ಐದು ಅಂಗಗಳ ಸಹಿತ ಪರಮಾತ್ಮ-ನನ್ನು ಸ್ಮರಣೆಮಾಡಿ ಅವನಲ್ಲಿ ಶರಣುಹೋದವನನ್ನು, ಅವನ ದೇಹಾವಸಾನ-ದಲ್ಲಿ ಪರಮಾತ್ಮನು ಪರಮಗತಿಗೆ ಒಯ್ಯುತ್ತಾನೆಂದು ತಿಳಿಯಬೇಕು.

ವರ್ಣಾಶ್ರಮಧರ್ಮಗಳು ಭಕ್ತಿಯೋಗನಿಷ್ಠನಿಗೆ, ಭಕ್ತಿಯೋಗಕ್ಕೆ ಅಂಗವಾಗಿರುತ್ತದೆ. ಶರಣಾಗತನಿಗೆ ಅವು ಅಂಗವಲ್ಲ. ಆದರೆ ಅವು ಶ್ರುತಿ-ಸ್ಮೃತಿಗಳಲ್ಲಿ ವಿಧಿಸಲ್ಪಟ್ಟಿವೆ. ಶ್ರುತಿ ಸ್ಮೃತಿಗಳು ಭಗವಂತನ ಸ್ವತಂತ್ರವಾದ ಆಜ್ಞಾ ರೂಪದಲ್ಲಿರುತ್ತವೆ. ಒಂದು ವೇಳೆ ಭಗವದ್ಭಕ್ತನೇ ಆದರೂ, ಭಗವಂತನ ಆಜ್ಞಾ ರೂಪವಾದ ಶ್ರುತಿ ಸ್ಮೃತಿಗಳಲ್ಲಿ ವಿಹಿತವಾದ ವರ್ಣಾಶ್ರಮಧರ್ಮಗಳನ್ನು ಪರಿಪಾಲಿಸದಿದ್ದರೇ, ಅವನು ಭಗವಂತನ ದ್ವೇಷಿಯಾಗಿ ಭಗವಂತನ ನಿಗ್ರಹಕ್ಕೆ ಪಾತ್ರನಾಗುತ್ತಾನೆ— "ಶ್ರುತಿಸ್ಮೃತೀ ಮಮೈವಾಜ್ಞಾ ಯಸ್ತಾಮುಲ್ಲಂಘ್ಯ ವರ್ತತೇ। ಆಜ್ಞಾಚ್ಛೇದೀ ಮಮದ್ರೋಹೀ ಮದ್ಭಕ್ತೋSಪಿನ ವೈಷ್ಣವಃ"

–ಎಂದು ಪ್ರಕರಣಾಂತರಗಳಲ್ಲಿ ಹೇಳಿರುವುದರಿಂದ, ವರಾಹ ಚರಮಶ್ಲೋಕ ದಲ್ಲಿ ಹೇಳಿರುವಂತೆ, 'ಸ್ಮರ್ತಾ' –ಪರಮಾತ್ಮನನ್ನು ಸ್ಮರಣೆಮಾಡುವವನು, ತನ್ನ ವರ್ಣಾಶ್ರಮಧರ್ಮಗಳನ್ನು ಭಗವನ್ಪ್ರೀತ್ಯರ್ಥವಾಗಿ ಅನುಷ್ಠಿ-ಸಿಯೇ ತೀರಬೇಕು. ಈ ವಿಷಯವು ಈ ಚರಮಶ್ಲೋಕದಲ್ಲಿ ಹೇಳದಿದ್ದರೂ, ಇತರ ಪ್ರಕರಣಗಳಲ್ಲಿ ಹೇಳಿರುವುದನ್ನೂ ಕಂಡು ತಿಳಿದುಕೊಳ್ಳಬೇಕು.

**ಇದು ಪೂರ್ವಪ್ರಕರಣತ್ತಾಲುಂ ಉತ್ತರಶ್ಲೋಕತ್ತಾಲುಂ ಮೋಕ್ಷಾರ್ಥ ಪ್ರಪತ್ತಿಯಾಲೇ, ತನ್ನೈ ಒಳಿಂದಾರ್ ಮುಮುಕ್ಷುಕ್ಕಳುಕ್ಕು ಆಶ್ರಯಣೀಯರೆನ್ಗೈಕಾಕವುಮ್, ತನ್ನೈ ಆಶ್ರಯಿತ್ತೇ ಮೋಕ್ಷಂ ಪೆರ-ವೇಂಡುಂ ಎನ್ಗೈಕ್ಕಾಕವುಮ್, ಇಪ್ರಪತ್ತಿಕ್ಕು ಇಲಕ್ಕಾನ ತ್ತ ಪಡಿಕಳ್ಳೈ ಪರತ್ವಸೌಲಭ್ಯ ಪ್ರತಿಷ್ಠಾಪಕಮಾನ ಪದತ್ರಯತ್ತಾಲೇ ಅರುಳಿಚ್ಚೆಯ್-ಹಿರಾನ್.**

**ಇದು** = ಈ ವರಾಹ ಚರಮಶ್ಲೋಕದಲ್ಲಿ ಹೇಳಿರುವ ವಿಷಯ ವಾದರೋ, **ಪೂರ್ವಪ್ರಕರಣತ್ತಾಲುಂ** = ಮೊದಲು ಭೂಮಿತಾಯಿಯು ವರಾಹನನ್ನು **"ಮತ್ತತೇ ಸರ್ವಭೂತಾನಾಂ ಲಘೂಪಾಯಂವದ ಪ್ರಭೋ"** –"ಎಲೈ ಪ್ರಭುವೇ! ನನಗೋಸ್ಕರ ಎಲ್ಲ ಚೇತನರಿಗೂ ಅನುಷ್ಠಿ-ಸಲು ಸುಲಭವಾದ ಉಪಾಯವೊಂದನ್ನು ತಿಳಿಸಿ" –ಎಂದು ಕೇಳಿದ ಪ್ರಸಂಗ ದಿಂದಲೂ, **ಉತ್ತರಶ್ಲೋಕತ್ತಾಲುಂ** = ಅದಕ್ಕೆ ಉತ್ತರವಾಗಿ ವರಾಹನು ಹೇಳಿದ ಚರಮ ಶ್ಲೋಕಗಳಲ್ಲಿ ಎರಡನೆಯ ಶ್ಲೋಕದಲ್ಲಿನ, **"ನಯಾಮಿ ಪರಮಾಂಗತಿ"** = ನನ್ನನ್ನು ಸ್ಮರಣೆಮಾಡುವವರನ್ನು ದೇಹಾವಸಾನಕಾಲದಲ್ಲಿ ಪರಮಗತಿಗೆ ಒಯ್ಯುತ್ತೇನೆಂದು ಹೇಳಿರುವುದರಿಂದಲೂ, **ಮೋಕ್ಷಾರ್ಥ ಪ್ರಪತ್ತಿಯಾಲೇ** = ಮೋಕ್ಷಾರ್ಥವಾಗಿ ಮಾಡುವ ಪ್ರಪತ್ತಿ ವಿಷಯಕವಾದುದ-ರಿಂದ, **ತನ್ನೈ ಒಳಿಂದಾರ್** = ತನ್ನನ್ನು ಬಿಟ್ಟರೆ, **ಮುಮುಕ್ಷುಳುಕ್ಕು** = ಮೋಕ್ಷಪಡೆಯಬೇಕೆಂಬ ಆಸೆಯುಳ್ಳ ಚೇತನರಿಗೆ, **ಆಶ್ರಯಣೀಯರೆನ್ಗೈ-ಕ್ಕಾಕವುಂ** = ಬೇರೆ ಯಾರುತಾನೇ ಆಶ್ರಯ ನೀಡುವವರಿದ್ದಾರೆ? –ಅಂದರೆ

ಬೇರೆ ಯಾರೂ ಆಶ್ರಯನೀಡುವವರಿಲ್ಲವೆಂಬುದನ್ನು ತೋರಿಸುವುದಕ್ಕಾಗಿಯೂ, **ತಸ್ಸ್ಮೈ ಅಶ್ರಯಿತ್ತೇ**=ತನ್ನನ್ನು ಆಶ್ರಯಿಸಿಯೇ, **ಮೋಕ್ಷಂ ಪೆರೆನೇಂಡುಂ** =ಮೋಕ್ಷವನ್ನು ಹೊಂದಬೇಕು, **ಎನ್ಗ್ರೈಕ್ಕಾಕವುಮ್** = ಎನ್ನುವುದನ್ನು ತಿಳಿಸುವುದಕ್ಕಾಗಿಯೇ, **ಇಪ್ರಪತ್ತಿಕ್ಕು** = ಈ ಪ್ರಪತ್ತಿಗೆ, **ಇಲಕ್ಕಾನ**= ಆವಶ್ಯಕವಾದ, **ತ್ತ ಪಡಿಕಳ್ಳೈ**=ತನ್ನ ಪ್ರಕಾರಗಳನ್ನು ಪರತ್ವಸೌಲಭ್ಯ-**ಪ್ರತಿಷ್ಠಾಪಕಮಾನ** = ಪರತ್ವ ಸೌಲಭ್ಯಗುಣಗಳ ಅರ್ಥವನ್ನು ಸ್ಥಾಪನೆ ಮಾಡುವ, **ಪದತ್ರಯತ್ತಾಲೆ**=ವಿಶ್ವರೂಪಂ, ವೂಾಂ, ಮತ್ತು ಅಜಂ ಎಂಬ ಮೂರು ಪದಗಳಿಂದ, **ಅರಳಿಚ್ಚೆಯ್‌ಕಿರಾನ್** = ಕೃಪೆಯಿಂದ ವರಾಹನು ತಿಳಿಸುತ್ತಾನೆ.

**ಇದಿಲ್ 'ವಿಶ್ವರೂಪಂ' -ಎನ್ಗಿರಪದಂ ನಾರಂಗಳ್ಳೈ ಅಯನಮಾಕ ಉಡೈಯವನ್ ಎನ್ಗಿರಾಪ್ಪೋಲೇ ವಿಶ್ವಕ್ತ್ರೈಯುಂ ತನಕ್ಕು ಶರೀರಮಾಕ ಉಡೈಯವನ್ ಎನ್ಗಿರದು.**

**ಇದಿಲ್** = ಪರತ್ವ ಸೌಲಭ್ಯಗಳನ್ನೂ ತಿಳಿಸುವ, ಮೇಲೆ ಹೇಳಿದ ಮೂರು ಪದಗಳಲ್ಲಿ, **'ವಿಶ್ವರೂಪಂ - ಎನ್ಗಿರಪದಂ'**='ವಿಶ್ವರೂಪಂ' ಎಂಬ ಪದವು, **ನಾರಂಗಳ್ಳೈ ಅಯನಮಾಕ ಉಡೈಯವನ್** = 'ನಾರಾಯಣ' ಶಬ್ದದಲ್ಲಿ, 'ರೀಙ್ ಕ್ಷಯೇ' -ಎಂಬ ಧಾತುವಿನಿಂದ ಉತ್ಪನ್ನವಾದ, 'ರಾಃ' -ಎಂದರೆ ಕ್ಷಯ ಹೊಂದುವುದು, ಯಾವುದು ಕ್ಷಯವನ್ನು ಹೊಂದುವುದಿಲ್ಲವೋ ಅವು (ನ ವಿದ್ಯತೇ ಕ್ಷಯಂ ಯೇಷಾಂ ತೇ) 'ನಾರಾಃ' ಅಂದರೆ, ಕ್ಷಯವಿಲ್ಲದಿರುವ ಆತ್ಮರು -'ನಾರಾಃ' ಎಂಬ ಶಬ್ದದಿಂದ ಹೇಳಲ್ಪಟ್ಟಿದ್ದಾರೆ. 'ನಾರಾಃ ಅಯನಂ ಯಸ್ಯ' = 'ಜೀವಾತ್ಮರು ಯಾರಿಗೆ ಶರೀರವಾಗಿದ್ದಾರೆಯೋ ಅವನು' -ಎಂಬರ್ಥದಲ್ಲಿ 'ನಾರಾಯಣ' ಎಂಬ ಶಬ್ದವುಂಟಾಗಿದೆ. ಪರಮಾತ್ಮನನ್ನು ಬೋಧಿಸುವ 'ಈ ನಾರಾಯಣ ಶಬ್ದದಿಂದ 'ಚೇತನರೆಲ್ಲರನ್ನೂ ಇವನು ದೇಹವನ್ನಾಗಿ ಹೊಂದಿದ್ದಾನೆ' ಎಂಬರ್ಥವು ಸಿದ್ಧಿಸುತ್ತದೆ. **ಎನ್ಗಿರಾಪ್ಪೋಲೆ** = ಎಂದು ಹೇಳಿದಂತೆಯೇ, **ವಿಶ್ವಕ್ತ್ರೈಯುಂ ತನಕ್ಕು ಶರೀರಮಾಕ ಉಡೈಯವನ್** = 'ವಿಶ್ವಮೇವರೂಪಂಯಸ್ಯ' 'ಚೇತನಾ

ಚೇತನಾತ್ಮಕವಾದ ಪ್ರಪಂಚವೇ ಯಾರಿಗೆ ರೂಪ ಅಥವಾ ದೇಹವಾಗಿದೆಯೋ ಅವನು' -ಎಂಬರ್ಥವನ್ನು ಕೊಡುವ, 'ವಿಶ್ವರೂಪ' ಶಬ್ದವು, 'ವಿಶ್ವವನ್ನೇ ತನಗೆ ಶರೀರವನ್ನಾಗಿ ಹೊಂದಿರುವವನು' ಎನ್ನಿರದು = ಎಂಬರ್ಥವನ್ನು ತಿಳಿಸುತ್ತದೆ.

**ಇತ್ತಾಲ್ ಸರ್ವತ್ತುಕ್ಕುಂ ಆಧಾರಮುಮಾಯ್ ನಿಯಂತಾವು-ಮಾಯ್ ಶೇಷಿಯುಮಾಯ್, ಇವೈ ತನ್ನಾಲೇ ಇವತ್ತಿನುಡೈಯ ಸತ್ತಾಸ್ಥಿತಿ ಪ್ರವೃತ್ತಿಕಳ್ ತಾನಿಟ್ಟವಳಕ್ಕಾಯ್ ಕೈಂಕರ್ಯೋದ್ದೇಶ್ಯನು-ಮಾಯ್ ಸ್ವಾರ್ಥಮಾಕಂ ಸಾಧುಪರಿತ್ರಾಣಾದಿಗಳಿಲುಂ ಪ್ರವೃತ್ತಿಕ್ಕ ರಾನೆನ್ರುಮ್ ಆಶ್ರಯಣೀಯನ್ ಸರ್ವವ್ಯಾಪ್ತನಾಕೈಯಾಲೇ ಆಶ್ರಯಿಪ್ಪಾರ್ಕು ನಿತ್ಯಸನ್ನಿಹಿತನೆನ್ರುಮ್ ತೋಟ್ರುಕಿರದು.**

**ಇತ್ತಾಲ್** = ಈ ಭಗವಂತನು ಚೇತನಾಚೇತನರಿಂದ ಕೂಡಿದ ಈ ವಿಶ್ವವನ್ನೇ ತನ್ನ ಶರೀರವನ್ನಾಗಿ ಹೊಂದಿದ್ದಾನೆ -ಎಂದು ಹೇಳಿದುದರಿಂದ, **ಸರ್ವತ್ತುಕ್ಕು**=ಎಲ್ಲ ಚೇತನಾ ಚೇತನಗಳಿಗೂ **ಆಧಾರಮುಮಾಯ್**= ಇವನೇ ಆಧಾರನಾಗಿದ್ದಾನೆಂದೂ, **ನಿಯಂತಾವುಮಾಯ್** = ಅವುಗಳನ್ನು ನಿಯಮಿಸುವವನಾಗಿದ್ದಾನೆಂದೂ, **ಶೇಷಿಯುಮಾಯ್** = ರಕ್ಷಕನಾಗಿದ್ದಾನೆಂದೂ, **ಇವೈ** = ಇವುಗಳಲ್ಲಿ, **ತನ್ನಾಲೇ**=ತನ್ನಿಂದಲೇ, **ಇವತ್ತಿನುಡೈಯ** =ಈ ಚೇತನಾ ಚೇತನಗಳ, **ಸತ್ತಾಸ್ಥಿತಿ ಪ್ರವೃತ್ತಿಗಳ್** = ಇರುವಿಕೆ, ತೋರುವಿಕೆ, ಚೇಷ್ಟಾದಿಗಳನ್ನು ಮಾಡುವಿಕೆಯು **ತಾನಿಟ್ಟವಳಕ್ಕಾಯ್**= ತನ್ನ ಸಂಕಲ್ಪದಿಂದಲೇ ನಡೆಯುವುದೆಂದೂ, **ಕೈಂಕರ್ಯೋದ್ದೇಶ್ಯನು-ಮಾಯ್**=ಚೇತನರು ಮಾಡಬೇಕಾದ ಕೈಂಕರ್ಯಕ್ಕೆ ತಾನೇ ಉದ್ದೇಶ್ಯ-ನೆಂದೂ, **ಸ್ವಾರ್ಥಮಾಕ** = ತನ್ನ ಪ್ರಯೋಜನಾರ್ಥವಾಗಿಯೇ, ಅಂಥರೇ ತನ್ನನ್ನಾಶ್ರಯಿಸಿದ ತನ್ನವರೆಲ್ಲಾ ಸಂತೋಷವಾಗಿ ಬಾಳಬೇಕೆಂಬ ತನ್ನ ಹೆಬ್ಬಯಕೆ ಪೂರ್ಣವಾಗಬೇಕೆಂದೇ, **ಸಾಧು ಪರಿತ್ರಾಣಾದಿಗಳಿಲುಂ**= ಸಾಧು ಪರಿತ್ರಾಣನವೇ ಮೊದಲಾದ ತನ್ನ ಲೀಲೆಗಳಲ್ಲಿ **ಪ್ರವೃತ್ತಿಕ್ಕರಾ-ನೆನ್ರುಮ್**=ಪ್ರವರ್ತಿಸುತ್ತಾನೆಂದೂ, **ಆಶ್ರಯಣೀಯನ್**=ಎಲ್ಲರಿಂದಲೂ

ಆಶ್ರಯಿಸಲು ಅರ್ಹನಾದವನೆಂದೂ, **ಸರ್ವವ್ಯಾಪ್ತವಾಕ್ಕೈಯಾಲೇ**= ಎಲ್ಲೆಡೆಯಲ್ಲಿಯೂ ವ್ಯಾಪಿಸಿರುವವನಾದುದರಿಂದ, **ಆಶ್ರಯಿಪ್ಪಾರ್ಕ್ಕು**= ಆಶ್ರಯಿಸುವವರಿಗೆ, **ನಿತ್ಯ ಸನ್ನಿಹಿತನೆನ್ರುಮ್** = ಎಲ್ಲ ಕಾಲದಲ್ಲಿಯೂ ಹತ್ತಿರದಲ್ಲೇ ಇರುವವನಾಗಿರುತ್ತಾನೆಂದೂ, **ಶೋಟ್ಟ್ರುಕ್ಕಿರದು** = ತಿಳಿದು ಬರುತ್ತದೆ.

**ಸ್ವರೂಪಸನ್ನಿಧಿ ಸೂರಿಕಳುಕ್ಕುಮ್ ಮುಕ್ತರುಕ್ಕುಮ್ ಯೋಗಿ ಕಳುಕ್ಕುಂ ಕಾಣಲಾ ಮತ್ತನ್ರೈಯನ್ರೋ? ವಿಗ್ರಹವಿಶಿಷ್ಟನಾನಾಲುಂ ಪರವ್ಯೂಹಂಗಳ್ ಇಂಗುಳ್ಳಾರ್ಕ್ಕು ಇಲಕ್ಕಾಕವಟ್ಟೋ –ಎನ್ನಿರ ಇಂದ ವಿಭೂತಿಯಿಲೇ ಎಲ್ಲಾರ್ಕ್ಕುಂ ಆಶ್ರಯಿಕ್ಕಲಾಂಪಡಿ ವಿಭವರೂಪತ್ತಾಲ್ ವಂದು ನಿರ್ಕ್ಕರ ನಿಲ್ಪೈಯುಂ, ಇದುಕ್ಕು ಮೂಲಮಾಯ್ ಆಶ್ರಯ-ಣೀಯತ್ವೈಕ್ಕುರಿಪ್ಪಾನ ಕೃಪಾಧಿಕಳುಮ್ ಶೋಟ್ರು 'ಮಾಂ' ಎನ್ನಿರಾನ್.**

**ಸ್ವರೂಪಸನ್ನಿಧಿ**=(ಹತ್ತಿರದಲ್ಲಿಯೇ) ಪರಮಾತ್ಮನು ಸ್ವಸ್ವರೂಪದಿಂ-ದಿರುವಿಕೆಯು, **ಸೂರಿಗಳುಕ್ಕುಂ**=ಶ್ರೀವೈಕುಂಠವಲ್ಲಿರುವ ನಿತ್ಯಸೂರಿಗಳಿಗೂ, **ಮುಕ್ತರುಕ್ಕುಂ**=ಮುಕ್ತಾತ್ಮರಿಗೂ, **ಯೋಗಿಗಳುಕ್ಕುಂ**=ಯೋಗಿಗಳಿಗೂ, **ಕಾಣಲಾಂ ಅತ್ತನ್ರೈಯನ್ರೋ ?** = (ಮಾತ್ರವೇ) ಕಾಣಬಹುದಲ್ಲವೇ ? **ವಿಗ್ರಹವಿಶಿಷ್ಟನಾನಾಲುಂ** = ವಿಗ್ರಹರೂಪದಿಂದ ಕಾಣಿಸಿಕೊಂಡರೂ, **ಪರವ್ಯೂಂಹಂಗಳ್** = ಶ್ರೀವೈಕುಂಠದಲ್ಲಿ ಪರಮಾತ್ಮನ ಪರಸ್ವರೂಪವೂ, ಕ್ಷೀರಾಬ್ಧಿಯಲ್ಲಿ ಕಾಣಿಸಿಕೊಳ್ಳುವ ವ್ಯೂಹಸ್ವರೂಪವೂ, **ಇಂಗುಳ್ಳಾರ್ಕ್ಕು**= ಈ ಲೀಲಾವಿಭೂತಿಯಲ್ಲಿರುವ ಚೇತನರಿಗೆ, **ಇಲಕ್ಕಾಕವಟ್ರೋ**=(ಲಕ್ಷ್ಯವಾ-ಗದೋ ?) ಸಾಕ್ಷಾತ್ಕರಿಸಲಾಧ್ಯವಲ್ಲವೋ ? **–ಎನ್ನಿರ** = ಎಂದು ಹೇಳಿದರೆ, **ಇಂದ ವಿಭೂತಿಯಿಲೇ** = ಈ ಲೀಲಾವಿಭೂತಿಯಲ್ಲೇ, **ಎಲ್ಲಾರ್ಕ್ಕುಂ**= ಎಲ್ಲರಿಗೂ, **ಆಶ್ರಯಿಕ್ಕಲಾಂಪಡಿ** = ಆಶ್ರಯಿಸಲನುಕೂಲವಾಗುವಂತೆ, **ವಿಭವ ರೂಪತ್ತಾಲ್** = ರಾಮಕೃಷ್ಣಾದಿ ವಿಭವರೂಪಗಳಿಂದ, **ವಂದು**= ಬಂದು, **ನಿರ್ಕ್ಕರ ನಿಲ್ಪೈಯುಂ** = ನಿಂತುಕೊಳ್ಳುವ ಸ್ಥಿತಿಯು, **ಇದುಕ್ಕು ಮೂಲಮಾಯ್**=ಈ ರೀತಿ ಪರಮಾತ್ಮನು ಚೇತನರ ಮುಂದುಬರುವುದಕ್ಕೆ

ಮೂಲಕಾರಣವಾದ, **ಆಶ್ರಯಣೀಯತ್ವೈಕ್ಕುರಿಪ್ಪಾನೆ**=ನಾವು ಅವನನ್ನು ಆಶ್ರಯಿಸುವುದಕ್ಕೆ ಅವನು ಅರ್ಹನು –ಎಂಬುದಕ್ಕೆ ಗುರುತಾದ, **ಕೃಪಾದಿ-ಗಳುಮ್**=ಅವನ ದಯೆಯೇ ಮೊದಲಾದ ಗುಣಗಳೂ, **ತೋಟ್ರ**=ಪ್ರಕಾಶ ಪಡಿಸುವುದಕ್ಕೋಸ್ಕರ, **'ಮಾಂ'ಎನ್ಗಿರಾನ್**='ವಿಶ್ವರೂಪನಾದ' **'ನನ್ನನ್ನು'** –ಎಂದು ಹೇಳಿದ್ದಾನೆ.

**"ಸಮುತ್ಥಿತೋ ನೀಲ ಇವಾಚಲೋ ಮಹಾನ್", ನೀಲವುರ್ಕ್ಕೆ ಯಿರಂಡು ಪಿರೈಕಪ್ಪಿನಿಮಿರ್ನ್ದದೊಪ್ಪ – ಕೋಲವರಾಹ ಮೊನ್ರಾಯ್ ನಿಲಂ ಕೋಟ್ಟಿಡಕ್ಕೊಂಡನೆಂದಾಯ್" –ಎನ್ಗಿರಪಡಿಯೇ, ಪ್ರೋಕ್ಕತ್ತು ವಿಳುಂದಾರ್ಕ್ಕೆ ಯೆಡುಕ್ಕೈಕ್ಕು ಅನುಗುಣಮಾನ ಶುಭಾಶ್ರಯವಿಗ್ರಹ ವಿಶೇಷತ್ತೋಡೇ ತೋತ್ತಿನವೆನ್ನೈ ನಿನ್ನೈಕ್ಕುಮವನಕ್ಕು, "ಆಯಾಸಃ ಸ್ಮರಣೇಕೋಽಸ್ಯ" –ಎನ್ಗಿರಪಡಿಯೇ ಅರಿಮೈಯಿಲ್ಲೈ ಎನ್ರು-ತಾತ್ಪರ್ಯಮ್.**

ಇಲ್ಲಿ ಆಚಾರ್ಯರು ಮೇಲೆ ಹೇಳಿರುವ ವರಾಹಾವತಾರದ ವರ್ಣನಾ ಶ್ಲೋಕದ ಪೂರ್ಣರೂಪವು ಇಂತಿದೆ:– "ತತಃ ಸಮುತ್ಕ್ಷಿಪ್ಯಸ್ವಧರಾಂ ಸ್ವದಂಷ್ಟ್ರಯಾ, ಮಹಾವರಾಹಃ ಸ್ಫುಟಪದ್ಮಲೋಚನಃ । ರಸಾತಲಾತ್ ಉತ್ಪಲ ಪತ್ರಸನ್ನಿಭಃ ಸಮುತ್ಥಿತೋ ನೀಲ ಇವಾಚಲೋ ಮಹಾನ್ ॥ **ತತಃ** = (ಹಿರಣ್ಯಾಕ್ಷನು ಭೂಮಿಯನ್ನು ಸಮುದ್ರದಡಿಯಲ್ಲಿ ಅವಿತಿಟ್ಟಾಗ, ಬ್ರಹ್ಮದೇವನೂ, ಭೂದೇವಿಯೂ ಪರಮಾತ್ಮನಲ್ಲಿ ಮೊರೆಯಿಟ್ಟ ಬಳಿಕ, ಹಿರಣ್ಯಾಕ್ಷನನ್ನು ಕೊಂದ) ನಂತರ, **ರಸಾತಲಾತ್** = ರಸಾತಲದಿಂದ, **ಸ್ವಧರಾಂ** = ಭೂದೇವಿಯನ್ನು, **ಸ್ವದಂಷ್ಟ್ರಯಾ** = ತನ್ನ ಕೋರೆಹಲ್ಲಿನಿಂದಲೇ, **ಉತ್ಕ್ಷಿಪ್ಯ** = ಮೇಲಕ್ಕೆ ತಂದು, **ಉತ್ಪಲಪತ್ರಸಂನಿಭಃ**= ಕನ್ನೈದಿಲೆಯ ಎಲೆಯಂತೆ ಹಸಿರು ಬಣ್ಣದ ದೇಹಕಾಂತಿಯುಳ್ಳವನಾಗಿಯೂ, **ಸ್ಫುಟಪದ್ಮಲೋಚನಃ** = ಅರಳಿದ ಕಮಲದಂತಿರುವ ಕಣ್ಣುಗಳುಳ್ಳ, **ಮಹಾವರಾಹಃ** = ಬೃಹದಾಕಾರದ ಹಂದಿಯ ರೂಪವನ್ನು ತಾಳಿದ್ದ ಭಗವಂತನು, **ಮಹಾನ್ ದೊಡ್ಡ**ದಾದ **ನೀಲಃ ಅಚಲಃ ಇವ** = ನೀಲ

ಮಣಿಯ ಪರ್ವತದಂತೆ, **ಸಮುಚ್ಛ್ರಿತಃ**=ಸ್ಪಷ್ಟವಾಗಿ ಕಾಣಿಸಿಕೊಂಡನು

ಮೇಲೆ, ಆಚಾರ್ಯರು ಪ್ರತೀಕವಾಗಿ ತೆಗೆದು ಹೇಳಿರುವ ನಮ್ಮಾಳ್ವಾರವರ ಶ್ರೀಸೂಕ್ತಿಯಾದ "ನೀಲವರ್ಮೈಯಿರಂಡು" ಪದ್ಯದ ಪೂರ್ಣರೂಪವು ಇಂತಿದೆ–

**ಕೋಲಮಲರ್ ಪಾವೈಕ್ಕನ್ಪಾಕಿಯವೆನ್ನನ್ಪೇಯೋ,**
**ನೀಲವರ್ಮೈಯಿರಂಡು ಪಿರೈಕವ್ವಿ ನಿಮಿರ್ನ್ದದೊಪ್ಪ,**
**ಕೋಲವರಾಹ ಮೊನ್ರಾಯ್ ನಿಲಂ ಕೊಟ್ಟಿಡಕ್ಕೊಂಡನೆಂದಾಯ್**
**ನೀಲಕ್ಕಡಲ್ ಕಡೈಂದಾಯ್ ಉನ್ನೈಪೆಟ್ರಿನಿ ಪೋಕ್ಕುವನೋ ||**

(ನಮ್ಮಾಳ್ವಾರ್ ತಿರುವಾಯ್ಮೊಳಿ : ೧೦-೧೦-೭)

**ಕೋಲ**=ಸೌಂದರ್ಯವುಳ್ಳ, **ಮಲರ್ ಪಾವೈಕ್ಕು**=ಪದ್ಮೋದ್ಭವೆಯಾದ ಲಕ್ಷ್ಮೀದೇವಿಗೆ, **ಅನ್ಪಾಕಿಯ** = ಪ್ರಿಯವಲ್ಲಭನಾದ, **ಎನ್ ಅನ್ಪೇಯನ್** = ನನ್ನ ಪ್ರೇಮಮೂರ್ತಿಯಾದ, **ನೀಲವರ್ಮೈ** = ಒಂದು ಮಹಾ ನೀಲಮಣಿ ಪರ್ವತವು, **ಇರಂಡುಪಿರೈ** = ಎರಡು ಚಂದ್ರರನ್ನು, **ಕವ್ವಿ**=ಬಾಯಿಂದ ಕಚ್ಚಿಕೊಂಡು, **ನಿಮಿರ್ನ್ದದು ಒಪ್ಪ**=ಮೇಲಕ್ಕೆ ಎದ್ದಂತೆ, **ಕೋಲ**=ಸೌಂದರ್ಯವುಳ್ಳ, **ವರಾಕಮ್ ಒನ್ರಾಯ್**=ಅದ್ವಿತೀಯವಾದ ವರಾಹಮೂರ್ತಿಯಾಗಿ, **ನಿಲಮ್**=ಭೂಮಿಯನ್ನು **ಕೊಟ್ಟಿಡೈಕೊಂಡ**=ತನ್ನ ದಂಷ್ಟ್ರಾಗ್ರದಿಂದ ಮೇಲಕ್ಕೆತ್ತಿ ರಕ್ಷಿಸಿದ, **ಎನ್ದಾಯ್**=ನನ್ನ ಸ್ವಾಮಿಯೇ **ನೀಲಕ್ಕಡಲ್**=ನೀಲವಾದ ಕ್ಷೀರಸಮುದ್ರವನ್ನು **ಕಡೈನ್ದಾಯ್**=ಕಡೆದು ದೇವತೆಗಳನ್ನು ರಕ್ಷಿಸಿದವನೇ, **ಉನ್ನೈ** = ಇಂತಹ ರಕ್ಷಕನಾದ ನಿನ್ನನ್ನು **ಪೆಟ್ರು**=ಆಶ್ರಯಿಸಿ, **ಇನಿ**=ಇನ್ನೂ, **ಪೋಕ್ಕುವನೋ** = (ನಿನ್ನನ್ನು) ಬಿಡುವೇನೋ ? (ಎಂದಿಗೂ ಬಿಡಲಾರೆನು).

**ಎನ್ನಿರಪಡಿಯೇ**=ಈ ಮೇಲಿನ ಪದ್ಯಗಳೆರಡರಲ್ಲಿ ವರ್ಣಿಸಿರುವಂತೆಯೇ **ಪೋಕ್ಕತ್ತುವಿಳುಂದಾರೈ** = (ಭೂದೇವಿಯಂತೆಯೇ) ಬೇರೆ ಗತಿಯಿಲ್ಲದೆ

(ಸಂಸಾರ ಸಾಗರದಲ್ಲಿ) ಬಿದ್ದಿರುವವರನ್ನು, **ಎಡುಕ್ಕೈಕ್ಕು**=ಮೇಲೆತ್ತು-ವುದಕ್ಕೋಸ್ಕರವೇ, **ಅನುಗುಣಮಾನ** = (ಆಯಾ ಚೇತನರಮನಸ್ಸನ್ನು ಸೆಳೆಯಲು) ಅನುಗುಣವಾದ **ಶುಭಾಶ್ರಯ ವಿಗ್ರಹವಿಶೇಷಕೋಡೆ**= ಶುಭಾಶ್ರಯವಾದ ವಿಶೇಷವಾದ ಮೂರ್ತಿಸ್ವರೂಪದಿಂದ, **ತೋತ್ತಿನ**= ತೋರಿಕೊಂಡ, **ಎನ್ನೈ**=ನನ್ನನ್ನು, **ನಿನೈಕ್ಕುಮವಸುಕ್ಕು** = ಸ್ಮರಣೆ ಮಾಡುವವನಿಗೆ, **"ಆಯಾಸಃ ಸ್ಮರಣೇಕೋಽಸ್ಯ" -ಎನ್ನಿರಪಡಿಯೇ** (ಆಯಾಸಃ ಸ್ಮರಣೇಕೋಽಸ್ಯ ಸ್ಮೃತೋ ಯಚ್ಛತಿಶೋಭನಂ ! ಪಾಪಕ್ಷಯಶ್ಚ ಭವತಿ ಸ್ಮರತಾಂ ತಂ ಅಹರ್ನಿಶಮ್") -"ಹಗಲು ಮತ್ತು ರಾತ್ರಿ ಅವನನ್ನು ಸ್ಮರಣೆಮಾಡುವವನ ಪಾಪವೆಲ್ಲವೂ ನಶಿಸಿಹೋಗುತ್ತದೆ, ಅಂತಹವನಿಗೆ ಅವನು ಮಂಗಳವನ್ನುಂಟುಮಾಡುತ್ತಾನೆ, ಹೀಗಿರುವಲ್ಲಿ ಅವನನ್ನು ಸ್ಮರಣೆ ಮಾಡುವವರಿಗೆ, ಸಂಸಾರಸಾಗರದಲ್ಲಿ ಬಿದ್ದು ತೊಳಲುವುದರಿದುಂಟಾಗುವ ಆಯಾಸವು ಎಲ್ಲಿಂದ ಸಂಭವಿಸುತ್ತದೆ" -ಎಂದು ಹೇಳುವಂತೆಯೇ, **ಅರಿವ್ಯೆ ಯಿಲ್ಲೈ ಎನ್ರುತಾತ್ಪರ್ಯಂ**=ಅವನ ಶುಭಾಶ್ರಯವಾದ ವಿಗ್ರಹ-ವನ್ನು ಸ್ಮರಣೆಮಾಡುವವನಿಗೆ ಪುನರ್ಜನ್ಮವೆಂಬ ದುಃಖವಿರುವುದಿಲ್ಲ -ಎಂಬುದೇ ತಾತ್ಪರ್ಯವಾಗಿರುತ್ತದೆ.

**"ವಿಶ್ವರೂಪಂ ಚ ಮಾಮ್" -ಎನ್ನಿರಪದಂಗಳಿಲೇ ಜಗದ್ಧಿತಾವ-ತಾರತ್ವ ಶರಣ್ಯತ್ವ ಪ್ರಾಪ್ಯತ್ವೋಪಯುಕ್ತ ಸರ್ವಕಲ್ಯಾಣಗುಣಾಕಾರತ್ವ-ಮುಮ್ ಸಿದ್ಧಿಕ್ಕಿರದು. ಇದು ಅನುಕ್ತ ಸಮುಚ್ಚಯಮಾನ ಚಕಾರ-ತ್ತಾಲೇಯಾಕವುಮಾಮ್.**

ರಕ್ಷಕನಿಗೆ ಪರತ್ವ ಮತ್ತು ಸೌಲಭ್ಯ – ಎರಡು ಗುಣಗಳೂ ಇರಬೇಕು. ಇತರರಾರೂ ಬಂದು ಆಶ್ರಯಿಸಲು ಸಾಧ್ಯವಿಲ್ಲದಿರುವ 'ಸೌಲಭ್ಯ'ವಿಲ್ಲದೆ ಕೇವಲ ಪರತ್ವವಿದ್ದರೂ ಪ್ರಯೋಜನವಿಲ್ಲ, ಅಥವಾ, ಆಶ್ರಯಿಸಲು ಬಹು ಸುಲಭವಾಗಿದ್ದು ರಕ್ಷಿಸಲು ಬೇಕಾದ ಪರತ್ವವಿಲ್ಲದಿದ್ದರೂ ಪ್ರಯೋ-ಜನವಿಲ್ಲ, ಆದುದರಿಂದ ಭಗವಂತನಲ್ಲಿ ಈ ಎರಡು ಪರತ್ವ ಸೌಲಭ್ಯ

ಗುಣಗಳೂ ಇವೆ -ಎಂಬುದನ್ನು ವರಾಹ ಚರಮಶ್ಲೋಕದಲ್ಲಿ 'ವಿಶ್ವರೂಪಂಚ ಮಾಮಂಚ' -ಎಂಬಲ್ಲಿ ವರಾಹನು ತಿಳಿಸಿದ್ದಾನೆ.

**'ವಿಶ್ವರೂಪಂ ಚ ಮಾಮ್' -ಎನ್ಗಿರಪದಂಗಳಿಲೇ**= "ವಿಶ್ವರೂಪಂ ಚಮಾಮ್ -ಎನ್ನುವ ಪದಗಳಲ್ಲಿ, (ವಿಶ್ವರೂಪವೆಂಬ ಪದವು ಪರತ್ವ ದ್ಯೋತಕವಾದ) **ಜಗದ್ಧಿತಾವತಾರತ್ವ**= ಜಗತ್ತಿಗೆ ಹಿತವನ್ನುಂಟುಮಾಡುವುದಕ್ಕೋಸ್ಕರವೇ ಅವನು ಅವತರಿಸುವ ಗುಣವನ್ನೂ, **ಶರಣ್ಯತ್ವ**= ರಕ್ಷಕನಿಗೆ ಮುಖ್ಯವಾಗಿ ಬೇಕಾಗಿರುವ 'ದಯೆಯೇ' ಮೊದಲಾದ ಗುಣಗಳನ್ನೂ, ('ಮಾಂ' 'ನನ್ನನ್ನು' -ಎಂಬ ಪದವು ಸೌಲಭ್ಯದ್ಯೋತಕವಾದ) **ಪ್ರಾಪ್ಯತ್ವೋಯುಕ್ತ**= ಇತರರಿಂದ ಪಡೆಯಲು ಉಪಯುಕ್ತವಾದ, ('ಚ' -ಮತ್ತು -ಎಂಬ ಪದದಿಂದ) **ಸರ್ವಕಲ್ಯಾಣಗುಣಾಕರತ್ವಮುಮ್**= ಕ್ಷಮಾ, ವಾತ್ಸಲ್ಯಾದಿ ಎಲ್ಲ ವಿಧವಾದ ಕಲ್ಯಾಣಗುಣಗಳಿಗೆ ಆಶ್ರಯನಾಗಿರುವಿಕೆಯೂ, **ಇದು**= ಈ ದಯಾಕ್ಷಮಾ, ವಾತ್ಸಲಾದಿ, ಕಲ್ಯಾಣಗುಣಾಕರತ್ವವು, **ಅನುಕ್ತಸಮುಚ್ಚಯಮಾನ** = ಹೇಳದಿರುವ ವಿಷಯಗಳನ್ನೂ ಕೂಡಿಸಿ ಹೇಳುವ, **ಚಕಾರತ್ತಾಲೆ**= 'ಚ' -ಎಂಬ ಅವ್ಯಯವಿಂದ **ಆಕವುಮಾಮ್** = ತಿಳಿದುಬರುತ್ತದೆ.

**ಆನಾಲುಂ 'ವಿಶ್ವರೂಪಂ' -ಎನ್ಗಿರಪದತ್ತಿಲ್ ಶೊನ್ನ ಸರ್ವ-ಶರೀರತ್ತಾಲುಂ, ಇದು ತನ್ನಾಲೇ ಫಲಿತಂಗಳಾನ ಸರ್ವೋಪಾದಾನತ್ವ ನಿಮಿತ್ತತ್ವಂಗಳಾಲುಂ ಚೇತನಾಚೇತನ ದೋಷಗಂಳಿಲ್ಲಾಂ ಶಂಕಿಕ್ಕಲಾಂ-ಪಡಿಯೆನ್ರೋ ಇರುಪ್ಪದು.**

**ಆನಾಲುಂ**= ಭಗವಂತನು ಸರ್ವಕಲ್ಯಾಣಗುಣಾಕರನೆಂದು ತಿಳಿದು ಬಂದರೂ, **'ವಿಶ್ವರೂಪಂ' ಎನ್ಗಿರಪದತ್ತಿಲ್** = 'ವಿಶ್ವರೂಪಂ'-ಎಂಬುವ ಪದದಲ್ಲಿ **ಶೊನ್ನ** = ಹೇಳಿದ, **ಸರ್ವಶರೀರತ್ತಾಲುಂ** = ಸರ್ವವಿಧವಾದ **ಚೇತನಾಚೇತನ**ಗಳೆಲ್ಲವನ್ನೂ ದೇಹವನ್ನಾಗಿ ಹೊಂದಿದ್ದಾನೆ -ಎಂದು ಹೇಳಿದುದರಿಂದಲೂ, **ಇದು**= ಈ ಪರಬ್ರಹ್ಮವು, **ತನ್ನಾಲೇ ಫಲಿತಂಗಳಾನ** = ತನ್ನಿಂದಲೇ ಉದ್ಭವಿಸಿದ ಚೇತನಾಚೇತನಾತ್ಮಕವಾದ ಪ್ರಪಂಚ,

**ಸರ್ವೋಪಾದಾನತ್ವನಿಮಿತ್ತತ್ವಂಗಳಾಲುಂ**=ಎಲ್ಲಕ್ಕೂ ಉಪಾದಾನ ಮತ್ತು ನಿಮಿತ್ತ ಕಾರಣಗಳಾಗಿರುವುದರಿಂದಲೂ, **ಚೇತನಾಚೇತನದೋಷಂಗಳೆಲ್ಲಾಂ** = ಚೇತನಾಚೇತನರ ದೋಷಗಳೆಲ್ಲವೂ, **ಶಂಕಿಕ್ಕಲಾಂಪಡಿಯನ್ರೋ**=ಶಂಕಿಸುವಂತಿದೆಯಲ್ಲವೇ, **ಇರುಪ್ಪದು**=ಇರುತ್ತದೆ.

ಈ ಪ್ರಕರಣದಲ್ಲಿ ಆಚಾರ್ಯರು, ಆಪಾತತಃ ಎರಡು ತರಹವಾಗಿ ತೋರುವ ಶಂಕೆಯನ್ನು ಪ್ರಸ್ತಾಪಿಸಿ, ಮುಂದೆ ಆ ಶಂಕೆಗೆ ಸಮಾಧಾನ ಹೇಳುತ್ತಾರೆ. ಮೊದಲನೆಯದಾಗಿ ಭಗವಂತನು ವಿಶ್ವವನ್ನೇ ತನ್ನ ದೇಹವನ್ನಾಗಿ ಹೊಂದಿ, 'ವಿಶ್ವರೂಪ' ನೆನಿಸಿಕೊಂಡಿರುವುದರಿಂದ, ಚೇತನಾಚೇತನಾತ್ಮಕವಾದ ದೇಹದಲ್ಲಿ ಸಂಭವಿಸುತ್ತಿರುವ ದೋಷಗಳು ಪರಮಾತ್ಮನ ದೇಹದಲ್ಲಿರುವುದರಿಂದ, ಅವನೂ ದೋಷಭೂಯಿಷ್ಠನಲ್ಲವೇ ? ಎರಡನೆಯದಾಗಿ ಪರಮಾತ್ಮನು ಚೇತನಾಚೇತನಾತ್ಮಕವಾದ ಈ ಪ್ರಪಂಚಕ್ಕೆ ಉಪಾದಾನ ಮತ್ತು ನಿಮಿತ್ತ ಕಾರಣನಾಗಿದ್ದಾನೆ. ಅಂದರೆ, ಒಂದು ಪದಾರ್ಥವನ್ನು ಕುರಿತು, ಅದರ ಕಾರಣಾವಸ್ಥೆ ಮತ್ತು ಕಾರ್ಯಾವಸ್ಥೆ ಎರಡರಲ್ಲಿಯೂ ಯಾವುದಿರುತ್ತದೆಯೋ, ಅದನ್ನು ಉಪಾದಾನಕಾರಣವೆನ್ನುತ್ತೇವೆ. ಕಾರ್ಯಾವಸ್ಥೆಗೆ ಪೂರ್ವದಲ್ಲಿ ಕಾರಣಾವಸ್ಥೆಯಲ್ಲಿ ನಿಯಮೇನ ಇದ್ದು ಆ ವಸ್ತುವಿನ ತಯಾರಿಕೆಗೆ ಕಾರಣವಾಗಿರುವ ವಸ್ತು ಅಥವಾ ವ್ಯಕ್ತಿಯನ್ನು ಆ ಪದಾರ್ಥವನ್ನು ಕುರಿತು, ನಿಮಿತ್ತ ಕಾರಣವೆಂದು ಕರೆಯುತ್ತೇವೆ. ಉದಾಹರಣೆಗೆ, ಒಂದು ಮಡಕೆಯನ್ನು ಕುರಿತು ಮಣ್ಣು ಉಪಾದಾನ ಕಾರಣ. ಕುಂಭಾರ ನಿಮಿತ್ತ ಕಾರಣ. ಅಂತೆಯೇ ಚೇತನಾಚೇತನಾತ್ಮಕವಾಗಿ ಸೃಷ್ಟವಾಗಿರುವ ಈ ಪ್ರಪಂಚವು, ಕಾರಣಾವಸ್ಥೆಯಲ್ಲಿ ಸೂಕ್ಷ್ಮಾವಸ್ಥೆಯಲ್ಲಿದ್ದಿತು. ಸೃಷ್ಟಿಯಲ್ಲಿ ಸ್ಥೂಲಾವಸ್ಥೆಯನ್ನು ಪಡೆಯಿತು. ಇದರ ಕಾರಣ ಮತ್ತು ಕಾರ್ಯಾವಸ್ಥೆಯೆರಡರಲ್ಲಿಯೂ ಪರಮಾತ್ಮನು, ಸರ್ವಾಂತರ್ಯಾಮಿಯಾದುದರಿಂದ, ಇವುಗಳಲ್ಲಿರುತ್ತಿದ್ದಾನೆ. ಆದುದರಿಂದ ಕಾರ್ಯಕಾರಣಾವಸ್ಥೆಗಳಲ್ಲಿರುವ ಮಣ್ಣು ಹೇಗೆ ಮಡಿಕೆಗೆ ಉಪಾದಾನ ಕಾರಣವೋ, ಅಂತೆಯೇ ಪ್ರಪಂಚವನ್ನು ಕುರಿತು ಪರಬ್ರಹ್ಮನು ಉಪಾದಾನಕಾರಣ. ಮಡಿಕೆಯನ್ನು ಮಾಡುವ ಕುಂಬಾರನು, ಅದರ

ಕಾರಣಾವಸ್ಥೆಯಲ್ಲಿದ್ದು, ಅದನ್ನು ಮಾಡಬೇಕೆಂದು ಸಂಕಲ್ಪಿಸಿ, ಅದನ್ನು ಮಾಡುವುದರಿಂದ, ಅವಕ್ಕೆ ನಿಮಿತ್ತ ಕಾರಣನಾಗುವಂತೆಯೇ ಪರಮಾತ್ಮನು, **"ಇದಗ್ಂ ಸೃಜೆಯ"** –ಈ ಪ್ರಪಂಚವನ್ನು ಸೃಷ್ಟಿಸಬೇಕೆಂದು ಸಂಕಲ್ಪಿಸಿ, ಸಂಕಲ್ಪ ಮಾತ್ರದಿಂದಲೇ ಅದನ್ನು ಸೃಷ್ಟಿಸುವುದರಿಂದ, ಈ ಪ್ರಪಂಚವನ್ನು ಕುರಿತು, ಪರಬ್ರಹ್ಮನು ನಿಮಿತ್ತಕಾರಣನೂ ಹೌದು. ಉಪಾದನ ಕಾರಣ ನಾದುದರಿಂದ ಅಚೇತನಗತವಾದ ಸಂಕೋಚವಿಕಾಸಾದಿ ದೋಷಗಳೂ, ನಿಮಿತ್ತಕಾರಣನಾದುದರಿಂದ 'ಅಲ್ಪಜ್ಞತ್ವಾದಿ' ದೋಷಗಳೂ ಪರಬ್ರಹ್ಮ-ನಲ್ಲಿಯೂ ಇರಬಹುದೆಂಬ – ಶಂಕೆಯೂ ತೋರುವಂತದೆಯಲ್ಲವೇ ?

**ಪಿರಕ್ಕಿರವನ್ರನುಕ್ಕುಮ್ ಮತ್ತುಂ ಪಿರ್ಱಾರುಡೈಯ ಪ್ರಕಾರಂಗಳ್ ಉಂಡಾಕಾದೋ ? ಅವತಾರಂಗಳಿಲೇ ಶೋಕಮೋಹಾದಿಕಳ್ ಶೊಲ್ಲ-ವುಂಕಾಣ್ಗಲೋಮೋ ? ಇಪ್ಪಡಿಯಾಲ್, "ಸ್ವರಕ್ಷಣೇಽಪ್ಯಶಕ್ತಸ್ಯ ಕೋ ಹೇತುಃ ಪರರಕ್ಷಣೇ" –ಎನ್ಗಿರ ಚೋದ್ಯಮ್‌ವಾರಾದೋ ? –ಎನ್ನ.**

ಪ್ರಪಂಚದಲ್ಲಿರುವ, ಚೇತನಾ ಚೇತನಗಳೆಲ್ಲರಲ್ಲಿಯೂ ವ್ಯಾಪಿಸಿ, ಭಗವಂತನು 'ವಿಶ್ವರೂಪ'ನೆಂದು ಹೇಳಿರುವುದರಿಂದ, **ಪಿರಕ್ಕಿರವನ್ರನು-ಕ್ಕುಮ್**=ಹುಟ್ಟುವವನಿಗೂ, **ಮಟ್ರು**=ಮತ್ತು, **ಪಿರ್ಱಾರುಡೈಯ ಪ್ರಕಾರಂಗಳ್**=ಹುಟ್ಟಿದ ಬಳಿಕ, ಅವರವರ ಕರ್ಮದಿಂದ ಉಂಟಾಗುವ ದುಃಖಮೋಹಾದಿಗಳಿಂದ ಮಿಶ್ರಿತವಾದ ಅನುಭವ ಅಥವಾ ನಡವಳಿಕೆಗಳು, **ಉಂಡಾಗಾದೋ**=(ಭಗವಂತನಿಗೂ) ಉಂಟಾಗುವುದಿಲ್ಲವೇ ? **ಅವತಾರಂ-ಗಳಿಲೇ**=ರಾಮಕೃಷ್ಣಾದ್ಯವತಾರ ಕಾಲಗಳಲ್ಲಿ, **ಶೋಕಮೋಹಾದಿಗಳ್**=ಸೀತಾವಿಯೋಗಾದಿಗಳಲ್ಲಿ ಕಂಡುಬರುವ ದುಃಖ, ವಿಭೀಷಣ ಸುಗ್ರೀವ, ಲಕ್ಷ್ಮಣಾದಿಗಳಲ್ಲಿ ಹೊಂದಿದ್ದ ಮೋಹಾದಿಗಳೂ, **ಶೊಲ್ಲವುಂ** = ಹೇಳಲು, **ಕಾಣ್ಗಲೋಮೋ**=ಕಾಣುತ್ತದೆಯಲ್ಲವೇ ? **ಇಪ್ಪಡಿಯಾಲ್** = ಈರೀತಿ ಯಾಗಿ ತಾನೇ ದುಃಖಮೋಹಾದಿಗಳಿಂದ ತುಂಬಿರುವಲ್ಲಿ, **ಸ್ವರಕ್ಷಣೇಪಿ ಅಶಕ್ತಸ್ಯ**=ತನ್ನನು ತಾನೇ ದುಃಖಮೋಹದಿಂದ ಬಿಡುಗಡೆ ಹೊಂದುವಂತೆ

ಮಾಡಿ ರಕ್ಷಿಸಿಕೊಳ್ಳಲು ಅಶಕ್ತನಾದವನು, **ಪರರಕ್ಷಣೇ** = ಇತರರನ್ನು ದುಃಖ ಸಾಗರದಿಂದ ಪಾರುಮಾಡಿ ರಕ್ಷಿಸುತ್ತಾನೆ–ಎಂಬ ವಿಷಯದಲ್ಲಿ, **ಕೋಹೇತುಃ** = ಪ್ರಮಾಣವೇನಿದೆ ? –ಎನ್ನಿರ=ಎಂಬ **ಚೋದ್ಯಮ್** = ಶಂಕೆಯು, **ವಾರಾದೋ** = ಬರುವುದಿಲ್ಲವೋ, ಎನ್ನೆ= ಎಂದು ಶಂಕಿಸಿದರೇ.

**'ಅಜ'ಮೆನ್ರು ಪುರುಷಾಂತರ ಸಜಾತೀಯ ಜನ್ಮನಿಷೇಧತ್ತಾಲೆ ತನ್ನುಡೈಯ ಹೇಯಪ್ರತಿಭಟತ್ತ್ವತ್ತೈ ಕಾಟ್ಟುಕಿರಾನ್.**

(**'ವಿಶ್ವರೂಪಂಚಮಾಮಜಮ್'**-ಎಂದು ಹೇಳಿರುವಲ್ಲಿ) **ಅಜಮೆನ್ರು ಅಜಮ್'** = 'ಜನ್ಮವಿಲ್ಲದಿರುವವನನ್ನು' –ಎನ್ನುವ ಶಬ್ದದಿಂದ, **ಪುರುಷಾಂತರ ಸಜಾತೀಯ ಜನ್ಮನಿಷೇಧತ್ತಾಲೇ** = ಇವನಂತೆಯೇ ಇರುವ ಬೇರೊಬ್ಬ ಸಜಾತೀಯ ಪುರುಷನಿಲ್ಲವೆಂಬುದನ್ನೂ, ಇವನಿಗೆ ಕರ್ಮಬಂಧಿತ-ವಾದ ಜನ್ಮವಿಲ್ಲವೆಂಬುದನ್ನೂ ಹೇಳಿರುವುದರಿಂದ, **ತನ್ನುಡೈಯ ಹೇಯ-ಪ್ರತಿಭಟತ್ವತ್ತೈ** = ತನ್ನ ದೋಷಗುಣಗಳಿಂದ ದೂರವಾಗಿರುವಿಕೆಯನ್ನೂ, **ಕಾಟ್ಟುಕಿರಾನ್** = ತೋರಿಸುತ್ತಾನೆ.

**ಇಂಗು ಜನನತ್ತೈ ನಿಷೇಧಿತ್ತದು ಮಟ್ರುಮುಳ್ಳ ಭಾವವಿಕಾ-ರಂಗಳ್ ಷಡೂರ್ಮಿಗಳೆನ್ನಾಪ್ಪೋಲೇ, ಶೊನ್ನ ಚೇತನಾಚೇತನ ದೋಷಂಗಳೆಲ್ಲಾತ್ತೈಯುಂ ನಿಷೇಧಿಕ್ಕುಮ್ ಅದುಕ್ಕು ಉಪಲಕ್ಷಣ ಮಾಕೈಯಾಲೇ ಅಶಕ್ತಿರೂಪಮಾನ ದೋಷಂ ಕಳಿನ್ದು ಹೇಯಪ್ರತಿ-ಭಟತ್ವಮುಮ್ ಸಿದ್ಧಿಕ್ಕಿರದು.**

**ಇಂಗು** = ಈ ಚರಮಶ್ಲೋಕದಲ್ಲಿ 'ಅಜಂ' –ಎಂದು ಹೇಳುವಲ್ಲಿ, **ಜನನತ್ತೈ ನಿಷೇಧಿತ್ತದು** = ಜನ್ಮವಿಲ್ಲವೆಂದು ಹೇಳಿದುದು, **ಮಟ್ರುಮುಳ** = ಇತರ ಕರ್ಮಬಂಧದಿಂದ ಜನ್ಮವನ್ನು ಪಡೆದ ವಸ್ತುಗಳಲ್ಲಿರುವ, **ಭಾವ-ವಿಕಾರಂಗಳ್** = ಹುಟ್ಟುವಿಕೆ, ಇರುವಿಕೆ, ಬೆಳೆಯುವಿಕೆ, ಕ್ಷಯಿಸುವಿಕೆ, ನಾಶವಾಗುವಿಕೆ, ರೂಪಾಂತರವನ್ನು ಹೊಂದುವಿಕೆ –ಎಂಬ ಆರು ವಿಧವಾದ-ಭಾವವಿಕಾರಗಳನ್ನೂ, **ಷಡೂರ್ಮಿಗಳ್** = ಶೋಕ, ಮೋಹ, ಹಸಿವು,

ಬಾಯಾರಿಕೆ, ಮುಪ್ಪು ಮತ್ತು ಮರಣ –ಎಂಬ ಆರು ವಿಧವಾದ 'ಊರ್ಮಿ' ಗಳನ್ನೂ, **ಎನ್ನಾಪ್ಪೋರ್ಲೇ** = (ಅವನಲ್ಲಿಲ್ಲವೆಂದು ಹೇಳಿದಂತಾಯಿತು.) ಕರ್ಮಬಂಧದಿಂದ ಜನ್ಮಪಡೆದವರಲ್ಲಿ ಮಾತ್ರವೇ, ಭಾವವಿಕಾರಗಳು ಮತ್ತು ಷಡೂರ್ಮಿ ದೋಷಗಳಿರುವುದರಿಂದ, ಕರ್ಮಬಂಧದಿಂದ ಜನ್ಮಪಡೆಯದಿರುವ ಪರಮಾತ್ಮನಲ್ಲಿ ಈ ದೋಷಗಳಿಲ್ಲವೆಂದು ಹೇಳಿದಂತಾಯಿತು. ಅಂತೆಯೇ, **ಶೊನ್ನ**=ಮೇಲೆ ಹೇಳಿದ ಸಂಕೋಚವಿಕಾಸವೇ ಮೊದಲಾದ, **ಚೇತನಾ-ಚೇತನ ದೋಷಂಗಳೆಲ್ಲಾತ್ತೈಯುಂ**=ಚೇತನ ಮತ್ತು ಅಚೇತನಗಳಿಗೆ ಸಂಭವಿಸುವ ದೋಷಗಳೆಲ್ಲವನ್ನೂ, **ನಿಷೇಧಿಕ್ಕುವ್** = ಭಗವಂತನಲ್ಲಿ ಸಂಭವಿಸುವುದಿಲ್ಲವೆಂದು, ನಿಷೇಧಿಸುತ್ತದೆ. **ಅದುಕ್ಕು**=ಆ ರೀತಿ ನಿರ್ದೋಷ-ನಾಗಿರಲು, **ಉಪಲಕ್ಷಣಮಾಕೈಯಾಲೆ**=ಹೆಗ್ಗುರುತಾದ, **ಅಶಕ್ತಿರೂಪ-ಮಾನದೋಷಂ ಕಳಿನ್ದು**=ಜನ್ಮ ಮರಣ ಚಕ್ರದಿಂದ ಮತ್ತೊಬ್ಬರನ್ನು ರಕ್ಷಿಸಲು ಬೇಕಾದ ಸಾಮರ್ಥ್ಯವಿಲ್ಲದಿರುವಿಕೆ ಎಂಬ ದೋಷವೂ ಕಳೆದು, **ಹೇಯಪ್ರತಿಭಟತ್ವಮುಮ್**=ಹೇಯ ಗುಣಗಳನ್ನು (ಜೀವನಿಗೆ ಕರ್ಮ ಬಂಧದಿಂದ ಉಂಟಾಗುವ ಜನ್ಮ, ಮರಣ, ತತ್ಪರಿಣಾಮವಾಗಿ ಉಂಟಾಗುವ ದೋಷಗಳೆಂಬ ಕೆಟ್ಟ ಗುಣಗಳನ್ನು) ತಳ್ಳಿಹಾಕುವಿಕೆ –ಎಂಬ ಗುಣವನ್ನು ಪರಮಾತ್ಮನು ಹೊಂದಿದ್ದಾನೆಂದೂ, **ಸಿದ್ಧಿಕ್ಕಿರದು**=ಅರ್ಥವು ಸಿದ್ಧಿಸುತ್ತದೆ.

**ಅವತಾರಂಗಳಿಲ್ ಶೋಕಾದಿಕಳ್ ಶೊನ್ನವಿಡತ್ತುಕ್ಕು ಅಭಿನಯಿತ್ತಿಲೇ ತಾತ್ಪರ್ಯಮ್. ಇವ್ವರ್ಥತ್ತೈ ೧. "ಮನುಷ್ಯದೇಹಿನಾಂ ಚೇಷ್ಟಾಂ", ೨. "ಈಶನ್ನಪಿ ಮಹಾಯೋಗಿ", ೩. "ತೇನ ವಂಚಯಂತೇ ಲೋಕಾನ್", ೪. "ನಿಲವರಂಪಿಲ ಪಲಪಿರ-ಪ್ಪಾಯ್, ಒಳಿವರು ಮುಳುನಲಮ್" —ಇತ್ಯಾದಿಗಳ್ಳೆ ಇಂಗೆ ಅನುಸಂಧಿಪದು.**

**ಅವತಾರಂಗಳಿಲ್**=ಅವತಾರಕಾಲಗಳಲ್ಲಿ **ಶೋಕಾದಿಗಳ್ ಶೊನ್ನ ವಿಡತ್ತುಕ್ಕು**=ಭಗವಂತನು ದುಃಖಾದಿಗಳನ್ನು ಅನುಭವಿಸಿದಂತೆ ಹೇಳಿರುವ ಸ್ಥಳಗಳಲ್ಲಿ, **ಅಭಿನೆಯುತ್ತಿಲೇತಾತ್ಪರ್ಯಂ**=ನಾಟಕಗಳಲ್ಲಿ ಪಾತ್ರವಹಿಸುವ

ನಟನು, ನಿಜವಾಗಿಯೂ ದುಃಖಾದಿಗಳನ್ನು ಅನುಭವಿಸದಿದ್ದರೂ, ನಾಟಕದ ಪ್ರಸಂಗಗಳಿಗನುಗುಣವಾಗಿ ಶೋಕಮೋಹಾದಿಗಳನ್ನು ಅಭಿನಯಿಸಿ ತೋರಿಸುವಂತೆ, ಪರಮಾತ್ಮನೂ ದುಖಾದಿಗಳನ್ನು ಕೇವಲ ಅಭಿನಯಿಸಿದಂತೆ, ಅರಿಯಬೇಕು. **ಇವ್ವರ್ಥತ್ತೈ** = ಈ ರೀತಿಯಾದ ಅಭಿನಯರೂಪದ ಅರ್ಥವನ್ನು ತೋರುವ ಈ ಕೆಳಕಂಡ ಶ್ಲೋಕಗಳೇ ಮೊದಲಾದುವನ್ನು - **ಇಂಗೆ** = ಈ ಸಂದರ್ಭದಲ್ಲಿ, **ಅನುಸಂಧಿಪ್ಪದು** = ಅನುಸಂಧಾನಮಾಡುವುದು.

ಈ ಸಂದರ್ಭದಲ್ಲಿ ಆಚಾರ್ಯರು ಪ್ರತೀಕಗಳಾಗಿ ಉದ್ಧರಿಸುವ ಶ್ಲೋಕಗಳ ಮತ್ತು ಆಳ್ವಾರರ ಪಾಶುರಗಳ ಪೂರ್ಣರೂಪ ಮತ್ತು ಅರ್ಥಗಳು ಈ ಕೆಳಕಂಡಂತಿವೆ:

೧. **"ಮನುಷ್ಯದೇಹಿನಾಂ ಚೇಷ್ಟಾಂ ಇತ್ಯೇವಂ ಅನುವರ್ತತೇ |**
**ಲೀಲಾ ಜಗತ್ಪತೇಃ ತಸ್ಯ ಛಂದಸಃ ಸಂಪ್ರವರ್ತತೇ ||**
(ವಿಷ್ಣುಪುರಾಣ : ೫-೨೨-೧೮)

(ಮನುಷ್ಯರ ದೇಹದಿಂದ (ಅವತಾರ ಕಾಲದಲ್ಲಿ) ಅವನು ನಡೆಯಿಸುವ ಚೇಷ್ಟೆಗಳೆಲ್ಲವೂ, ಜಗತ್ತಿಗೆ ಒಡೆಯನಾದ ಪರಮಾತ್ಮನಿಗೆ ಲೀಲಾರೂಪವಾಗಿರುತ್ತದೆ. ಅವನ ಇಷ್ಟದಂತೆ ಆಯಾ ಚೇಷ್ಟೆಗಳು ನಡೆಯುತ್ತಿರುತ್ತವೆ.)

೨. **"ಈಶನ್ನಪಿ ಮಹಾಯೋಗೀ ಸರ್ವಸ್ಯ ಜಗತಃ ಪ್ರಭುಃ |**
**ಕರ್ಮಾಣ್ಯಾರಭತೇ ಕರ್ತುಂ ಕೀನಾಶ ಇವ ದುರ್ಬಲಃ ||**
(ಮಹಾಭಾರತ— ಉದ್ಯೋಗಪರ್ವ-೬೨ ಅ ೨೮ ಶ್ಲೋ)

(ಎಲ್ಲ ಲೋಕಗಳಿಗೂ ಪ್ರಭುವಾಗಿ, ಅಘಟಿತಘಟನಾಸಾಮರ್ಥ್ಯವುಳ್ಳವನಾಗಿ ಮಹಾಯೋಗಿಯಾದ, ಎಲ್ಲ ಚೇತನಾಚೇತನವರ್ಗವನ್ನೂ ತನ್ನ ನಿಯಮನದಲ್ಲಿಟ್ಟುಕೊಂಡಿದ್ದರೂ (ಅವತಾರ ಕಾಲದಲ್ಲಿ) ದುರ್ಬಲನಾದ (ಕೀನಾಶಃ) ರೈತನೊಬ್ಬನು ಮಾಡುವ ಕೆಲಸದಂತೆ, ಏನೂ ಅರಿಯದವನಂತೆ ತನ್ನ ಚೇಷ್ಟೆಗಳನ್ನು ಪ್ರಾರಂಭಿಸುತ್ತಾನೆ.)

೩. "ತೇನವಂಚಯತೇ ಲೋಕಾ‌ನ್ ಮಾಯಾಯೋಗೇನ ಕೇಶವಃ।
ಯೇತಮೇವ ಪ್ರಪದ್ಯಂತೇ ನ ತೇ ಮುಹ್ಯಂತಿ ಮಾನವಃ ॥"
—(ಮಹಾಭಾರತ-ಉದ್ಯೋಗಪರ್ವ ೬೨-೫೫)

(ಕೇಶವನಾದರೋ ತನ್ನ (ಸಂಕಲ್ಪ) ಮಾಯೆಯಿಂದ ಎಲ್ಲ ಜನರನ್ನೂ ಮೋಹಕ್ಕೆ ಒಳಗುಮಾಡಿ ಮೋಸಗೊಳಸುತ್ತಾನೆ. ಆದರೆ, ಯಾರು ಅವನನ್ನೇ ಶರಣು ಹೋಗುತ್ತಾರೆಯೋ, ಆ ಮನುಷ್ಯರು ಅವನ ಮಾಯೆಯ ಮೋಹಕ್ಕೆ ಒಳಗಾಗುವುದಿಲ್ಲ.)

೪. ಎಳಿವರುಮಿಯಲ್ಬಿನ ನಿಲೈವರಂಬಿಲ ಪಲಪಿರಪ್ಪಾಯ್,
ಒಳಿವರುಮುಳುನಲಂ ಮುದಲಿಲ ಕೇಡಿಲ ವಿಡಾಮ್,
ತೆಳಿದರು ನಿಲೈಮೈಯದೊಳಿವಿಲನ್ ಮುಳುವದು-
ಮಿರೈಯೋನ್
ಅಳಿವರು ಮರುಳಿನೋಡಕತ್ತನನ್ ಪುರತ್ತನನಮ್ಮೈನ್ದೇ ॥
(ನಮ್ಮಾಳ್ವಾರ್ ತಿರುವಾಯ್ಮೊಳಿ : ೧-೩-೨)

**ನಿಲೈ** = ಒಂದು ಸ್ಥಿತಿಯೂ, **ವರಂಬು** = ಒಂದು ನಿಯತಿಯೂ, **ಇಲ್ಲ**=ಇಲ್ಲದ, **ಪಲ**=ಅನೇಕ ಪ್ರಕಾರವಾದ, **ಪಿರಪ್ಪಾಯ್**= ಅವತಾರ ಗಳುಳ್ಳವನಾಗಿ, **ಮುದಲಿಲ** = ಆದಿಯಿಲ್ಲದ, **ಕೇಡಿಲ** = ಅನ್ತವಿಲ್ಲದ, **ಮುಳುನಲಂ**=(ಪೂರ್ಣಾನನ್ದಾದಿ) ಕಲ್ಯಾಣಗುಣಗಳೆಲ್ಲಾ, **ಒಳಿವರುಂ**= ಪ್ರಕಾಶಿಸುವಂತೆ, **ಎಳಿವರುಂ ಇಯಲ್ಬಿನನ್** = ಸೌಲಭ್ಯವನ್ನೇ ಸ್ವಭಾವವಾಗಿ ಯುಳ್ಳವನ್ನೂ, **ವೀಡಾಮ್** = ಮೋಕ್ಷವೆಂಬ, **ತೆಳಿತರುಂ**= ವಿಶದವಾದ ಜ್ಞಾನವನ್ನುಂಟುಮಾಡುವ, **ಅದುನಿಲೈಮೈ** = ಆ ಸ್ಥಿತಿಯನ್ನು, **ಮುಳುವದುಮ್** = ಪೂರ್ಣವಾಗಿ, **ಒಳಿವಿಲನ್** = ಸನ್ತತವಾಗಿಯುಳ್ಳ, **ಇರೈಯೋನ್**=ಸ್ವಾಮಿಯೂ (ಆದ ಭಗವಂತನು), **ಅಳಿವರುಮ್**= ಉಪಕಾರಕವಾದ, **ಅರುಳಿನೋಡು** = ಕೃಪೆಯೊಡನೆ, **ಅಮ್ಮೈನ್ದು**= ಕೂಡಿದವನಾಗಿ, **ಅಕತ್ತನನ್** = (ಆಶ್ರಿತರಿಗೆ) ಅಂತರಂಗದಲ್ಲಿರುವವನು, **ಪುರತ್ತನನ್**=ಇತರರಿಗೆ ಬಾಹ್ಯನು.

ಸರ್ವೇಶ್ವರನು ತನ್ನ ಸೌಲಭ್ಯದಿಂದ ನಾನಾ ಪ್ರಕಾರವಾದ ಅವತಾರಗಳನ್ನು ಮಾಡುವಾಗ ಒಂದು ವಿಧವಾದ ಸ್ಥಿತಿಯೂ ನಿಯತಿಯೂ ಇಲ್ಲದವನಾಗಿದ್ದಾಗ್ಯೂ ಆದ್ಯಂತರವಿಲ್ಲದ ಪರಿಪೂರ್ಣಕಲ್ಯಾಣಗುಣಗಳುಳ್ಳವನಾಗಿ, ದಿವ್ಯತೇಜೋನಿಧಿಯಾಗಿ, ಯಾವಾಗಲೂ ಮೋಕ್ಷಜ್ಞಾನಫಲ ಪ್ರದನಾಗಿ ಏಕವಿಧಸ್ಥಿತಿಯುಳ್ಳವನಾಗಿಯೂ ಚೆನ್ನಾಗಿ ಪ್ರಕಾಶಿಸುತ್ತಿದ್ದಾನೆ. ಮತ್ತು ಸಕಲಲೋಕೋಪಕಾರಕವಾದ ತನ್ನ ಕೃಪಾಗುಣದಿಂದ ಆಶ್ರಿತರಿಗೆ ಅಂತರಂಗ ಪ್ರಿಯನಾಗಿಯೂ, ಅನಾಶ್ರಿತರಿಗೆ ಬಾಹ್ಯನಾಗಿ ದುರ್ಲಭನಾಗಿಯೂ ಇರುತ್ತಾನೆ.

ಈ ಮೇಲೆ ಉದಹರಿಸಿರುವ ದಿವ್ಯಸೂಕ್ತಿಗಳಿಂದ, ಭಗವಂತನು ಅವತಾರ ಕಾಲಗಳಲ್ಲಿ ಶೋಕಮೋಹಾದಿಗಳನ್ನು ಅನುಭವಿಸಿದಂತೆ ತೋರುವಿಕೆಯು ಕೇವಲ ಅಭಿನಯವೇ ವಿನಹ ವಾಸ್ತವಿಕವಾದುದಲ್ಲ, ಅವನು ಹೇಯಗುಣ–ರಹಿತನು—ಎಂಬುದು ಸ್ಪಷ್ಟವಾಗುತ್ತದೆ.

**ಇಪ್ಪಡಿ ಇಶ್ಲೋಕತ್ತಾಲ್ ಸಿದ್ಧೋಪಾಯ ಭೂತನಾನ ಶರಣ್ಯನ್ಯೈಯುಂ ಅವನುಡೈಯ ವಶೀಕರಣಾರ್ಥಮಾಕ ಸಾಧ್ಯಮಾನ ಅಧಿಕಾರಿಕೃತ್ಯ ವಿಶೇಷತ್ತೈಯುಮ್ ಶ್ರುತಿಸ್ಮೃತಿಕಳಿಲ್ ಪ್ರಸಿದ್ಧಿ ಕೋಟ್ಟ್ರ ಅನುವಾದ ಸ್ವರೂಪಮಾನ ವಾಕ್ಯತ್ತಾಲೇ ಕಾಟ್ಟಿ, ಭರಸ್ವೀಕಾರಂ ಪಣ್ಣಿನ ತನ್ನುಡೈಯ ಕೃತ್ಯಮಾಕ "ಜನ್ಮಜನ್ಮಾನ್ತರಂ ಕಾತ್ತು" ಇತ್ಯಾದಿಕಳಿಲ್ ಶೊಲ್ಲುಕಿರ ಸರ್ವಾನಿಷ್ಟ ನಿವರ್ತನತ್ತೈಯುಮ್ ಪರಮಪುರುಷಾರ್ಥ ಪ್ರಾಪಣತ್ತೈಯುಮ್ ಪ್ರಪನ್ನನ್ ತಿರತ್ತಿಲ್ ವಾಶಿಕೋಟ್ಟ್ರ ಉತ್ತರ ಶ್ಲೋಕತ್ತಾಲೆ ಅರುಳಿಚ್ಚೆಯ್‌ಕಿರಾನ್.**

**ಇಪ್ಪಡಿ** = ಈ ಮೊದಲೇ ಹೇಳಿದಂತೆ, **ಇಶ್ಲೋಕತ್ತಿಲ್** = ಈ ವರಾಹಚರಮಶ್ಲೋಕದ ಪೂರ್ವ ಶ್ಲೋಕದಲ್ಲಿ, **ಸಿದ್ಧೋಪಾಯ ಭೂತನಾನ ಶರಣ್ಯನ್ಯೈಯುಂ**= ಚೇತನನು 'ರಕ್ಷಿಸು' —ಎಂದು ಕೇಳುವ

ಮುನ್ನವೇ ರಕ್ಷಿಸಲು ಸಿದ್ಧನಾಗಿ ಸಂಕಲ್ಪಿಸಿ ನಿಂತಿರುವ — ಸಿದ್ಧೋಪಾಯ ಭೂತನಾದ, ಎಲ್ಲರನ್ನೂ, ರಕ್ಷಿಸುವ ಸಾಮರ್ಥ್ಯವುಳ್ಳ ಮತ್ತು ರಕ್ಷಕನಾದ ಭಗವಂತನ ವಿಷಯವನ್ನು, **ಅವನುಡೈಯ ವಶೀಕರಣಾರ್ಥ ಮಾಕ ಸಾಧ್ಯಮಾನ**=ಆ ಭಗವಂತನನ್ನು ವಶಪಡಿಸಿಕೊಳ್ಳಲು (ಒಲಿಸಿಕೊಳ್ಳಲು) ಮಾಡಿಯೇ ತೀರಬೇಕಾದ, "ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ" —ಎಂದು ಹೇಳಲ್ಪಟ್ಟಿರುವ, ಅವನ ಅಡಿದಾವರೆಯಲ್ಲಿ ಮಾಡಬೇಕಾದ ಶರಣಾಗತಿಯನ್ನು, **ಅಧಿಕಾರ ಕೃತ್ಯವಿಶೇಷತ್ತೈಯುಮ್**=ಆ ಶರಣಾಗತಿಯನ್ನನುಷ್ಠಿಸಲು ಯೋಗ್ಯರಾದ ಅಧಿಕಾರಿಗಳಾರೆಂಬುದನ್ನೂ, ಅವರು ಮಾಡ-ಬೇಕಾದ ಕೆಲಸಗಳಾವುವು ಎಂಬುದನ್ನೂ, **ಶ್ರುತಿಸ್ಮೃತಿಗಳಿಲ್ ಪ್ರಸಿದ್ಧಿ-ತೋಟ್ಟ**=ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿರುವ ವಿಷಯವನ್ನೂ, **ಅನುವಾದ ಸ್ವರೂಪಮಾನ ವಾಕ್ಯತ್ತಾಲೇ ಕಾಟ್ಟಿ**=ಅನುವಾದ ರೂಪದಲ್ಲಿ ತಿಳಿಸುವ ವಾಕ್ಯದಿಂದ ತಿಳಿಸಿ, **ಭರಸ್ವೀಕಾರಂ ಪಣ್ಣಿನ**=ತನ್ನಲ್ಲಿ ಶರಣಾಗತಿ ಮಾಡಿದ ಚೇತನನ 'ರಕ್ಷಾಭರ' — ರಕ್ಷಿಸುವಹೊಣೆಯನ್ನು ಒಪ್ಪಿಕೊಂಡು ಹೊತ್ತು ಕೊಂಡಿರುವ, **ತನ್ನುಡೈಯ** = ತನ್ನದಾದ, **ಕೃತ್ಯಮಾಕ** = ಕೆಲಸವಾದ **"ಜನ್ಮಜನ್ಮಾಂತರಂಕಾತ್ತು"**='ಶರಣಾಗತನ ಜನ್ಮಜನ್ಮಾಂತರಗಳನ್ನು(ಜನ್ಮ ಮರಣ ಚಕ್ರವನ್ನೆ') ತಪ್ಪಿಸಿ ಭಗವಂತನು ರಕ್ಷಿಸುತ್ತಾನೆ– ಎಂದು ಹೇಳುವ, **ಇತ್ಯಾದಿಕಳಿಲ್**=ಇದೇ ಮೊದಲಾದ ಶ್ರೀಸೂಕ್ತಿಗಳಲ್ಲಿ, **ಶೊಲ್ಲುಕಿರ**= ಹೇಳಿರುವ, **ಸರ್ವಾನಿಷ್ಟನಿವರ್ತನತ್ತೈಯುಂ** = ಪುನರ್ಜನ್ಮಾದಿ ಎಲ್ಲ ವಿಧವಾದ ಅನಿಷ್ಟಗಳನ್ನೂ ನಿವಾರಣೆ ಮಾಡುವ ಕ್ರಮವನ್ನೂ, **ಪರಮ-ಪುರುಷಾರ್ಥಪ್ರಾಪಣತ್ತೈಯುಂ**=ಪರಮ ಪುರುಷಾರ್ಥವಾದ ಶ್ರೀವೈಕುಂಠ ಲೋಕವನ್ನು ಸೇರಿಸುವಿಕೆಯೂ, **ಪ್ರಪನ್ನನ್ ತಿರತ್ತಿಲ್**=ಶರಣಾಗತನ ಮನಸ್ಸಿನಲ್ಲಿ, **ವಾಶಿತೋಟ್ಟ**=ಮನದಟ್ಟಾಗುವಂತೆ, **ಉತ್ತರಶ್ಲೋಕತ್ತಾಲೆ**-ಎರಡನೆಯ ಶ್ಲೋಕದಿಂದ, **ಅರುಳಿಚ್ಚೆಯ್‌ಕಿರಾನ್** = ವರಾಹಸ್ವಾಮಿಯು ಕೃಪೆಮಾಡಿ ತಿಳಿಸುತ್ತಾನೆ.

**'ತತಃ' — ಎನ್ಗಿರಪದತ್ತಿಲ್, ಸ್ಮರಣಂ ಹೇತುವಾಕವೇನ್ರು**

**ಪೊರುಳಾನಾಲ್, ಇದುಕ್ಕೊರು ಪ್ರಯೋಜನಮಿಲ್ಲೈ. 'ತಮ್'– ಎನ್ಗಿರವಳವಾಲುಂ ಇದು ತೋಟ್ರುಮ್. ಇಪ್ಪಡಿಯೇ 'ಸ್ಮರಣತ್ತುಕ್ಕು ಪಿನ್ಬು' — ಎನ್ರು ತಾತ್ಪರ್ಯಂ ಕೊಂಡಾಲುಂ, ಮಿಕುದಿಯಾಮೆನ್ರಿಲ್ ಆರ್ತಿವಿಶೇಷಾದಿಕಳಾಲೇ ಪ್ರಪತ್ತಿಕ್ಕು ಅನಂತರ ಕ್ಷಣತ್ತಿಲೇ ಶರೀರಾನ್ತ– ತ್ತಿಲ್ ಪ್ರಸ್ತುತಮಾನಾಲುಂ, ಇಂದ ಸ್ಮರಣತ್ತಳವೇ ವ್ಯಾಜಮಾಕ ಶರೀರಾನ್ತತ್ತಿಲ್ (ಶರೀರಾಂತರಂ) ಪ್ರವೇಶಿಯಾದಪಡಿ ಅಪ್ಪೋದೇ ರಕ್ಷಿಪ್ಪನ್. ಇವನುಕ್ಕು ಭರನ್ಯಾಸಂ ಪಣ್ಣಿನ ವಿಷಯತ್ತಿಲ್ ಕರ್ತವ್ಯ ಶೇಷಮಿಲ್ಲೈ — ಎನ್ರು ತೋಟ್ರುಕೈಕ್ಕಾಕ 'ತತಃ'—ಎನ್ಗಿರದು.**

ಎರಡನೆಯ ವರಾಹ ಚರಮಶ್ಲೋಕದಲ್ಲಿನ ಒಂದು ಪದದ ಅರ್ಥವನ್ನೂ ವಿಮರ್ಶಿಸಿ, ನಿಷ್ಕೃಷ್ಟವಾದ ಅರ್ಥವನ್ನು ತಿಳಿಸುತ್ತಾರೆ. ಅದರಲ್ಲಿ ಮೊದಲನೆ- ಯದಾಗಿ 'ತತಃ' — **ಎನ್ಗಿರಪದತ್ತಿಲ್** = 'ಬಳಿಕ' — ಎಂಬ ಅರ್ಥ- ವನ್ನು ತೋರುವ 'ತತಃ' ಎಂಬ ಪದದಲ್ಲಿ, **ಸ್ಮರಣಂ ಹೇತುವಾಕ ವೆನ್ರು ಪೊರುಳಾನಾಲ್** = ಸ್ಮರಣವನ್ನೇ ಕಾರಣವನ್ನಾಗಿಸಿ, 'ಸ್ಮರಣೆಮಾಡಿದ ಬಳಿಕ'—ಎಂದು ಅರ್ಥಮಾಡಿದರೆ, **ಇದುಕ್ಕು ಒರುಪ್ರಯೋಜನಮಿಲ್ಲೈ** = ಈ ಅರ್ಥಕ್ಕೆ ಯಾವ ಪ್ರಯೋಜನವೂ ಇರುವುದಿಲ್ಲ. ಏಕೆಂದರೆ, **'ತಮ್' ಎನ್ಗಿರವಳವಾಲುಂ** = 'ತಮ್' — ಆ ಸ್ಮರಣೆಮಾಡಿದವನನ್ನೂ ಪರಮಗತಿಗೆ ಒಯ್ಯುತ್ತೇನೆಂದು ಹೇಳುವಲ್ಲಿ, **ಇದುತೋಟ್ರುಂ** = 'ಸ್ಮರಣಾ- ನಂತರ'—ಎಂಬರ್ಥವು ತೋರಿಬರುತ್ತದೆ. **ಇಪ್ಪಡಿಯೇ** = ಇದೇರೀತಿ, 'ತಮ್' ಶಬ್ದದಿಂದ ತೋರುವ ಅರ್ಥವನ್ನೇ ಮತ್ತೇ, **ಸ್ಮರಣತ್ತುಕ್ಕು ಪಿನ್ಬು** = ಸ್ಮರಣಮಾಡಿದ ಬಳಿಕ, **ಎನ್ರುತಾತ್ಪರ್ಯಂ ಕೊಂಡಾಲುಂ** = ಎಂದು ತಾತ್ಪರ್ಯವನ್ನು ಗ್ರಹಿಸಿದರೂ, **ಮಿಕುದಿಯಾಮೆನ್ರಿಲ್** = ಹೇಳಿ- ದುದನ್ನೇ ಮತ್ತೆ ಹೇಳಿದುದರಿಂದ ನಿಷ್ಪ್ರಯೋಜನ ವಲ್ಲವೋ — ಎಂದರೆ, **ಆರ್ತಿವಿಶೇಷಾದಿಕಳಾಲೇ** = ಭಗವಂತನ ಪೂರ್ಣ ಸ್ವರೂಪವನ್ನು ಕಾಣದೇ ಒಂದು ಕ್ಷಣವೂ ಇರಲಾಗದ ಸ್ಥಿತಿಯನ್ನು ಹೊಂದಿದ ಚೇತನರು, ಅವನಲ್ಲಿ ತಮ್ಮ ಆರ್ತಿವಿಶೇಷವನ್ನುತೋಡಿಕೊಂಡು ಶರಣಾಗತಿ ಮಾಡಿದರೆ, **ಪ್ರಪತ್ತಿಕ್ಕು**

**ಅನಂತರಕ್ಷಣತ್ತಿಲೇ**=ಶರಣಾಗತಿಯ ಉತ್ತರ ಕ್ಷಣದಲ್ಲಿಯೇ, **ಶರೀರಪಾತಂ ಪ್ರಸ್ತುತಮಾನಾಲುಂ**=ದೇಹಾವಸಾನ ಸಂಭವಿಸಿದರೂ, **ಇಂದ ಸ್ಮರಣ-ತ್ತಿಳವೇ**=ಪೂರ್ವಕ್ಷಣದಲ್ಲಿ ಆ ಚೇತನರುಮಾಡಿದ ಶರಣಾಗತಿರೂಪವಾದ ಸ್ಮರಣವನ್ನೇ, **ವ್ಯಾಜಮಾಕ**=ನೆಪವಾಗಿಟ್ಟುಕೊಂಡು, **ಶರೀರಾಂತತ್ತಿಲ್** = ದೇಹಾವಸಾನದಲ್ಲಿ, (ಶರೀರಾಂತರಂ) **ಪ್ರವೇಶಿಯಾದಪಡಿ** = ಇತರ ದೇಹಾಂತರಗಳನ್ನು (ಕರ್ಮಾನುಗುಣವಾಗಿ) ಪ್ರವೇಶಿಸದಂತೆ, **ಅಪ್ಪೋದೇ** ಆಗಲೇ, **ರಕ್ಷಿಪ್ಪನ್** = ರಕ್ಷಿಸುತ್ತಾನೆ. ಆದುದರಿಂದ, **ಇವನುಕ್ಕು** = ಪ್ರಪನ್ನನಿಗೆ, **ಭರನ್ಯಾಸಂ ಪಣ್ಣಿನವಿಷಯತ್ತಿಲ್**=ಭರನ್ಯಾಸ ಮಾಡಿದ ವಿಷಯದಲ್ಲಿ, **ಕರ್ತವ್ಯಶೇಷಮಿಲ್ಲೈ** = ಮುಂದೆ ಮಾಡಬೇಕಾದ ಯಾವ ಒಂದು ಕರ್ತವ್ಯವೂ ಇರುವುದಿಲ್ಲ. **ಎನ್ರು**=ಎಂದು, **ತೋಟ್ರುಕೈಕ್ಕಾಕ** ತಿಳಿಯಪಡಿಸುವ ಸಲುವಾಗಿ, **'ತತಃ'—ಎನ್ಗಿರದು** — 'ತತಃ' (ಅನಂತರ) ಎಂದು ಹೇಳಿರುವುದು.

**'ತಮ್'** **ಎನ್ರದು ಕೃತಕೃತ್ಯನಾಯ್ ಚಾತಕವೃತ್ತಿಯಾಯ್) ತನಕ್ಕುವರುಮ್ ಮರಣತ್ತೈ ಪ್ರಿಯಾತಿಥಿಯೈಪ್ಪೋಲೇ ಪಾರ್ತ್ತಿರುಕ್ಕು ಮವನ್ನೈ—ಎನ್ರಪಡಿ.**

**'ತಮ್'—ಎನ್ರದು** = ಈ ಚರಮಶ್ಲೋಕದಲ್ಲಿರುವ 'ತಮ್' (ಅವನನ್ನೂ) ಎಂಬ ಪದವು, **ಕೃತಕೃತ್ಯನಾಯ್**=ತಾನು ಮಾಡಬೇಕಾದ, ತನ್ನ ರಕ್ಷಾಭರವನ್ನು ಪರಮಾತ್ಮನಲ್ಲಿ ಅರ್ಪಣಮಾಡಿರುವುದರಿಂದ ಕೃತಾರ್ಥ-ನಾಗಿ, **ಚಾತಕವೃತ್ತಿಯಾಯ್**=ಚಾತಕಪಕ್ಷಿಯು ತನಗೆ ಹಿತವಾದ ಮಳೆಯನ್ನು ಸುರಿಸುವ ಮೋಡಗಳನ್ನು ಮಾತ್ರವೇ ಎದಿರುನೋಡುತ್ತಾ ಕುಳಿತುಕೊಳ್ಳುವಂತೆ, **ತನುಕ್ಕುವರುಮ್** = ತನಗೆ ಬರುವ, **ಮರಣತ್ತೈ** = ಸಾವನ್ನು, **ಪ್ರಿಯಾತಿಥಿಯೈಪ್ಪೋಲೆ**='ಮೃತ್ಯುಂ ಪ್ರಿಯಮಿವಾತಿಥಿಮ್' —ಎಂದು ಹೇಳುವಂತೆ, ಪ್ರಿಯವಾದ ಅತಿಥಿಯು ತನ್ನಲ್ಲಿಗೆ ಬರಬೇಕೆಂದು, **ಪಾರ್ತಿರುಕ್ಕುಮವನ್ನೈ** = ಎದಿರುನೋಡುತ್ತಿರುವವನನ್ನು, **ಎನ್ರಪಡಿ** = ಎಂದು ಹೇಳಿದಂತಾಯಿತು.

**'ಮದ್ಭಕ್ತಂ'—ಎನ್ರು ನಮ್ಮೈಯೇ ನಿರತಿಶಯ ಭೋಗ್ಯಮಾಕ ಉಕನ್ದು ಪತ್ತಿನವನೈ ಎನ್ಗಿರದು. 'ತಂ – ಮದ್ಭಕ್ತಂ'—ಎನ್ಗಿರ ಇರಂಡು ಪದಙ್ಗಲುಮಾಕ ಅನನ್ಯೋಪಾಯನುಮಾಯ್ ಅನನ್ಯಪ್ರಯೋಜ-ನಮಾನವನೈ ಎನ್ಗಿರಾನ್. ಇತ್ತಾಲೇ ಐಶ್ವರ್ಯಕೈವಲ್ಯಾರ್ಥಪ್ರಪನ್ನ-ರೈಯುಮ್ ಮೋಕ್ಷಾರ್ಥೋಪಾಸಕರ್ಯೆಯುಮ್ ವ್ಯವಚ್ಛೇದಿಕ್ಕಿರದು.**

**'ಮದ್ಭಕ್ತಂ' — ಎನ್ರು** = 'ಮದ್ಭಕ್ತಂ' (ನನ್ನ ಭಕ್ತನನ್ನು) — ಎಂದು ವರಾಹನು ಹೇಳಿರುವ ಈ ಚರಮಶ್ಲೋಕದ ಪದವು, **ನಮ್ಮೈಯೇ** = ನನ್ನನ್ನೇ, **ನಿರತಿಶಯ ಭೋಗ್ಯಮಾಕ** = ಅದಕ್ಕಿಂತಲೂ ಭೋಗ್ಯರೂಪ-ವಾದ ವಸ್ತುವೇ ಇಲ್ಲವೆಂದು, **ಉಕನ್ದು** = ಸಂತೋಷದಿಂದ, **ಪತ್ತಿನವನೈ** = ಆಶ್ರಯಿಸಿದವನನ್ನು, **ಎನ್ಗಿರದು** = ಎಂದು ಹೇಳುತ್ತದೆ. **ತಂ – ಮದ್ಭಕ್ತಂ'** = ಆ ನನ್ನ ಭಕ್ತನನ್ನೂ, **ಎನ್ಗಿರ** = ಎನ್ನುವ, **ಇರಂಡುಪದ-ಙ್ಗಲುಮಾಕ** = ಎರಡು ಪದಗಳಿಂದಲೂ ಕೂಡಿಸಿ, **ಅನನ್ಯೋಪಾಯ-ನುಮಾಯ್** = ಭಗವಂತನಲ್ಲಿ ಶರಣುಹೋಗುವುದೊಂದನ್ನುಳಿದು, ಬೇರೆ ಉಪಾಯವನ್ನಾಶ್ರಯಿಸದ, **ಅನನ್ಯಪ್ರಯೋಜನಮಾನವನೈ** = ಭಗವಂತ ನನ್ನು, ಸೇರುವುದೊಂದನ್ನುಳಿತು ಬೇರೆ ಇತರ ಪ್ರಯೋಜನಗಳನ್ನಪೇಕ್ಷಿಸ-ದಿರುವ ಪ್ರಪನ್ನನನ್ನು, **ಎನ್ಗಿರಾನ್** = ಎಂದು ಹೇಳುತ್ತಾನೆ. **ಇತ್ತಾಲೇ** = ಇದರಿಂದ, **ಐಶ್ವರ್ಯಕೈವಲ್ಯಾರ್ಥಪ್ರಪನ್ನರೈಯುಮ್** = ಐಹಿಕವಾದ ಐಶ್ವರ್ಯವನ್ನು ಪಡೆಯುವಸಲುವಾಗಿ ಭಗವಂತನಲ್ಲಿ ಮೊರೆಯಿಟ್ಟ ಆರ್ತ ಮತ್ತು ಅರ್ಥಾರ್ಥಿಗಳನ್ನೂ, ಕೈವಲ್ಯವನ್ನು ಪಡೆಯಬೇಕೆಂದು ಪರಮಾತ್ಮ ನಲ್ಲಿ ಶರಣುಹೋದ 'ಜಿಜ್ಞಾಸು' ಗಳನ್ನೂ, **ಮೋಕ್ಷಾರ್ಥೋಪಾಸಕ-ರೈಯುಂ** = ಮೋಕ್ಷವನ್ನು ಪಡೆಯಬೇಕೆಂದು ಭಕ್ತಿಯೋಗನಿಷ್ಠನಾಗಿ ವಿದ್ಯೋಪಾಸನೆ ಮಾಡುವವರನ್ನೂ, **ವ್ಯವಚ್ಛೇದಿಕ್ಕಿರದು** = ಬೇರ್ಪಡಿಸುತ್ತವೆ. (ಅಂದರೆ, ಆರ್ತ, ಜಿಜ್ಞಾಸು ಮತ್ತು ಅರ್ಥಾರ್ಥಿಗಳನ್ನುದ್ದೇಶಿಸಿ ವರಾಹನು ಈ ಚರಮಶ್ಲೋಕವನ್ನು ಹೇಳಿಲ್ಲ ಎಂದು ಸ್ಪಷ್ಟವಾಗಿ ತಿಳಿಯುತ್ತದೆ.)

**ಕಾರುಣಿಕನಾನ ಈಶ್ವರನ್ ಎಲ್ಲಾರುಕ್ಕುಂ ಮೋಕ್ಷಂ ಕೊಡುಕ್ಕ**

**ಪ್ರಾಪ್ತನೇಯಾಗಿಲುಂ, ಅನಾದಿಕರ್ಮಪ್ರವಾಹ ವಿಷಯಮಗ್ನರಾನ ಅಧಿಕಾರಿಕಳುಕ್ಕು ನಿರ್ವ್ಯಾಜಮಾಕ ಮೋಕ್ಷಂ ಕೊಡುತ್ತಾಲ್ ಕರ್ಮಾ-ನುರೂಪಫಲಪ್ರದಾಯಿತ್ವ ನಿಯಮಂ ಕುಲೈಯುಮ್. ಅದು ಕುಲೈಯಾಮೈಕ್ಕಾಕ ಇಪ್ಪದದ್ವಯತ್ತಿಲ್ ಶೊನ್ನ ಆಕಾರ ಮುಡೈ-ಯಾರ್ಕ್ಕು ಮೋಕ್ಷಮೆನ್ನಿರದು.**

**ಕಾರುಣಿಕನಾನ ಈಶ್ವರನ್** = ದಯಾಮಯನಾದ ಭಗವಂತನು, **ಎಲ್ಲಾರುಕ್ಕುಂ** = ಎಲ್ಲರಿಗೂ, **ಮೋಕ್ಷಂ ಕೊಡುಕ್ಕ** = ಮೋಕ್ಷವನ್ನು ಅನುಗ್ರಹಿಸಲು, **ಪ್ರಾಪ್ತನೇಯಾಕಿಲುಂ** = ಸಮರ್ಥನೇ ಆದರೂ, **ಅನಾದಿ-ಕರ್ಮ ಪ್ರವಾಹವಿಷಯಮಗ್ನರಾನ** = ಅನಾದಿಯಾದ ಕರ್ಮಪರಂಪರೆಯಲ್ಲಿ ಸಿಲುಕಿಕೊಂಡು, (ವಿಷಿಣ್ವಂತಿ ಬಧ್ನಂತಿ ಇತಿ ವಿಷಯಾಃ) ತಮ್ಮನ್ನು ಬಂಧಕ್ಕೆ ಒಳಗುಮಾಡುವ ಶಬ್ದ. ಸ್ಪರ್ಶ, ರೂಪ, ರಸ ಮತ್ತು ಗಂಧ ವೆಂಬ ವಿಷಯಗಳಲ್ಲಿಯೇ ಮುಳುಗಿರುವ, **ಅಧಿಕಾರಿಕಳುಕ್ಕು** = ಅಧಿಕಾರಿ ಗಳಿಗೆ, **ನಿರ್ವ್ಯಾಜಮಾಕ** = ಯಾವ ಒಂದು ಕಾರಣವೂ ಇಲ್ಲದೆ, **ಮೋಕ್ಷಂ ಕೊಡುತ್ತಾಲೇ** = ಮೋಕ್ಷವನ್ನನುಗ್ರಹಿಸಿದರೆ, **ಕರ್ಮಾನುರೂಪ ಫಲ-ಪ್ರದಾಯಿತ್ವ ನಿಯಮಂ** = ಕರ್ಮಕ್ಕೆ ಅನುಗುಣವಾಗಿ ಫಲವನ್ನು ನೀಡುತ್ತಾನೆಂಬ ನಿಯಮವು, **ಕುಲೈಯುಂ** = ಭಂಗವಾಗುತ್ತದೆ. **ಅದು** = ಆ ನಿಯಮವು, **ಕುಲೈಯಾಮೈಕ್ಕಾಕ** = ಭಂಗವಾಗದಿರಲು, **ಇಪ್ಪದ-ದ್ವಯತ್ತಿಲ್** = 'ತಂ–ಮದ್ಭಕ್ತಂ' (ಆ ನನ್ನ ಭಕ್ತನನ್ನು) –ಎಂಬ ಎರಡು ಪದಗಳಲ್ಲಿ, **ಶೊನ್ನ** = ಹೇಳಿದ, **ಆಕಾರಮುಡೈಯಾರ್ಕ್ಕು** = ಆಕಾರ-ವನ್ನು ಹೊಂದಿರುವ, ಅಂದರೆ ಭಗವಂತನನ್ನುಳಿದು ಇನ್ನಾವವಸ್ತುವನ್ನೂ ಅಪೇಕ್ಷಿಸದೆ, ಅವನನ್ನೇ ಪಡೆಯಲು ಅವನ ಅಡಿದಾವರೆಯಲ್ಲಿ ಶರಣಾಗತಿ ಮಾಡಿರುವ ಭಗವದ್ಭಕ್ತನಿಗೆ ಮಾತ್ರವೇ, **'ಮೋಕ್ಷಂ' ಎನ್ನಿರದು** = ಮೋಕ್ಷವನ್ನನುಗ್ರಹಿಸುತ್ತಾನೆ ಎಂದು ಹೇಳಿರುವುದು.

**ಕಾರುಣ್ಯಮೊನ್ರೈಯುಂ ಪ್ರಧಾನಮಾಕ್ಕಿ, ಶಾಸ್ತ್ರಸಿದ್ಧ ಸ್ವತಂತ್ರ-ವ್ಯವಸ್ಥೆಯ್ಯೆ ಕುಲೈಕ್ಕಪಾರ್ಕಾಲ್, ಸತ್ಯಸಂಕಲ್ಪತೆ ಇಲ್ಲಾಮೈಯಾಲೇ,**

**ಇಸ್ವಾತಂತ್ರ್ಯಂ ಅಳಿನ್ದು ನಿರೀಶ್ವರವಾದಂ ಪ್ರಸಂಗಿಕ್ಕುಮ್. ಇಪ್ಪಡಿಯೇ ಸರ್ವರುಂ ಈಶ್ವರಕೃಪೆಯಾಲೇ ನಿತ್ಯಮುಕ್ತರಾಕತ್ತಟ್ಟೆನ್ನ? —ಎನ್ಗಿರ ಚೋದ್ಯಮುಮ್ ಪರಿಹೃತಮ್. ಜಗತ್ಕಾರಣತ್ವ ಮೋಕ್ಷ-ಪ್ರದತ್ವಾದಿಕಳ್ ಇಲ್ಲಾದುಪೋದು ಒರುವನೈ ವಿಶೇಷಿತ್ತು ಈಶ್ವರನ್ ಎನ್ಗೈಕ್ಕು ಪ್ರಮಾಣಮಿಲ್ಲೈಯಿರೇ.**

**ಕಾರುಣ್ಯನೊನ್ರೈಯುಮ್ ಪ್ರಧಾನಮಾಕ್ಕಿ** = ಭಗವಂತನು ಕರುಣಾಮಯ ಮೂರ್ತಿ. ಎಲ್ಲ ಚೇತನರನ್ನೂ ಉದ್ಧರಿಸಬೇಕೆಂಬುದೇ ಅವ ಹೆಬ್ಬಯಕೆ. ಆದುದರಿಂದ ಕೇವಲ ಮೋಕ್ಷಾರ್ಥವಾಗಿ ಶರಣಾಗತಿ ಮಾಡಿದ ಚೇತನರಿಗೆ ಮಾತ್ರ ಮೋಕ್ಷವನ್ನನುಗ್ರಹಿಸುತ್ತಾನೆ ಎಂದು, ಅವನ ನಿರ್ಹೇತುಕವಾದ ಕರುಣೆಯಿಂದ ಎಲ್ಲ ಚೇತನರಿಗೂ, ಅವರು ಉಪಾಯಾನು-ಷ್ಠಾನ ಮಾಡಲಿ ಅಥವಾ ಮಾಡದಿರಲಿ ಮೋಕ್ಷವನ್ನನು ಗ್ರಹಿಸುತ್ತಾನೆ-ಎಂದು, ಅವನ 'ಕರುಣೆ' ಅಥವಾ 'ದಯಾ' ಎಂಬ ಗುಣವೊಂದನ್ನೇ ಪ್ರಧಾನವಾಗಿಟ್ಟು, **ಶಾಸ್ತ್ರಸಿದ್ಧ ಸ್ವತಂತ್ರವ್ಯವಸ್ಥೆಯೈ** = ಅವನ ಆಜ್ಞಾ ರೂಪವಾದ ಶ್ರುತಿಸ್ಮೃತಿಗಳೆಂಬ ಶಾಸ್ತ್ರಗಳಲ್ಲಿ ಸಿದ್ಧವಾಗಿ ತಿಳಿದು ಬರುವ, ಮೋಕ್ಷಾರ್ಥವಾಗಿ ಉಪಾಯಾನುಷ್ಠಾನ ಮಾಡದಿರುವ ಚೇತನರಿಗೆ, ಅವರವರ ಕರ್ಮಾನುಗುಣವಾಗಿ ಜನ್ಮಮರಣಚಕ್ರದಲ್ಲಿ ಸಿಲುಕಿಕೊಂಡು, ಸುಖದುಃಖಾದಿಗಳನ್ನು ಅವರು ಅನುಭವಿಸುವಂತೆ ಮಾಡುತ್ತಾನೆ ಎಂಬ ವ್ಯವಸ್ಥೆಯನ್ನು, **ಕುಲೈಕ್ಕ ಪ್ಪಾರ್ತಾಲ್** = ಅಳಿಸಿಹಾಕಿ ಅರ್ಥವನ್ನು ಹೇಳಲು ತೊಡಗಿದರೆ, **ಸತ್ಯಸಂಕಲ್ಪತೆಯಿಲ್ಲಾಮೈಯಾಲೇ** = ಭಗವಂತನು, ಒಮ್ಮೆ, ಉಪಾಯಾ-ನುಷ್ಠಾನ ಮಾಡದಿರುವವರಿಗೆ ಅವರವರ ಕರ್ಮಾನುಗುಣವಾಗಿ ಫಲ ಕೊಡುತ್ತೇನೆಂದು ಮಾಡಿದ ಸಂಕಲ್ಪವನ್ನು ನಡೆಯಿಸದುದರಿಂದ, ಅವನಲ್ಲಿ 'ಸತ್ಯಸಂಕಲ್ಪತೆ' ಎಂಬ ಗುಣವು ಇಲ್ಲದೇ ಹೋಗುವುದರಿಂದ, **ಇಸ್ವಾ-ತಂತ್ರ್ಯಂ ಅಳಿನ್ದು** = ಚೇತನರಿಗೆ ಬಂಧ ಮೋಕ್ಷವನ್ನುಂಟುಮಾಡುವ ಸ್ವಾತಂತ್ರ್ಯವೇ ನಷ್ಟವಾಗಿ, **ನಿರೀಶ್ವರವಾದಂ ಪ್ರಸಂಗಿಕ್ಕುಮ್** = ಅವನೂ ಒಬ್ಬ ಬದ್ಧನಾದ ಒಬ್ಬ ಸಾಮಾನ್ಯ ಚೇತನನಂತಾಗಿ ಅವನ ಈಶ್ವರತ್ವವೇ

ಅಳಿದುಹೋಗಿ, ಈಶ್ವರನೇ ಇಲ್ಲವೆಂದು ಹೇಳುವ ನಿರೀಶ್ವರವಾದ ಪ್ರಸಂಗ-ವುಂಟಾಗುತ್ತದೆ. **ಇಪ್ಪಡಿಯೇ**= ಈ ರೀತಿಯಾಗಿಯೇ, **ಸರ್ವರುಕ್ಕುಂ**= ಎಲ್ಲರಿಗೂ (ಅವರು ಉಪಾಯಾನುಷ್ಠಾನ ಮಾಡಲಿ ಮಾಡದಿರಲಿ), **ಈಶ್ವರ-ಕೃಪೆಯಾಲೆ**= ಪರಮೇಶ್ವರನ ಕೃಪೆಯಿಂದ, **ನಿತ್ಯ ಮುಕ್ತರಾಕತ್ತಟ್ಟೈನ್ನ**= ನಿತ್ಯಮುಕ್ತರಾಗಲು ಅಭ್ಯಂತರವೇನಿದೆ ? ... **ಎನ್ಗಿರ ಚೋದ್ಯಮುಮು ಪರಿಹೃತಮ್** = ಎನ್ನುವ ಪ್ರಶ್ನೆಗೂ ಪರಿಹಾರ ಸಿಕ್ಕಂತಾಗುತ್ತದೆ. **ಜಗತ್ಕಾರಣತ್ವಮೋಕ್ಷಪ್ರದತ್ವಾದಿಗಳ್ ಇಲ್ಲಾದುಪ್ಪೋದು** = ಜಗತ್ತಿನ ಸೃಷ್ಟಿಸ್ಥಿತಿ ಲಯಗಳಿಗೆ ಕಾರಣನಾಗಿರುವಿಕೆ, ಅನಾದಿಯಾದ ಕರ್ಮದಿಂದ ಬದ್ಧರಾದ ಚೇತನರಿಗೆ ಅವರು ಮಾಡುವ ಉಪಾಯಾನುಷ್ಠಾನದಿಂದ ಮೋಕ್ಷವನ್ನು ಅನುಗ್ರಹಿಸುವಿಕೆ ಮತ್ತು ಇದಕ್ಕೆ ಸಹಾಯಕವಾದ ದಯಾ, ಕ್ಷಮಾ, ಸೌಲಭ್ಯ, ಸೌಶೀಲ್ಯತ್ವಾದಿ ಗುಣಗಳೂ ಪರಮಾತ್ಮನಲ್ಲಿಲ್ಲದಿದ್ದರೆ, ಇತರ ಚೇತನರಂತೆಯೇ ಅವನೂ ಆದುದರಿಂದ, **ಒರುವನೈ**=ಒಬ್ಬನನ್ನು ಮಾತ್ರ, **ವಿಶೇಷಿತ್ತು**=ವಿಶೇಷವಾಗಿಸಿ, **ಈಶ್ವರನೆನ್ಗೈಕ್ಕು**=ಈಶ್ವರನೆಂದು ಹೇಳಲು, **ಪ್ರಮಾಣಮಿಲ್ಲೈಯಿರೇ**=ಪ್ರಮಾಣವಿಲ್ಲವಲ್ಲವೇ ? (ಆದುದರಿಂದ ಮೋಕ್ಷಾರ್ಥವಾಗಿ ಉಪಾಯಾನುಷ್ಠಾನರೂಪಪ್ರಪತ್ತಿ ಮಾಡಿದವರಿಗೆ ಮಾತ್ರವೇ, ವರಾಹ ಚರಮಶ್ಲೋಕದಲ್ಲಿ ಹೇಳಿರುವಂತೆ, ಭಗವಂತನು, ಮೋಕ್ಷವನ್ನನುಗ್ರಹಿಸುತ್ತಾನೆ-ಎಂದು ತಿಳಿಯಬೇಕು).

ಅನಾದಿಯಾದ ಕರ್ಮಬಂಧಿತರಾದ ಚೇತನರು, ಜಗತ್ಸೃಷ್ಟಿಗೆ ಪೂರ್ವ-ದಲ್ಲಿ, ದೇಹವಿಲ್ಲದಿರುವುದರಿಂದ, ಅಚಿತ್ತುಗಳಂತೆ ಬಿದ್ದಿರುತ್ತಾರೆ. ಆಗ ಪರಮಾತ್ಮನಂತೆಯೇ ಪರಿಪೂರ್ಣ ಬ್ರಹ್ಮಾನಂದವನ್ನು ಅನುಭವಿಸಲು ಅರ್ಹತೆಯುಳ್ಳ ಚೇತನರು, ಕರ್ಮದ ಸಂಕೋಲೆಯಿಂದ, ಆ ಆನಂದವ-ನ್ನನುಭವಿಸದೆ ಬಿದ್ದಿರುವುದನ್ನು ಕಂಡು ದಯೆಯೇ ಮೂರ್ತಿವೆತ್ತಂತಿರುವ ಪರಮಾತ್ಮನು, ತನ್ನ ನಿರ್ಹೇತುಕವಾದ ಕೃಪೆಯಿಂದ, ಇವರಿಗೋಸ್ಕರವೇ ಜಗತ್ಸೃಷ್ಟಿಮಾಡಿ, ಕರಣಕಳೇಬರಗಳನ್ನು ಅನುಗ್ರಹಿಸಿಕೊಟ್ಟು, ಪೂರ್ವ ಕಲ್ಪದಲ್ಲಿ ಅನೇಕ ವರ್ಷಗಳಕಾಲ ತಪಸ್ಸನ್ನಾಚರಿಸಿ ಕ್ಷೀಣಕಲ್ಮಷರಾದ ಮಹರ್ಷಿಗಳಿಗೆ, ತನ್ನನ್ನು ಸೇರಲು ಉಪಾಯಗಳನ್ನು ತಿಳಿಸುವ, ತನ್ನ

ನಿಃಶ್ವಾಸರೂಪವಾದ ವೇದಗಳನ್ನು, ಅವರ ಸಮಾಧಿ ಸ್ಥಿತಿಯಲ್ಲಿ ಸಾಕ್ಷಾತ್ಕರಿಸುವಂತೆ ಮಾಡಿ, ವೇದ, ತದರ್ಥಗಳನ್ನು ಎಲ್ಲ ಚೇತನರಿಗೂ ಲಭಿಸುವಂತೆ, ಆ ಮಹರ್ಷಿಗಳು ತಾವು ಸಾಕ್ಷಾತ್ಕರಿಸಿದ ಮಂತ್ರಗಳು ಶಿಷ್ಯ ಪ್ರಶಿಷ್ಯ ಪರಂಪರೆಯಲ್ಲಿ ಅನುಸ್ಯೂತವಾಗಿ ಹರಿಯುವಂತೆ ಮಾಡುತ್ತಾನೆ. ಕಾಲಗತಿಯಿಂದ ಕಲ್ಮಷಭೂಯಿಷ್ಠರಾದ ಚೇತನರು, ವೇದಾರ್ಥಗಳನ್ನು ಸರಿಯಾಗಿ ಗ್ರಹಿಸದೇ, ಅವುಗಳಿಗೆ ಅಪಾರ್ಥಗಳನ್ನು ಕಲ್ಪಿಸಿ, ಅದರಿಂದ ಧರ್ಮಕ್ಕೆ ಧಕ್ಕೆ ಬಂದು ಅಧರ್ಮವು ತಲೆದೋರಿದಾಗ, ಕೆಲವು ಸಂದರ್ಭದಲ್ಲಿ ತಾನೇ ರಾಮ ಕೃಷ್ಣಾದ್ಯವತಾರಗಳನ್ನು ಮಾಡಿ ಧರ್ಮಸ್ಥಾಪನೆ ಮಾಡುತ್ತಾನೆ. ಕೆಲವು ಸಂದರ್ಭದಲ್ಲಿ ವ್ಯಾಸಾದಿ ಮಹರ್ಷಿಗಳಲ್ಲಿ ಅನುಪ್ರವೇಶಮಾಡಿ ಆವೇಶಾವತಾರದಿಂದಲೂ, ಕೆಲ ಸಂದರ್ಭದಲ್ಲಿ ಶ್ರೀ ವೈಕುಂಠದಲ್ಲಿನ ನಿತ್ಯಾತ್ಮರುಗಳನ್ನು ಲೀಲಾವಿಭೂತಿಗೆ ಕಳುಹಿಸಿ ಅವರ ಮುಖಾಂತರ ಶಾಸ್ತ್ರಾದಿಗಳನ್ನು ನಿರ್ಮಾಣ ಮಾಡಿಸಿ, ಅವುಗಳ ಮುಖಾಂತರ ಧರ್ಮಸ್ಥಾಪನೆ ಮಾಡಿಸಿ, ಕರ್ಮದಿಂದ ಚೇತನರಿಗೆ ಬಂಧವುಂಟಾಗುವ ಬಗೆಯನ್ನೂ, ಅದರಿಂದಾಗುವ ಆಗುಹೋಗುಗಳನ್ನೂ, ಆ ಬಂಧನದಿಂದ ಬಿಡಿಸಿಕೊಳ್ಳುವುದರಿಂದ ಬರುವ ಲಾಭವನ್ನೂ, ಆ ರೀತಿ ಕರ್ಮಬಂಧನದಿಂದ ಮುಕ್ತನಾಗಲು ಚೇತನರು ಅವರವರ ಶಕ್ತಿಗೆ ಅನುಗುಣವಾಗಿ ಮಾಡಬೇಕಾದ ಉಪಾಯಾನುಷ್ಠಾನವನ್ನೂ ತಿಳಿಸಿ ಚೇತನರನ್ನು ರಕ್ಷಿಸುತ್ತಾನೆ.

ಕಾರುಣಿಕನಾದ ಭಗವಂತನು ಎಲ್ಲ ಚೇತನರನ್ನೂ ಒಮ್ಮೆಲೇ ಕರ್ಮಬಂಧದಿಂದ ಬಿಡಿಸಿ ಮುಕ್ತರನ್ನಾಗಿಸಿದರೆ, ಉಪಾಯಾನುಷ್ಠಾನ ಮಾಡದ ಚೇತನರಿಗೆ ಅವರವರ ಕರ್ಮಗಳಿಗೆ ಅನುಗುಣವಾಗಿ ಫಲಪ್ರದಾನ ಮಾಡುತ್ತೇನೆಂದು ಸಂಕಲ್ಪಿಸಿರುವ ಅವನ ಸಂಕಲ್ಪವೇ ಸುಳ್ಳಾಗುವುದರಿಂದ ಅವನ ಸತ್ಯ ಸಂಕಲ್ಪತ್ವಕ್ಕೆ ಧಕ್ಕೆ ಬರುತ್ತದೆ. 'ಹೇಯಗುಣರಹಿತತ್ವವೂ'—

---

←[1] ಅಚಿದವಿಶಿಷ್ಟಾನ್ ಪ್ರಲಯೇ ಜಂತೂ ನವಲೋಕ್ಯ ಜಾತನಿರ್ವೇದ।
ಕರಣ ಕಳೇಬರಯೋಗಂ ವಿತರಸಿ ವೃಷಶೈಲನಾಥ ಕರುಣೇತ್ವಮ್ ॥
(ದಯಾಶತಕ).

ಭಗವಂತನ ಒಂದು ಗುಣ. ಸತ್ಯಸಂಕಲ್ಪತ್ವವಿಲ್ಲದಿರುವಿಕೆಯು ಹೇಯಗುಣ-ವಾಗುತ್ತದೆ. ಆಗ ಭಗವಂತನು 'ಹೇಯಪ್ರತಿಭಟ' –ಎಂದು ಹೇಳಲಾರದೆ, 'ಹೇಯಗುಣಸಹಿತ' –ಎನ್ನಬೇಕಾಗುತ್ತದೆ. ಇದು ದೋಷವಾಗುತ್ತದೆ. ಅದೂ ಅಲ್ಲದೆ, ವೈಷಮ್ಯ ಮತ್ತು ನೈರ್ಘೃಣ್ಯವೆಂಬ ಎರಡು ದೋಷಗಳು ಅವನಿಗೆ ಸಂಭವಿಸುತ್ತದೆ. [2] ಹೇಗೆಂದರೆ, ಕೆಲ ಚೇತನರು ಪೂರ್ವ ಕಲ್ಪದಲ್ಲಿ ಅನೇಕ ಸಹಸ್ರ ವರ್ಷಗಳ ಕಾಲ ತಪಸ್ಸನ್ನಾಚರಿಸಿದ್ದಾರೆ. ಕೆಲವರೂ ಏನೂ ಮಾಡಿಲ್ಲ. ಇಬ್ಬರಿಗೂ ಯಾವ ಒಂದು ವ್ಯಾಜವೂ ಇಲ್ಲದೆ ಏಕಕಾಲದಲ್ಲಿ ಸಮಾನವಾಗಿ ಮುಕ್ತಿಯನ್ನನುಗ್ರಹಿಸಿದರೆ, ತಪಸ್ಸನ್ನಾಚರಿಸಿದವರಿಗೆ ಅನುಗ್ರಹಮಾಡಿ-ದುದರಿಂದ, ಏನೂ ಆಚರಿಸಿದವರು ಭಗವಂತನು 'ಪಕ್ಷಪಾತಿ' ಎನ್ನುತ್ತಾರೆ. ಏನೂ ಸಾಧನೆಯನ್ನೇ ಮಾಡದಿರುವವರಿಗೆ ಅನುಗ್ರಹ ಮಾಡಿದರೆ, ಶ್ರಮ-ಪಟ್ಟು ಸಾಧನೆ ಮಾಡಿದವರಿಗೆ ವಿಶೇಷವಾದ ಯಾವ ಸ್ಥಾನವೂ ಇಲ್ಲದುದರಿಂದ ಅವರು ಭಗವಂತನನ್ನು —'ನಿರ್ಘೃಣ' (ದಯಾರಹಿತ) –ಎನ್ನುತ್ತಾರೆ. ಆದುದರಿಂದ ಈ ಮೇಲೆ ಹೇಳಿದ ದೋಷಗಳಿಗೆ ಗುರಿಯಾಗಲು ಸಿದ್ಧನಲ್ಲದ ಭಗವಂತನು ಮೋಕ್ಷವನ್ನಪೇಕ್ಷಿಸುವ ಚೇತನರಿಂದ, ಅವರು ಉಪಾಯಾನು-ಷ್ಠಾನ ಮಾಡಬೇಕೆಂದು ನಿರೀಕ್ಷಿಸುತ್ತಾನೆ.

ಜಗತ್ಸೃಷ್ಟಿಯೇ ಮಾಡದೆ ಎಲ್ಲ ಚೇತನರಿಗೂ ಒಮ್ಮೆಲೆ ಮೋಕ್ಷವ-ನ್ನನುಗ್ರಹಿಸಿದರೆ, ಅವನ ಈಶ್ವರತ್ವಕ್ಕೆ ಹಾನಿಬರುತ್ತದೆ. ವ್ಯಾಸಮಹರ್ಷಿಗಳು ಬ್ರಹ್ಮಸೂತ್ರದಲ್ಲಿ ಬ್ರಹ್ಮಜಿಜ್ಞಾಸೆ ಮಾಡಲು ಹೊರಟಾಗ ಈಶ್ವರ ಲಕ್ಷಣ-ವನ್ನು ಹೇಳುವಲ್ಲಿ "ಜನ್ಮಾದ್ಯಸ್ಯಯತಃ" ಎಂಬ ಸೂತ್ರದಲ್ಲಿ, ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳು ಯಾರಿಂದಾಗುತ್ತದೆಯೋ, ಮತ್ತು ಯಾರು ಬದ್ಧ ಚೇತನರಿಗೆ ಮುಕ್ತಿಯನ್ನನುಗ್ರಹಿಸುತ್ತಾನೆಯೋ ಅವನೇ 'ಈಶ್ವರ' (ಪರಬ್ರಹ್ಮ) ನೆಂದು ತಿಳಿಸಿದ್ದಾರೆ. 'ಜಗತ್ಸೃಷ್ಟಿ ಕರ್ತೃತ್ವ' ಮತ್ತು 'ಮೋಕ್ಷಪ್ರದತ್ವ' –ಎಂಬ ಎರಡು ಗುಣಗಳೂ ಭಗವಂತನಿಗೇ ಅಸಾಧಾರಣವಾದ ಗುಣಗಳು. ಎಲ್ಲರಿಗೂ ಒಮ್ಮೆಲೆ, ಮೋಕ್ಷವುಂಟಾದರೆ, ಜಗತ್ಸೃಷ್ಟಿಯೇ ಇಲ್ಲದಿರುವುದರಿಂದ

[2] "ವೈಷಮ್ಯ ನೈರ್ಘೃಣ್ಯೇ (ಬ್ರಹ್ಮಸೂತ್ರ)"

'ಜಗತ್ಸೃಷ್ಟಿಕರ್ತೃತ್ವ' –ಎಂಬ ಗುಣವು ಭಗವಂತನಿಗೆ ಕೂಡುವುದಿಲ್ಲ. ಸೃಷ್ಟಿಯೇ ಇಲ್ಲದಿರುವುದರಿಂದ, ಚೇತನರಿಗೆ ಬಂಧವೂ ಇಲ್ಲ. ಬಂಧವೇ ಇಲ್ಲದಿರುವುದರಿಂದ 'ಭಗವಂತನಿಗೆ' ಮೋಕ್ಷಪ್ರದತ್ವವೂ ಇರುವುದಿಲ್ಲ. ಇವೆರಡು ಗುಣಗಳಿಲ್ಲದಿದ್ದರೆ ಈಶ್ವರತ್ವವಿರುವುದಿಲ್ಲ. ಇದರಿಂದ ನಿರೀಶ್ವರತ್ವ ಪ್ರಸಕ್ತಿ ಏರ್ಪಡುತ್ತದೆ. ಆದುದರಿಂದ ವರಾಹನು ಉಪಾಯಾನುಷ್ಠಾನ ಮಾಡಿದವರಿಗೆ ಮಾತ್ರವೇ ಮೋಕ್ಷಕೊಡುತ್ತೇನೆಂದು ಹೇಳಿದ್ದಾನೆಂದು ತಿಳಿಯಬೇಕು.

**ಇಂಗು 'ಮದ್ಭಕ್ತವ್', ಎನ್ನಿರಪದಂ ಭಕ್ತಿಯೋಗನಿಷ್ಠನ್ನೈ ಚ್ಚೊಲ್ಲುಹೈ ಲಘೂಪಾಯೋಪದೇಶ ಪ್ರಕರಣತ್ತುಕ್ಕುಮ್ ತದನುಗುಣಂಗಳಾನ ಪೂರ್ವ ಶ್ಲೋಕತ್ತಿಲುಳ್ಳ ಪದಂಗಳುಕ್ಕುಂ ಇಶ್ಶ್ಲೋಕತ್ತಿಲ್ ಅಂತಿಮದಶೈಯಿಲ್ 'ಕಾಷ್ಠಪಾಷಾಣಸನ್ನಿಭಂ' –ಎನ್ನಿರತ್ತುಕ್ಕುಂ ಅನುಗುಣಮಾಕಾದು.**

**ಇಂಗು**=ಈ ವರಾಹ ಚರಮಶ್ಲೋಕದಲ್ಲಿ, **'ಮದ್ಭಕ್ತವ್'**= 'ನನ್ನ ಭಕ್ತನನ್ನು' **ಎನ್ನಿರಪದಂ** = ಎಂದು ಹೇಳುವ ಪದವಾದರೋ, **ಭಕ್ತಿಯೋಗನಿಷ್ಠನ್ನೈ**=ಭಕ್ತಿಯೋಗನಿಷ್ಠನನ್ನು, **ಶೊಲ್ಲುಹೈ**=ಹೇಳುವುದಾದರೆ, **ಲಘೂಪಾಯ ಉಪದೇಶಪ್ರಕರಣತ್ತುಕ್ಕುಂ** = ಲಘುವಾದ—ಸುಲಭವಾದ ಉಪಾಯವನ್ನು ಉಪದೇಶಮಾಡುವ ಪ್ರಕರಣಕ್ಕೂ, **ತದನುಗುಣಂಗಳಾನ**=ಆ ಸುಲಭೋಪಾಯಕ್ಕೆ ಅನುಗುಣವಾದ, **ಪೂರ್ವಶ್ಲೋಕತ್ತಿಲುಳ್ಳ** = ಹಿಂದಿನ ಶ್ಲೋಕದಲ್ಲಿರುವ, **ಪದಂಗಳುಕ್ಕುಂ**= ಪದಗಳಿಗೂ, **ಇಶ್ಲೋಕತ್ತಿಲ್**=ಈ ಶ್ಲೋಕದಲ್ಲಿ, **ಅಂತಿಮದಶೈಯಿಲ್**= ದೇಹಾವಸಾನಕಾಲದಲ್ಲಿ, **ಕಾಷ್ಠಪಾಷಾಣಸನ್ನಿಭಂ** = ಕಟ್ಟಿಗೆ ಕಲ್ಲುಗಳಿಗೆ ಸಮನಾಗಿರುವವನನ್ನು, **–ಎನ್ನಿರತ್ತುಕ್ಕುಂ** = ಎಂದಿರುವುದಕ್ಕೂ. **ಅನುಗುಣಮಾಕಾದು**=ಹೊಂದುವುದಿಲ್ಲ.

ವರಾಹ ಚರಮ ಶ್ಲೋಕದಲ್ಲಿರುವ 'ಮದ್ಭಕ್ತಂ' –ಎಂಬಲ್ಲಿನ 'ಭಕ್ತ' ಶಬ್ದವು ಭಕ್ತಿಯೋಗನಿಷ್ಠನನ್ನು ಹೇಳುವುದಿಲ್ಲ. ಏಕೆಂದರೆ ಭಕ್ತಿಯೋಗ-

ವಾದರೋ ಅನೇಕಕಾಲ ಸಾಧ್ಯವಾದ್ದುದಾಗಿ, ಕಷ್ಟಕರವಾದ ಗುರೂಪಾಯ-ವಾಗಿರುತ್ತದೆ. ಭೂದೇವಿಯು ವರಾಹನನ್ನು 'ಲಘೂಪಾಯಂವದಪ್ರಭೋ' (ಸುಲಭವಾದ ಉಪಾಯವನ್ನು ಹೇಳಿರಿ) –ಎಂದು ಸುಲಭೋಪಾಯದ ಉಪದೇಶವನ್ನು ಪ್ರಾರ್ಥಿಸಿದಾಗ, ವರಾಹನು ಈ ಚರಮ ಶ್ಲೋಕವನ್ನು ಉಪದೇಶಿಸಿದುದರಿಂದ, ಗುರೂಪಾಯಾನುಷ್ಠಾನಮಾಡುವ ಭಕ್ತಿಯೋಗ-ನಿಷ್ಠನನ್ನು 'ಮದ್ಭಕ್ತಂ' –ಎಂಬಲ್ಲಿ ಹೇಳಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಅಂತೆಯೇ, ಭಕ್ತಿಯೋಗವಾದರೋ ದೇಹಾವಸಾನದವರೆವಿಗೂ ನಿರಂತರವಾಗಿ ಅವಿಚ್ಛಿನ್ನವಾದ ತೈಲಧಾರೆಯಂತೆ ಪರಮಾತ್ಮೋಪಾಸನೆ ಮಾಡುವುದಾಗಿ-ರುತ್ತದೆ. ಲಘೂಪಾಯವನ್ನು ಬೋಧಿಸುವ ವರಾಹ ಚರಮಶ್ಲೋಕದ ಪೂರ್ವಶ್ಲೋಕದಲ್ಲಿಯಾದರೋ, 'ಯಾವ ಚೇತನ'ನೇ ಆಗಲಿ, ಶರೀರವಿರುವಲ್ಲಿ, ಸಪ್ತಧಾತುಗಳೂ ಸಮಸ್ಥಿತಿಯಲ್ಲಿರುವಲ್ಲಿ, ಮನಸ್ಸು ಸ್ಥಿರವಾಗಿರುವಲ್ಲಿ, ಕರ್ಮಬಂಧದಿಂದ ಜನ್ಮವಿಲ್ಲದಿರುವ, ಎಲ್ಲ ಚೇತನಾಚೇತನರಲ್ಲಿಯೂ ಅಂತ-ರ್ಯಾಮಿಯಾಗಿದ್ದು, ವಿಶ್ವವನ್ನೇ ದೇಹವನ್ನಾಗಿ ಹೊಂದಿ 'ವಿಶ್ವರೂಪ'ನಾದ ನನ್ನನ್ನು, ಒಮ್ಮೆ ಸ್ಮರಿಸುತ್ತಾನೆಯೋ' –ಎಂದು ಒಂದು ಕ್ಷಣಕಾಲ ಸಾಧ್ಯ-ವಾದ ಸಕೃದನುಷ್ಠಾನವು ಹೇಳಿರುವುದರಿಂದಲೂ; ಮತ್ತು ಭಕ್ತಿಯೋಗ-ನಿಷ್ಠನಿಗೆ ದೇಹಾವಸಾನಕಾಲದಲ್ಲಿ 'ಅಂತಿಮಪ್ರತ್ಯಯ'(ಅಂತ್ಯಕಾಲದ ಭಗವ-ದುಪಾಸನ) ವೈಧವಾಗಿ ಹೇಳಿರುವಲ್ಲಿ, ಈ ಚರಮಶ್ಲೋಕದಲ್ಲಿ, ಭಗವಂತನನ್ನು ಒಮ್ಮೆ ಅವನು ಸ್ವಾಮಿಯೆಂದೂ ತಾನು ದಾಸನೆಂದೂ ಸ್ಮರಿಸಿ, ತನ್ನ ರಕ್ಷಾ-ಭರವನ್ನು ಅವನಿಗೊಪ್ಪಿಸಿದ ಚೇತನನು, ಅಂತ್ಯಕಾಲದಲ್ಲಿ (ಕಾಷ್ಠಪಾಷಣ-ಸನ್ನಿಭಂ) ಭಗವಂತನ ಸ್ಮೃತಿಯೇ ಇಲ್ಲದೆ ಕಟ್ಟಿಗೆ ಕಲ್ಲುಗಳಿಗೆ ಸಮನಾಗಿ ಬಿದ್ದಿದ್ದರೂ ಪರಮಾತ್ಮನು ತನ್ನಲ್ಲಿ ಶರಣುಹೋದ ಆ ಭಕ್ತನನ್ನು ತಾನೆ ಸ್ಮರಣೆಮಾಡಿಕೊಂಡು ಬಂದು ಪರಮಗತಿಗೆ ಒಯ್ಯುತ್ತೇನೆಂದು ಹೇಳಿರು-ವುದರಿಂದಲೂ, ಈ ಶ್ಲೋಕದಲ್ಲಿನ 'ಮದ್ಭಕ್ತಂ' –ಎಂಬಲ್ಲಿನ 'ಭಕ್ತ'ಪದವು ಭಕ್ತಿಯೋಗನಿಷ್ಠನನ್ನು ಹೇಳುವುದಿಲ್ಲವೆಂಬುದು ಸುಸ್ಪಷ್ಟವಾಗಿರುತ್ತದೆ.

**ಶಬ್ದಾದ್ಭಾವಿಯಾಯ್ ಗತ್ಯಂತರಮುಂಡಾನ ಒರುಪದತ್ತೈ-ಕ್ಕೊಂಡು ಪೂರ್ವಭಾವಿಯಾನ ಪ್ರಕರಣತ್ತೈಯುಮ್, ಸ್ವವಾಕ್ಯತ್ತಿಲ್**

**ಅನೇಕಪದ ಸ್ವಾರಸ್ಯತ್ತೈಯುಂ ಭಾವಿಕ್ಕೈ ನ್ಯಾಯವಿರುದ್ಧವಾ್.**

(ಲಘೂಪಾಯವಾದ ಸ್ಮರಣರೂಪವಾದ ಶರಣಾಗತಿಯೆಲ್ಲವನ್ನೂ ಮೊದಲು ಹೇಳಿದ ಬಳಿಕ) **ಪಶ್ಚಾದ್ಭಾವಿಯಾಯ್**=ನಂತರ ಬಂದಿರುವ **ಗತ್ಯಂತರಮುಂಡಾನ**=ಬೇರೊಂದು ಗುರೂಪಾಯವಾದ ಮಾರ್ಗವನ್ನು ಹೊಂದಿರುವ, **ಒರುಪದತ್ತೈಕ್ಕೊಂಡು** = 'ಭಕ್ತಂ' –ಎನ್ನುವ ಒಂದು ಪದವನ್ನು ಮಾತ್ರ ಆಶ್ರಯಿಸಿ, **ಪೂರ್ವಭಾವಿಯಾನ ಪ್ರಕರಣತ್ತೈಯುಂ** =ಮೊದಲು ಹೇಳಲ್ಪಟ್ಟಿರುವ ಲಘೂಪಾಯಪ್ರಕರಣವನ್ನೂ, (ಮತ್ತು) **ಸ್ವವಾಕ್ಯತ್ತಿಲ್**=ಅದೇ ವಾಕ್ಯದಲ್ಲಿಯೇ ಇರುವ, **ಅನೇಕಪದಸ್ವಾರಸ್ಯತ್ತೈಯುಂ** = 'ತಂ ಮ್ರಿಯಮಾಣಂ ಕಾಷ್ಠಪಾಷಾಣ ಸನ್ನಿಭಂ | ಅಹಂ ಸ್ಮರಾಮಿ, ನಮಾಮಿ ಪರಮಾಂಗತಿಂ' –ಎಂಬ ಅನೇಕ ಪದಗಳ ಸ್ವಾರಸ್ಯವನ್ನೂ, **ಭಾವಿಕ್ಕೈ**=ಕೂಡಿಸಿ ಅರ್ಥೈಸುವುದು, **ನ್ಯಾಯವಿರುದ್ಧವಾ್**= ವಾಕ್ಯಗಳಿಗೆ ಅರ್ಥವನ್ನು ಮಾಡುವಲ್ಲಿ ಗಮನಿಸಬೇಕಾಗಿರುವ 'ಸಂಗತಿ', 'ಪ್ರಕರಣ' ಅಥವಾ 'ಸಂದರ್ಭ' –ಇತ್ಯಾದಿಗಳನ್ನು ಗಮನಿಸಬೇಕೆಂದು ಹೇಳಿರುವ ನಿಯಮಗಳಿಗೆ ಅಥವಾ ನ್ಯಾಯಕ್ಕೆ ವಿರುದ್ಧವಾಗುತ್ತದೆ. ಆದುದರಿಂದಲೂ ಈ ವರಾಹ ಪರಮಶ್ಲೋಕದಲ್ಲಿ ಹೇಳಿರುವ 'ಮದ್ಭಕ್ತಂ' ಎನ್ನುವ ಪದವು ಶರಣಾಗತ್ಯನುಷ್ಠಾನ ಮಾಡಿದವನನ್ನೇ ಹೇಳುತ್ತದೆ. ಭಕ್ತಿಯೋಗನಿಷ್ಠನನ್ನಲ್ಲ.

**ಇವನುಕ್ಕು ಇನಿ ಜನ್ಮಾನ್ತರಾದಿಗಳಿಲ್ಲೈ. 'ಮರಣಮಾನಾಲ್' –ಎನ್ಗಿರಪಡಿಯೇ, ಪ್ರಾರಬ್ಧಶರೀರಂ ವಿಡುಮಳವೇ ಪ್ರಾಪ್ತಿಕ್ಕು ವೇಂಡುವದೆನ್ರು ತೋಟ್ರುಕೈಕ್ಕಾಗ 'ಮ್ರಿಯಮಾಣಂ' –ಎನ್ಗಿರಾನ್ ಮರಿತ್ತವನೇ ಎನ್ರಾದೇ, ಮ್ರಿಯಮಾಣನ್ಯೆ ನಯಪ್ಪಿಫ್ಪೋಂ –ಎನ್ಗಿರವಿಶ್ವಾಲೇ ತಾನ್ ವಿಣ್ಣುಲಹಂ ತರ ವಿರಕಿಲ್ ಪಡಿಯೇ ತೋಟ್ರುವಿಕ್ಕಿರಾನ್.**

**ಇವನುಕ್ಕು**=ಶರಣಾಗತ್ಯನುಷ್ಠಾನ ಮಾಡಿದ ಈ ಚೇತನನಿಗೆ, **ಇನ್ನು**= ಇನ್ನು ಮುಂದೆ, **ಜನ್ಮಾಂತರಾದಿಗಳಿಲ್ಲೈ** = ಇತರ ಜನ್ಮಗಳಿರುವುದಿಲ್ಲ,

**'ಮರಣಮಾನಾಲ್ - ಎನ್ನಿರಪಡಿಯೇ** = ನಮ್ಮಾಳ್ವಾರವರು ಅವರ ಶ್ರೀಸೂಕ್ತಿಯಾದ ತಿರುವಾಯ್ಮೊಳಿಯಲ್ಲಿ ( ). 'ಮರಣ ಮಾನಾಲ್ ವೈಕುಂದಂ ಕೊಡುಕ್ಕುಂಪಿರಾನ್' - 'ಮರಣ ಸಂಭವಿಸಿದರೆ, (ತನ್ನಲ್ಲಿ ಶರಣಾಗತನಾದ ಚೇತನನಿಗೆ) ವೈಕುಂಠವನ್ನು ಕೊಡುವವನು' -ಭಗವಂತನೆಂದು ಹೇಳಿರುವಂತೆಯೇ, **ಪ್ರಾರಬ್ಧ ಶರೀರಂ ವಿಡುಮಳವೇ** =ಪ್ರಾರಬ್ಧ ಕರ್ಮದಿಂದ ಬಂದಿರುವ ಶರೀರವನ್ನು ತ್ಯಾಗಮಾಡುವ ಸಮಯದಲ್ಲಿ, **ಪ್ರಾಪ್ತಿಕ್ಕವೇಂಡುವದೆನ್ರು** = (ಬೇರೆ ಜನ್ಮಬಾರದೆ, ಶ್ರೀ ವೈಕುಂಠವನ್ನು) ಹೊಂದಬೇಕೆಂದು ಪ್ರಾರ್ಥಿಸಬೇಕೆಂಬುದನ್ನು, **ತೋಟ್ರು-ಕ್ಕೈಶ್ಶಾಗ**=ತೋರಿಕೊಡಲೆಂದು, **'ಮ್ರಿಯಮಾಣಂ'**= ಮರಣಹೊಂದು-ವವನನ್ನು, **ಎನ್ಗಿರಾನ್** = ಎಂದು ವರಾಹಸ್ವಾಮಿಯು ಹೇಳಿದ್ದಾನೆ. **ಮರಿತ್ತವನೇ ಎನ್ರಾದೇ**=(ಸತ್ತುಹೋದವನನ್ನು ಎಂದು ಹೇಳಿದರೆ ಹಿಂದೆ ಎಂದೋ ಸತ್ತುಹೋದವನನ್ನು ಮುಂದೆ ಯಾವಾಗಲೋ ಒಯ್ಯುತ್ತಾನೆಂಬ ಅರ್ಥವು ತೋರಿಬರುವುದರಿಂದ) 'ಸತ್ತುಹೋದವನನ್ನು' -ಎಂದು ಹೇಳದೆ, **'ಮ್ರಿಯಮಾಣನ್ನೈ ನೆಯಪ್ಪಿಪ್ಪೋಂ'** = (ಶರಣಾಗತ್ಯನುಷ್ಠಾನ ಮಾಡಿದ ದೇಹದಿಂದ) 'ಮರಣಹೊಂದುವ ಚೇತನನನ್ನು (ಪರಮಗತಿಗೆ) ಒಯ್ಯು-ತ್ತೇನೆ' -**ಎನ್ಗಿರವಿಶ್ವಾಲ್**=ಎಂಬ ಈ ಮಾತಿನಿಂದ, **ತಾನ್** = ತಾನು, **ವಿಣ್ಣುಲಹಂತರ** = ಶ್ರೀ ವೈಕುಂಠಲೋಕವನ್ನು ಅನುಗ್ರಹಿಸಿಕೊಡಲು, **ವಿರಕಿಲ್‌ಪಡಿಯೇ** = ದೇಹಾವಸಾನದಲ್ಲಿ ಮುಕ್ತಿಯನ್ನು ಪ್ರಾರ್ಥಿಸಿದ ಶರಣಾಗತನಿಗೆ, ತಾನು ಆ ಶರೀರಾವಸಾನದಲ್ಲಿಯೇ, ಜನ್ಮಾಂತರವಿಲ್ಲದೆ, ಮುಕ್ತಿಯನ್ನು ಅನುಗ್ರಹಿಸಿ ಕೊಡುವುದಾಗಿ ಹೇಳಿದಂತೆಯೇ, **ತೋಟ್ರು-ವಿಕ್ಕಿರಾನ್**=ಅನುಗ್ರಹಿಸಿ ಕೊಡುತ್ತಾನೆಂಬುದನ್ನು ತೋರಿಸಿದ್ದಾನೆ.

**'ತು'**-ಎನ್ಗಿರವಿದು **ಅಲ್ಲಾದಾರ್ ಮರಣಂಪೋಲೇ ಇಂಗು-ಳ್ಳಾರ್ಕ್ಕುಂ ಲೋಕಾಂತರತ್ತಿಲು ಮುಳ್ಳಾದಾರ್ಕುಂ ಇರ್ವ ಶೋಚ್ಯ ನಾಮ್ಪಡಿಯನ್ರಿಕ್ಕೇ ಶ್ರೀವೈಕುಂಠನಾಥನುಂ, ಸೂರಿಗಳುಂ, ಮುಕ್ತರುಂ -ನಲ್‌ವಿರುನ್ನು ವರುಕಿರದು-ಎನ್ರುವೀಡು ತಿರುತ್ತುಮ್ ಪಡಿಯಾಯ್, ಇಂಗುಂ ಕೃತಕೃತ್ಯರಾನ ಶ್ರೀವೈಷ್ಣವರೆಲ್ಲಾರುಂ ನಾಮುಮ್ ಇದು**

**ಪೆಟ್ಟೈಲೋಮೆನ್ರು ನಾಕ್ಕು ನೀಳುಂಪಡಿಯೂನ ನಲ್ಲದೊರು ಅವಭೃಥ-ಮಿದು -ಎನ್ರು, ಇನ್ಮರಣತ್ತಿನುಡೈಯ ಮಹೋತ್ಸವತ್ತೈಯುಂ ಇದುಕ್ಕು ಪ್ರಶಸ್ತದೇಶಕಾಲನಿಮಿತ್ತಂಗಳ್ ನಿರೂಪಿಕ್ಕವೇಂಡಾ ಆಯು-ರವಸಾನತ್ತಳವಿಲೇ ಇವನುಕ್ಕು ಫಲಸಿದ್ಧಿ -ಎನ್ನುಮಿಡತ್ತೈಯುಂ ತೋಟ್ರುವಿಕ್ಕಿರದು.**

**'ತು'-ಎನ್ಗಿರವಿದು** = ವರಹಾ ಚರಮಶ್ಲೋಕದಲ್ಲಿನ 'ಮ್ರಿಯ-ಮಾಣಂ ತು' ಎಂಬಲ್ಲಿನ 'ತು' -ಎಂಬ ಅವ್ಯಯವಾದರೋ, **ಅಲ್ಲಾದಾರ್** =ಶರಣಾಗತರಾಗದ ಚೇತನರ, **ಮರಣಂಪೋಲೆ**=ಸಾವಿನಂತೆ, **ಇಂಗು-ಳ್ಳಾರ್ಕುಂ**=ಈ ಲೋಕದಲ್ಲಿರುವವರಿಗೂ, **ಲೋಕಾಂತರತಿಲ್ ಉಳ್ಳಾ-ದಾರ್ಕುಂ** = ಸ್ವರ್ಗಾದಿ ಲೋಕದಲ್ಲಿರುವವರಿಗೂ, **ಇವನ್** = ಮರಣ-ಹೊಂದಿದ ಈ ಚೇತನನು, **ಶೋಚ್ಯನಾಂಪಡಿ** = (ಅವನ ಕರ್ಮಗಳಿಗನು-ಗುಣವಾಗಿ ಮುಂದೆ ಅವನು ಪಡೆಯುವ ಜನ್ಮಗಳನ್ನು ಕಂಡು) -'ಅಯ್ಯೋ ಪಾಪ' -ಜನ್ಮ ಮರಣ ಚಕ್ರದಿಂದ ಕೂಡಿದ ಸಂಸಾರ ಸಾಗರದ ದುಃಖದ ಮಡುವಿನಲ್ಲಿ ಬಿದ್ದಿರುವನೆಂದೂ - ತೋರಿಬರುವಂತಿದೆ. -ಎಂದು ಹೇಳುವಂತೆ, **ಅನ್ರಿಕ್ಕೇ** = ಇಲ್ಲದೆ, (ಶರಣಾಗತನು ಮರಣವನ್ನು ಹೊಂದಿ ದೇಹತ್ಯಾಗಮಾಡಿ ಶ್ರೀವೈಕುಂಠಲೋಕಕ್ಕೆ ಬಂದು ಸೇರುವುದಾದರೋ) **ಶ್ರೀವೈಕುಂಠನಾಥನುಂ** = ಶ್ರೀ ವೈಕುಂಠಾಧಿಪತಿಯಾದ ಶ್ರೀಮನ್ನಾರಾ-ಯಣನೂ, **ಸೂರಿಗಳುಂ** = ನಿತ್ಯಸೂರಿಗಳೂ, **ಮುಕ್ತರುಂ** = ಮುಕ್ತಾತ್ಮರೂ, **ನಲ್ವಿರುಂದು ವರುಕಿರದು ಎನ್ರು** = ತಮ್ಮೊಡನೆ ಭಗವದ್ಭಕ್ತನೊಬ್ಬನು ಕೂಡುವನೆಂಬ ಔತಣವೊಂದು ತಮಗೆ ಬರುವು-ದೆಂದು, **ಪೀಡುತಿರುತ್ತಮ್ ಪಡಿಯಾಯ್** = ಇಷ್ಟಪಡು-ವಂತೆಯಾಗಿಯೂ, **ಇಂಗುಂ**=ಈ ಲೋಕದಲ್ಲಿಯೂ, **ಕೃತಕೃತ್ಯರಾನ**= ಶರಣಾಗತಿಯನ್ನನುಷ್ಠಿಸಿ ಕೃತಕೃತ್ಯರಾದ, **ಶ್ರೀವೈಷ್ಣವರೆಲ್ಲಾರುಂ**= ಶ್ರೀವೈಷ್ಣವರೆಲ್ಲರೂ, **'ನಾಮುಮ್'**=ನಾವೂ, **ಇದು ಪೆಟ್ರೈಲೋಂ-ಎನ್ರು** ಈ ತರಹದ ಮರಣವು ಸಂಭವಿಸಿ, ದೇಹಾವಸಾನದಲ್ಲಿ ಶ್ರೀವೈಕುಂಠವನ್ನು ಸೇರುವಿಕೆಯನ್ನು ಹೊಂದುವೆವು -ಎಂದು, **ನಾಕ್ಕು ನೀಳುಂಪಡಿಯಾನ**=

**ಆಸೆಪಡುವಂತೆ, 'ನಲ್ಲದೊರು ಅವಭೃಥಮಿದು'** –**ಎನ್ರು**= ತಾನು ಅನುಷ್ಠಿ-ಸಿದ ಶರಣಾಗತಿಯ ಕಾಲದಲ್ಲಿನ ಆತ್ಮಹವಿಸ್ಸಮರ್ಪಣರೂಪವಾದ ಯಾಗಕ್ಕೆ ('ಯನ್ಮರಣಂ ತದವಭೃಥಂ' –ಎಂದು ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರು-ವಂತೆ) ಈ ಮರಣವೆಂಬುದು ಒಂದು ಒಳ್ಳೆಯ 'ಅವಭೃಥ'ವೆಂದೂ, **ಇಮ್ಮರಣತ್ತಿನುಡೈಯ ಮಹೋತ್ಸವತ್ತೈಯುಂ**= (ಅಂತರ್ಯಾಮಿಯಾದ ಪರಮಾತ್ಮನಿಂದಲೂ, ಆತಿವಾಹಿಕರಿಂದಲೂ ಬಹಳ ಸಂಭ್ರಮದಿಂದ ಚೇತನ-ನನ್ನು ಕರೆದೊಯ್ಯಲ್ಪಡುವ), ಶರಣಾಗತನ ಈ ಮರಣ ಮಹೋತ್ಸವ-ವನ್ನೂ, **ಇದುಕ್ಕು**= ಶರಣಾಗತನ ಈ ಮರಣಕ್ಕೂ, ಅದರ ಅವ್ಯವಹಿತ ಉತ್ತರಕ್ಷಣದಲ್ಲಿ ಸಂಭವಿಸುವ ಶ್ರೀವೈಕುಂಠಪ್ರಾಪ್ತಿಗೂ, **ಪ್ರಶಸ್ತದೇಶ-ಕಾಲನಿಮಿತ್ತಂಗಳ್ ನಿರೂಪಿಕ್ಕವೇಂಡಾ** = 'ಕಾಶಿಯೇ ಮೊದಲಾದ ಪ್ರಶಸ್ತದೇಶಗಳಲ್ಲಿರುವಲ್ಲಿ ಅಥವಾ ಉತ್ತರಾಯಣಾದಿ ಪ್ರಶಸ್ತಕಾಲಗಳಲ್ಲಿ ಮರಣ ಸಂಭವಿಸಿದರೆ ಮಾತ್ರವೇ ಶ್ರೀವೈಕುಂಠಪ್ರಾಪ್ತಿ –ಎಂದು, ಪ್ರಶಸ್ತ-ವಾದ ದೇಶಕಾಲಗಳನ್ನು ಕಾರಣವಾಗಿ ಹೇಳಬೇಕಾದುದಿಲ್ಲವೆಂದೂ, ಮತ್ತು **ಆಯುರವಸಾನತ್ತಳವಿಲೇ ಇವನುಕ್ಕು ಫಲಸಿದ್ಧಿ** = ಶರಣಾಗತನಿಗೆ, ಅವನ ಆಯುಸ್ಸು ಮುಗಿದ ಕೂಡಲೆ, ತಾನು ಅನುಷ್ಠಿಸಿದ ಪ್ರಪತ್ತಿಯ ಫಲ ಸಿದ್ಧಿಯಾಗುವುದು, **ಎನ್ರುಮಿಡತ್ತೈಯುಂ** = ಎಂಬ ವಿಷಯವನ್ನೂ, **ಕೋಟ್ಟುಕಿರದು**= ತೋರಿಸುತ್ತದೆ.

**'ಕಾಷ್ಠಪಾಷಾಣ ಸನ್ನಿಭಮ್' –ಎನ್ಗಿರದು ಮುನ್ಬುಟ್ಟ-ಕಾರ್ಪಣ್ಯಂ ಪೋಲೇ ಉಪಾಯತ್ತುಕ್ಕು ಕುರುಪ್ಪಾಹಿರಿದನ್ರು. ಪಿನ್ಬುಟ್ಟ ಅರ್ಚಿರಾದಿಪೋಲೇ ಫಲಕೋಟಿ ಘಟಿತಮಾಯ್ ವರುಹಿರದುಮನ್ರು, ಇವನುಕ್ಕು ದ್ವಯಾನುಸಂಧಾನಾದಿಗಳೈಪ್ಪೋಲೇ ಇಂಗುಟ್ಟ ಪುರುಷಾರ್ಥವಿಶೇಷಮಾಯಿರುಪ್ಪದನ್ರೊನ್ರು – ಇಪ್ಪಡಿಯಿರುಕ್ಕ ಇವನುಡೈಯ ಅಚಿತ್ಕಲ್ಪತ್ತೈಯೈ ಶೊಲ್ಲುಕಿರವಿದು, ಪೂರ್ವಪಾಪಂ-ಗಳುಕ್ಕು ಅನುಶಯಯುಕ್ತಮಾಯ್ ಇವ್ವಳವನ್ರಿಕ್ಕೇ ಪ್ರಪನ್ನನುಕ್ಕುಂ ನಿಂದೈಯುಮಾಕಾದೋ ವೆನ್ರಿಲ್, ಇದು 'ಅಪ್ಪೋದೈಕ್ಕಿಪ್ಪೋದೇ ಶೊನ್ನಿನ್ವೈತ್ತೇನ್'** (**ಪೆರಿಯಾಳ್ವಾರ್ ತಿರುಮೊಳಿ** : ೪-೧೦-೧)

-ಎನ್ಗಿರಪಡಿಯೋ, **ಉಪಾಯತ್ತಿನುಡೈಯ ಸ್ವಯತ್ನಸಾಧ್ಯ-ಅನ್ತಿಮ-ಪ್ರತ್ಯಯನೈರಪೇಕ್ಷತ್ತೈಯುಮ್.**

**'ಕಾಷ್ಠಪಾಷಾಣಸನ್ನಿಭಮ್'** -**ಎನ್ಗಿರದು** = ವರಾಹ ಚರಮ ಶ್ಲೋಕದಲ್ಲಿ ಮರಣದಶೆಯಲ್ಲಿ ಕಟ್ಟಿಗೆ ಅಥವಾ ಕಲ್ಲಿನಂತೆ ಅಚೇತನಪ್ರಾಯ-ವಾಗಿ ಬಿದ್ದಿರುವ ನನ್ನ ಭಕ್ತನನ್ನು ನಾನೇ ಸ್ಮರಣೆಮಾಡಿಕೊಂಡು ಪರಮ-ಗತಿಗೊಯ್ಯುತ್ತೇನೆ ಎಂಬಲ್ಲಿ ಹೇಳಿರುವ 'ಕಾಷ್ಠಪಾಷಾಣ ಸನ್ನಿಭಮ್' ಎಂಬ ಪದವಾದರೋ, **ಮುನ್ಬುಟ್ಟ**=ಮೊದಲೇ ಹೇಳಿರುವ, **ಕಾರ್ಪಣ್ಯಂ-ಪೋಲೇ**=ಶರಣಾಗತಿಗೆ ಅಂಗವಾದ, 'ನಮ್ಮ ಅಶಕ್ತತೆಯನ್ನು ಪರಮಾತ್ಮ-ನಲ್ಲಿ ಅರುಹುವಿಕೆ' -ಎಂಬ ಕಾರ್ಪಣ್ಯೋಕ್ತಿಯಂತೆ, **ಉಪಾಯತ್ತುಕ್ಕು**= ಉಪಾಯಾನುಷ್ಠಾನಕ್ಕೆ, **ಕುರುಪ್ಪಾಕಿರದನ್ರು** = ಗುರುತಾಗಿರುವುದಲ್ಲವು. [ಅಂದರೆ, 'ಶರಣಾಗತಿ' -ಎಂಬ ಉಪಾಯಾನುಷ್ಠಾನ ಮಾಡಿದವನಿಗೆ, ಅವನ ಶರಣಾಗತಿ ಫಲಿಸುವುದಕ್ಕೆ ಗುರುತಾಗಿ ಅವನ ದೇಹಾವಸಾನ ಕಾಲದಲ್ಲಿ ಅವನು ಕಾಷ್ಠಪಾಷಾಣ ಸನ್ನಿಭನಾಗಿ ಅಥವಾ ಕಟ್ಟಿಗೆ ಕಲ್ಲುಗಳಿಗೆ ಸಮಾನ-ವಾಗಿ ಅಚೇತನಪ್ರಾಯವಾಗಿರಬೇಕೆಂದು ನಿಯಮವಿಲ್ಲ]. **ಪಿನ್ಬುಟ್ರ**= ಮುಂದೆ ಸಂಭವಿಸುವ, **ಅರ್ಚಿರಾದಿಪ್ಪೋಲೆ** = ಅರ್ಚಿರಾದಿಗತಿಯಂತೆ, **ಫಲಕೋಟಿಘಟಿತಮಾಯ್** = ಫಲಕೋಟಿಯಲ್ಲಿ ಸೇರಿಕೊಂಡು, **ವರುಕಿರದುಮನ್ರು**=ಬರುವುದೂ ಅಲ್ಲವು, [ಅಂದರೆ, ಪ್ರಪನ್ನರೆಲ್ಲಂಗೂ ಫಲಕೋಟಿಯಲ್ಲಿ ಸೇರಿ ಸಂಭವಿಸುವ ಅರ್ಚಿರಾದಿಗತಿಯಂತೆ, ದೇಹಾವಸಾನ-ದಲ್ಲಿ ಶರಣಾಗತರೆಲ್ಲರಿಗೂ 'ಕಾಷ್ಠಪಾಷಾಣಸನ್ನಿಭತ್ವವು' ಸಂಭವಿಸಿಯೇ ತೀರುತ್ತದೆಂದೂ ಹೇಳಲಾಗುವುದಿಲ್ಲ. ಅಂದರೆ ಶರಣಾಗತನಿಗೂ ಭಕ್ತಿಯೋಗ-ನಿಷ್ಠನಂತೆಯೇ, ಅವನ ಸುಕೃತವಿಶೇಷದಿಂದ, ದೇಹಾವಸಾನಕಾಲದಲ್ಲಿ ಅಂತಿಮಪ್ರತ್ಯಯವೂ ಸಂಭವಿಸಬಹುದು]. **ಇವನುಕ್ಕು**=ಈ ಶರಣಾಗತನಿಗೆ, **ದ್ವಯಾನುಸಂಧಾನಾದಿಗಳೈಪ್ಪೋಲೇ**=ದ್ವಯಮಂತ್ರದ ಅನುಸಂಧಾನವೇ ಮೊದಲಾದುವುಗಳಂತೆ, **ಇಂಗುಟ್ರ**=ಈ ಲೋಕದಲ್ಲಿರುವಲ್ಲಿ ಶರಣಾಗತ್ಯನು-ಷ್ಠಾನಮಾಡಿದ ಬಳಿಕ, ಉತ್ತರ ಕೃತ್ಯದಲ್ಲಿ ವಿಧಿಸಲ್ಪಟ್ಟಿರುವ, **ಪುರುಷಾರ್ಥ-ವಿಶೇಷ ಮಾಯಿರುಪ್ಪದುಂ -ಒನ್ರು ಅನ್ರು** = ಒಂದು ವಿಶೇಷವಾದ

**ಪುರುಷಾರ್ಥವೂ** ಅಲ್ಲ. [ಅಂದರೆ ಶರಣಾಗತನು, ಉಪಾಯಾನುಷ್ಠಾನ ಮಾಡುವ ಸಮಯದಲ್ಲಿ, ಮುಂದೆ ದೇಹಾವಸಾನದವರೆವಿಗೂ ಅನುಷ್ಠಿಸಬೇಕಾಗಿರುವ ದ್ವಯಾನುಸಂಧಾನವೇ ಮೊದಲಾದ ಉತ್ತರ ಕೃತ್ಯಗಳನ್ನು ಆ ಪರಮಾತ್ಮನೇ ನಡೆಯಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಳ್ಳುವಂತೆ ದೇಹಾವಸಾನದಲ್ಲಿ ಕಾಷ್ಠಪಾಷಾಣ ಸನ್ನಿಭತ್ವವು ಬೇಡಿಕೊಳ್ಳುವುದಾಗಿಯೂ ಇರುವುದಿಲ್ಲ]. **ಇಪ್ಪಡಿಯಿರುಕ್ಕ** = ಈ ರೀತಿ ಇರುವಲ್ಲಿ, **ಇವನುಡೈಯ** = ಈ ಶರಣಾಗತನ, **ಅಚಿತ್ಕಲ್ಪತ್ವೈಯೈ ಶೊಲ್ಲುಕಿರದಿದು** = ಅಚಿತ್ತುಗಳಿಗೆ ಸಮಾನವಾಗಿರುವಿಕೆಯಾದ, ಈ ಕಾಷ್ಠಪಾಷಾಣಸನ್ನಿಭತ್ವವು, **ಪೂರ್ವಪಾಪಂಗಳುಕ್ಕು** = ಶರಣಾಗತ್ಯನುಷ್ಠಾನಮಾಡಲು ಮೊದಲು ಮಾಡಿದ ಪಾಪಗಳಿಗೆ (ಶರಣಾಗತಿ ಮಾಡಿದ ಕೂಡಲೆ ಅವು ನಾಶಹೊಂದುವುದರಿಂದ) **ಅನುಪಯುಕ್ತಮಾಮ್** = ಫಲರೂಪದಲ್ಲಿ ಸಂಭವಿಸಲು ಸಾಧ್ಯವಿಲ್ಲದಿರುವುದರಿಂದ ಉಪಯೋಗಕ್ಕೆ ಬಾರದಿದ್ದರೂ, **ಇವ್ವಳವು** = ಈರೀತಿ ಅಚಿತ್ಕಲ್ಪರಾಗಿರುವಿಕೆಯು ಸಂಭವಿಸುತ್ತದೆ, **ಅನ್ರಿಕ್ಕೆ** = ಎಂದರೆ, **ಪ್ರಪನ್ನನುಕ್ಕು** = ಶರಣಾಗತನಿಗೆ, **ನಿಂದೈಯುಮಾಕಾದೋ** = ಅದು ನಿಂದೆಯಾಗುವುದಿಲ್ಲವೋ ? [ಅಂದರೆ, ಶರಣಾಗತನಲ್ಲದಿರುವವನಿಗೆ ಈ ಅಚಿತ್ಕಲ್ಪತೆಯು ಸಂಭವಿಸದಿದ್ದರೂ, ಶರಣಾಗತನಿಗೆ ಸಂಭವಿಸಿಯೇ ತೀರುತ್ತದೆ –ಎಂದರೆ ಶರಣಾಗತನಿಗಿದು ನಿಂದಾತ್ಮಕವಾದುದಲ್ಲವೆ ?], **ಎನ್ರಿಲ್** = ಎಂದರೆ, **'ಅಪ್ಪೋದೈಕ್ಕಪ್ಪೋದೇ ಶೊಲ್ಲಿವೈತ್ತೇನ್'** -**ಎನ್ಗಿರಪಡಿಯೇ** = [ಪೆರಿಯಾಳ್ವಾರರು ತಮ್ಮ ತಿರುಮೊಳಿಯಲ್ಲಿ ಭಗವಂತನಲ್ಲಿ ವಿಜ್ಞಾಪಿಸಿಕೊಳ್ಳುವಲ್ಲಿ, ಅಂತ್ಯಕಾಲದಲ್ಲಿ ಪರಮಾತ್ಮನ ಸ್ಮರಣೆ ಮಾಡುವ ಬುದ್ಧಿ ತಮಗುಂಟಾಗುತ್ತದೆಯೋ ಇಲ್ಲವೋ ಎಂದು] **ಅಪ್ಪೋದೈಕ್ಕು** = ಅಂತ್ಯಕಾಲದಲ್ಲಿ ಮಾಡಬೇಕಾದ ಭಗವಂತನ ಸ್ಮರಣೆಗೂ ಮತ್ತು ಅವನ ಅಡಿದಾವರೆಗೆ ಸೇರಿಸಿಕೊಳ್ಳಲು ಮಾಡಬೇಕಾದ ಪ್ರಾರ್ಥನೆಗೂ, **ಇಪ್ಪೋದೇ** = ಭಗವಂತನ ಸ್ಮರಣೆಯಿಂದ ಕೂಡಿದ ಈ ಸಮಯದಲ್ಲಿಯೇ **ಶೊಲ್ಲಿವೈತ್ತೇನ್** = **'ಪ್ರಾರ್ಥನೆ ಮಾಡಿದ್ದೇನೆ'** –ಎಂದು ಭಗವಂತನಲ್ಲಿ ಪ್ರಾರ್ಥಿಸುವಂತೆಯೇ, (ಶರಣಾಗತನಿಗೆ) **ಉಪಾಯತ್ತಿನುಡೈ** = ಭಕ್ತಿಯೋಗವೆಂಬ ಉಪಾಯದಲ್ಲಿನ,

ಸ್ವಯತ್ನಸಾಧ್ಯ = ಭಕ್ತಿಯೋಗನಿಷ್ಠನು ತನ್ನ ಸಾಧನೆಯಿಂದ ಪ್ರಯತ್ನ-ಪೂರ್ವಕವಾಗಿ ಪಡೆಯಬಹುದಾದ ಅನ್ತಿಮಪ್ರತ್ಯಯ = ದೇಹಾವಸಾನ-ಕಾಲದಲ್ಲಿ ಕೊನೆಯದಾಗಿ ಮಾಡುವ ಭಗವದ್ದಿವ್ಯ ಮಂಗಳ ವಿಗ್ರಹ ಚಿಂತೆಯು ನೈರಪೇಕ್ಷತ್ತೈಯುಮ್ = ಅವಶ್ಯವಾಗಿ ಬೇಕೆಂಬುದಿಲ್ಲವೆಂಬು-ದನ್ನೂ (ತಿಳಿಸುತ್ತದೆ).

'ಸಂಧಾಂ' ಇತ್ಯಾದಿಕಳಿರ್ಪಡಿಯೇ, ಜುಗುಪ್ಸಾವಿಷಯದಶೆ-ಯಿಲ್ಲೈ ಶರಣ್ಯನುಡೈಯ ವಾತ್ಸಲ್ಯವಿಶೇಷತ್ತೈಯುಮ್, ಒರು-ಪ್ರಕಾಶಮುಟ್ಟು ಕಿಡಕ್ಕಿರ ಇವನ್ನೈ "ಪ್ರದೀಪವದಾದೇಶಃ" –ಎನ್ಗಿರ ಪಡಿಯೇ ಒರುಕ್ಷಣತ್ತಿಲೇ ಸರ್ವಜ್ಞನಾಕ್ಕುಕಿರ ಆಶ್ಚರ್ಯಶಕ್ತಿಯೋಗ-ತ್ತೈಯುಮ್, ಪ್ರಪನ್ನನ್ ಇಪ್ಪಡಿ ದೀರ್ಘನಿದ್ರೈ ಪಣ್ಣುಂಪೋದು ಸರ್ವವಿಧ ಬಂಧುವಾನ ಅನ್ತರ್ಯಾಮಿಯ್ಯೈ ಒಳಿಯ ಮಟ್ಟೊರು-ತ್ತರಂ ತಟ್ಟಿಎಳುಪ್ಪಮಾಟ್ಟಾರ್‌ಕಳ್ –ಎನ್ಗಿರಮ್ ಅರ್ಥತ್ತೈಯುಮ್ ವಿಸ್ತರಿತ್ತು, "ಕಾಲುಂ ಕೈಯುಂ ವಿದಿರ್ ವಿದಿರ್ತ್ತು ಕಣ್ಣುರಕ್ಕಮು ತಾವತನ್ ಮುನ್ನವನ್ । ವೇಲೈವಣ್ಣನೈಮೆವ್ವುವೆಂಡುಂ"–ಎನ್ಗಿರ ಮುಮುಕ್ಷುಕ್ಕಳುಕ್ಕು ಶರಣ್ಯ ವಶೀಕರಣತ್ತಿಲ್ ವಿರೈತ್ತಿಲ್ ಪಿರಿಪ್ಪಿಕ್ಕೈಕ್ಕಾಕವುಮ್ ಇಪ್ಪದಂ ಪ್ರಯುಕ್ತ ಮಾಕಿರಿವಾಕ್ಯೆಯಾಲೇ, ಇದು ಉಪಯುಕ್ತಮಾಯ್ ಉಪಾಯಾದಿಗಳುಡೈಯ ಸ್ತುತಿಯು-ಮಾಕಿರದು.

"ಯಸ್ತದ್ವೇದ ಯತ ಆಬಭೂವ । ಸಂಧಾಂ ಚ ಯಾಗ್ಂ ಸಂದಧೇ ಬ್ರಹ್ಮಣೈಷಃ । ರಮತೇ ತಸ್ಮಿನ್ನುತ ಜೀರ್ಣೇ ಶಯಾನೇ । ನೈನಂ ಜಹಾತ್ಯಹಸ್ಸು ಪೂರ್ವೇಷು ।" (ತೈತ್ತಿರೀಯ ಆರಣ್ಯಕ : ೩ ಪ್ರಶ್ನೆ-೧೪ ಅನುವಾಕ-೨ ಹನಸು) "ಯಾರೊಬ್ಬನು ತನಗೆ ಈ ದೇಹವು ತನ್ನ ಪೂರ್ವಾರ್ಜಿತ ಕರ್ಮಾನುಗುಣವಾಗಿ, ಪರಬ್ರಹ್ಮ-ನಿಂದ ತನ್ನ ಆತ್ಮನೊಡನೆ ಕೂಡಿಸಲ್ಪಟ್ಟಿದೆ –ಎಂಬುವನ್ನರಿತಿದ್ದರೂ, ದೇಹವಿಯೋಗ ಕಾಲದಲ್ಲಿ ಆ ದೇಹವು ಕೇವಲ ಕರ್ಮಫಲ ಭೋಗಾ-

ರ್ಥವಾಗಿ ತನಗೆ ಬಂದುದು -ಎಂಬುದನ್ನು ಸ್ಮರಿಸದೆ ಜೀರ್ಣವಾಗಿ ಬಿದ್ದಿರುವ ದೇಹದಲ್ಲಿ ತಾನು ಹಿಂದೆ ಅನೇಕ ದಿನಗಳಲ್ಲಿ ಅದರಲ್ಲಿದ್ದ ಅಭಿಮಾನದಿಂದ, ಆ ದೇಹವನ್ನು ಸುಲಭವಾಗಿ ಬಿಡುವುದಿಲ್ಲ." –ಎಂದು, **ಸಂಧಾಮಿತ್ಯಾದಿಗಳಿಲ್** = ಮೇಲೆ ಹೇಳಿದ **'ಸಂಧಾಂಚಯಾಂ'** ಮೊದಲಾದ ಶ್ರುತಿವಾಕ್ಯಗಳಲ್ಲಿ, **ಪಡಿಯೇ**=ಹೇಳಿರುವಂತೆಯೇ, **ಜುಗುಪ್ಸಾ-ವಿಷಯದಶೆಯಿಲೇ**=ಕಾಷ್ಠ ಪಾಷಾಣಗಳಂತೆ ಬಿದ್ದಿರುವಾಗಲೂ ಹೇಯವಾದ ಜೀರ್ಣವಾದ ದೇಹದಲ್ಲಿ ಅಭಿಮಾನದಿಂದ ಕೂಡಿರುವ, ಮರಣದೆಸೆಯಲ್ಲಿ **ಶರಣ್ಯನುಡೈಯ** = ಶರಣಾಗತರನ್ನು ರಕ್ಷಿಸಿಯೇ ತೀರಬೇಕೆಂದಿರುವ ಭಗವಂತನ, **ವಾತ್ಸಲ್ಯವಿಶೇಷತ್ತೈಯುಮ್** = ವಿಶೇಷವಾದ ವಾತ್ಸಲ್ಯ ಗುಣವನ್ನೂ, ಅಂದರೆ ಮೊದಲು ಶರಣಾಗತ್ಯನುಷ್ಠಾನ ಸಮಯದಲ್ಲಿ ದೇಹಾ-ವಸಾನ ಕಾಲದಲ್ಲಿ ತನ್ನನ್ನು ಕರ್ಮಬಂಧದಿಂದ ಬಿಡಿಸಿ ಮುಕ್ತಿಯನ್ನನು ಗ್ರಹಿಸಬೇಕಾಗಿ ಪ್ರಾರ್ಥಿಸಿದ ಚೇತನನು, ದೇಹಾವಸಾನಕಾಲ ಪ್ರಾಪ್ತವಾದಾಗ ಆ ಕರ್ಮಬಂಧದಿಂದ ಕೂಡಿದ್ದ ದೇಹದಲ್ಲಿ ವಿಶೇಷ ಅಭಿಮಾನದಿಂದ ಕೂಡಿದವ-ನಾಗಿ, ಆ ದೇಹವನ್ನು ತೊರೆದುಹಾಕಲು ಇಷ್ಟವಿಲ್ಲದ ಸ್ಥಿತಿಯಲ್ಲಿದ್ದು, ತಾನು ಭಗವಂತನಲ್ಲಿ ಮೊದಲು ಶರಣಾಗತ್ಯನುಷ್ಠಾನುಕಾಲದಲ್ಲಿ ಮಾಡಿದ ಪ್ರಾರ್ಥನೆಗೆ ವಿರುದ್ಧವಾಗಿರುವಿಕೆಯೆಂಬ ದೋಷದಿಂದ ಕೂಡಿದ್ದರೂ, ಭಗವಂತನು, 'ದೋಷ ಅದರ್ಶಿತ್ವಂ ವಾತ್ಸಲ್ಯಂ' –ಎಂದು ಹೇಳುವಂತೆ, ಚೇತನನ ದೋಷ-ವನ್ನು ಪರಿಗಣಿಸದೆ, ವಿಶೇಷವಾದ ವಾತ್ಸಲ್ಯಗುಣದಿಂದ ಕೂಡಿದವನಾಗಿರು-ವಿಕೆಯೂ, ('ಕಾಷ್ಠ ಪಾಷಾಣಸನ್ನಿಭಂ ನಯಾಮಿ ಪರಮಾಗತಿಂ' –ಎಂಬಲ್ಲಿ ತೋರುತ್ತದೆ. ಒಂದೇ ಸ್ಥಳದಲ್ಲಿರುವ ದೀಪವು ತನ್ನ ಜ್ವಾಲೆ (ಕಾಂತಿ) ಮತ್ತು ಪ್ರಭೆಯಿಂದ ಅನೇಕ ಸ್ಥಳಗಳನ್ನು ತಿಳಿಯುವಂತೆ ಮಾಡುತ್ತದೆ. ಅಂತೆಯೇ ಸ್ವತಃ ಪ್ರಕಾಶಕವಾದ ಗುಣವುಳ್ಳ ಅಣುಸ್ವರೂಪನಾದ ಜೀವನೂ, ತನ್ನನ್ನೂ ತಾನು ಪ್ರಕಾಶಪಡಿಸಿಕೊಂಡು ಇತರ ಪದಾರ್ಥಗಳನ್ನೂ ತಿಳಿದುಕೊಳ್ಳುವ ಸಾಮರ್ಥ್ಯವಿರುತ್ತದೆ. [ವೇದಾಂತಶಾಸ್ತ್ರದಲ್ಲಿ, ಚೇತನನ ತನ್ನನ್ನು ತಾನು ಪ್ರಕಾಶಪಡಿಸಿಕೊಳ್ಳುವ ಸಾಮರ್ಥ್ಯವನ್ನು 'ಧರ್ಮಿ ಭೂತಜ್ಞಾನ'ವೆಂದೂ ಇತರ ವಸ್ತುಗಳನ್ನು ಪ್ರಕಾಶಪಡಿಸುವ ಸಾಮರ್ಥ್ಯವನ್ನು 'ಧರ್ಮಭೂತಜ್ಞಾನ,

ವೆಂದೂ ಕರೆಯುತ್ತಾರೆ.] ತನ್ನ ಪ್ರಭೆಯಿಂದ ದೂರವ್ಯಾಪಿಸಿ ವಸ್ತುಗಳನ್ನು ಪ್ರಕಾಶಪಡಿಸುವ ಸಾಮರ್ಥ್ಯವುಳ್ಳ ದೀಪವನ್ನು, ನಾಲ್ಕು ಗೋಡೆಗಳ ಮಧ್ಯದಲ್ಲಿರುವ ಒಂದು ಚಿಕ್ಕ ಕೊಠಡಿಯಲ್ಲಿಟ್ಟಾಗ, ಅದು ತನ್ನನ್ನೂ, ಆ ಚಿಕ್ಕ ಕೊಠಡಿಯಲ್ಲಿರುವ ವಸ್ತುಗಳನ್ನೂ ಮತ್ತು ಆ ಕೊಠಡಿಯ ಕಿಟಕಿಗಳಿಂದ ಹೊರಗೆ ವ್ಯಾಪಿಸುವ ಪ್ರಭೆ ಎಷ್ಟು ದೂರ ಪ್ರಸರಿಸಬಲ್ಲುದೋ, ಅಷ್ಟರೊಳಗಿರುವ ವಸ್ತುಗಳನ್ನು ಮಾತ್ರವೇ ತಿಳಿಯುವಂತೆ ಮಾಡುತ್ತದೆ. ಅಂತೆಯೇ ಅಣುವಾದ ಜೀವನು ತನ್ನ ಧರ್ಮಭೂತಜ್ಞಾನದಿಂದ ಎಲ್ಲೆಡೆಯೂ ವ್ಯಾಪಿಸುವ ಸಾಮರ್ಥ್ಯವನ್ನು ಹೊಂದಿದ್ದರೂ, ಕರ್ಮಗತವಾದ ದೇಹದಿಂದ ಬಂಧಿತನಾದಾಗ್ಗ, ಧರ್ಮಜ್ಞಾನದಿಂದ ಆ ದೇಹವೆಲ್ಲವನ್ನೂ ವ್ಯಾಪಿಸಿಕೊಂಡು, ಆ ದೇಹದಲ್ಲಿಯಲ್ಲಿಯೂ ಸುಖ ದುಃಖಾನುಭವಗಳನ್ನೂ, ಮತ್ತು ಕಿಟಕಿಯ ರಂಧ್ರ, ದಿಂದ ಹೊರಗೆ ಪ್ರಸರಿಸುವ ದೀಪ ಪ್ರಭೆಯಂತೆ, ತನ್ನ ಕಣ್ಣು, ಕಿವಿ-ಮೂಗು ಬಾಯಿ, ಇತ್ಯಾದಿ ರಂಧ್ರಗಳಿಂದ ಹೊರಗೆ ಪ್ರಸರಿಸುವ ಧರ್ಮಭೂತ ಜ್ಞಾನದಿಂದ ಹೊರಗಿನ ವಸ್ತುಗಳನ್ನೂ ಗ್ರಹಿಸುತ್ತಾನೆ. ಆದರೆ, ಅಧಿಕ ದೇಶವರ್ತಿಯಾಗಿ ತನ್ನ ಪ್ರಭೆಯಿಂದ ವ್ಯಾಪಿಸಿ ಅನೇಕ ವಸ್ತುಗಳನ್ನು ಪ್ರಕಾಶಪಡಿಸುವ ಸಾಮರ್ಥ್ಯವುಳ್ಳ ದೀಪವನ್ನು ಚಿಕ್ಕದಾದ ಕೋಣೆಯೊಂದರಲ್ಲಿಟ್ಟಾಗ, ಹೇಗೆ ಅದರ ಪ್ರಭೆಯು ಸಂಕುಚಿತವಾಗಿ, ಅದು ವ್ಯಾಪಿಸುವ ದೇಶವರ್ತಿಯಾದ ವಸ್ತುಗಳನ್ನು ಮಾತ್ರ ಪ್ರಕಾಶಿಸುವಂತೆ, ಅಣುವಾದರೂ ತನ್ನ ಧರ್ಮ ಭೂತಜ್ಞಾನದಿಂದ ಎಲ್ಲೆಡೆಯೂ ವ್ಯಾಪಿಸುವ ಸಾಮರ್ಥ್ಯವುಳ್ಳ ಜೀವನು ಕರ್ಮಬಂಧದಿಂದ ದೇಹವೊಂದರಲ್ಲಿ ಸಿಲುಕಿಕೊಂಡಾಗ, ಅವನ ಧರ್ಮ ಭೂತಜ್ಞಾನವು ಸಂಕೋಚವಾಗಿ ಅದು ವ್ಯಾಪಿಸುವ ದೇಶದಲ್ಲಿನ ವಿಷಯವನ್ನು ಮಾತ್ರವೇ ತಿಳಿಸುತ್ತದೆ. ಈ ರೀತಿ ಜ್ಞಾನ ಸಂಕೋಚ ಹೊಂದಿದ ಚೇತನನಿಗೆ ಜ್ಞಾನವಿಕಾಸವಾಗಿ ಸರ್ವಜ್ಞತ್ವವು ಪ್ರಾಪ್ತವಾಗಬೇಕಾದರೆ, ಚೇತನನು ಕರ್ಮಬಂಧದಿಂದ ದೂರನಾಗಬೇಕು. ಈ ರೀತಿ ಕರ್ಮಬಂಧದಿಂದ ಮುಕ್ತನನ್ನಾಗಿಸುವಿಕೆಯು ಭಗವಂತನನ್ನುಳಿದು ಮತ್ತಾರಿಂದಲೂ ಮಾಡಲು ಸಾಧ್ಯವಿಲ್ಲ. ಇದನ್ನೇ, ಈ ಪ್ರಕರಣದಲ್ಲಿ ಆಚಾರ್ಯರು **ಒರು ಪ್ರಕಾಶಮುಟ್ರು**=ಒಂದು ವಿಧವಾದ ಜ್ಞಾನವೂ ಇಲ್ಲದೆ, ಕಿಡಕ್ಕಿರ =ಬಿದ್ದಿರುವ **ಇವನೈ** = ಈ ಚೇತನನನ್ನು. **"ಪ್ರದೀಪವದಾವೇಶಃ"**

(ಬ್ರಹ್ಮಸೂತ್ರ ೪ ಅಧ್ಯಾಯ-೪ ಪಾದ -ಅಭಾವಧಿಕರಣ- ೬ನೆಯ ಸೂತ್ರ) **ಎನ್ಗಿರಪಡಿಯೇ** = 'ಪ್ರದೀಪವದಾವೇಶಃ' -ಎಂದು ಬ್ರಹ್ಮಸೂತ್ರದಲ್ಲಿ ಹೇಳಿರುವಂತೆಯೇ, **ಒರುಕ್ಕಾಲೆ** = ಒಮ್ಮೆಲೆ, **ಸರ್ವಜ್ಞನಾಕ್ಕುಹಿರ** = (ಅಲ್ಪಜ್ಞನಾದ ಚೇತನನನ್ನು) ಸರ್ವಜ್ಞನಾಗಿ ಮಾಡುವ, **ಆಶ್ಚರ್ಯಶಕ್ತಿ-ಯೋಗತ್ತೈಯುಂ** = ಆಶ್ಚರ್ಯವಾದ ಶಕ್ತಿಯನ್ನು (ಭಗವಂತನು) ಹೊಂದಿರುವಿಕೆಯನ್ನೂ; **ಪ್ರಪನ್ನನ್** = ಶರಣಾಗತನು, **ಇಪ್ಪಡಿ** = ಈ ರೀತಿ ಯಾಗಿ ಕಲ್ಲು ಕಟ್ಟಿಗೆಗಳಿಗೆ ಸಮನಾಗಿ, ಬಾಹ್ಯಪ್ರಜ್ಞೆಯಿಲ್ಲದಂತೆ ಬಿದ್ದು-ಕೊಂಡು, **ದೀರ್ಘನಿದ್ರೈ ಪಣ್ಣುಂಪೋದು** = ದೀರ್ಘಕಾಲದ ನಿದ್ರೆ-ಮಾಡುತ್ತಿರುವ ಸಮಯದಲ್ಲಿ, **ಸರ್ವವಿಧಬಂಧುವಾನ** = ಎಲ್ಲ ವಿಧವಾಗಿಯೂ ಬಂಧುವಾದ, **ಅಂತರ್ಯಾಮಿಯೈ** = ಜೀವನೊಡನೆಯೇ ಅಂತರ್ಯಾಮಿ ಸ್ವರೂಪನಾಗಿರುವ ಪರಮಾತ್ಮನೊಬ್ಬನನ್ನು, **ಒಳಿಯ** = ಬಿಟ್ಟು, **ಮತ್ತೊರುತ್ತರುಂ** = ಇತರರೊಬ್ಬರೂ, **ತಟ್ಟಿ** = ಹೊಡೆದು, **ಎಳುಪ್ಪ-ಮಾಟ್ಟಾರ್‌ಕಳ್** = ಎಬ್ಬಿಸುವುದಿಲ್ಲ, **ಎನ್ರುಂ** = ಎಂಬ, **ಅರ್ಥತ್ತೈಯುಂ** = ಅರ್ಥವನ್ನೂ, **ವಿಸ್ತರಿತ್ತು** = ವಿಸ್ತರಿಸಿ ತೋರಿಸಲು, (ಮತ್ತು ಪೆರಿಯಾ-ಳ್ವಾರವರು ತಮ್ಮ ತಿರುಮೊಳಿಯಲ್ಲಿ (೪-೫-೪) ಹೇಳಿರುವಂತೆ ದೇಹಾವಸಾನ-ಕಾಲದಲ್ಲಿ ಊರ್ಧ್ವಶ್ವಾಸವು ಮೇಲೆದ್ದು ಗಂಟಲು ಅಡಗಿಹೋಗಿ ಕೆಳಗೆ ಬಿದ್ದು) **ಕಾಲುಂ ಕೈಯುಂ** = ಕಾಲು ಮತ್ತು ಕೈಗಳು, **ವಿದಿರ್-ವಿದಿರ್ತು** = ಒಂದೊಂದು ಒಂದೊಂದುಕಡೆಗೆ ಚಾಚಿಕೊಂಡು ಬಿದ್ದು. **ಕಣ್ಣುರಕ್ಕಮ್** = ದೀರ್ಘ ನಿದ್ರೆಯು, **ಅಕಾವದನ್** = ಉಂಟಾಗುವ, **ಮುನ್ನಮ್** = ಮೊದಲೇ, **ಮೇಲೈ ವಣ್ಣನೈ** = ಶ್ರೀವೈಕುಂಠನಾಥನನ್ನು, **ಮೇವುವೇಂಡುಂ** = ತನ್ನನ್ನು ದೇಹಾವಸಾನದಲ್ಲಿ ಶ್ರೀವೈಕುಂಠಲೋಕಕ್ಕೆ ಕರೆದೊಯ್ಯಬೇಕೆಂದು ಪ್ರಾರ್ಥಿಸಬೇಕು **-ಎನ್ರು** = ಎಂದು **ಮುಮುಕ್ಷು-ಕ್ಕಳುಕ್ಕು** = ಮೋಕ್ಷವನ್ನು ಬಯಸುವವರಿಗೆ **ಶರಣ್ಯವಶೀಕರಣತ್ತಿಲ್** = ಶರಣಾಗತರನ್ನು ರಕ್ಷಿಸಲು ಸಿದ್ಧನಾಗಿರುವ ಶ್ರಿಯಃ ಪತ್ನಿಯನ್ನು ವಶಪಡಿಸಿ-ಕೊಳ್ಳಲು ('ತಸ್ಯ ಚ ವಶೀಕರಣಂ ತಚ್ಛರಣಾಗತಿರೇವ' -ಎಂದು ಹೇಳಿರು ವಂತೆ, ಆ ಪರಮಾತ್ಮನನ್ನು ವಶಪಡಿಸಿಕೊಳ್ಳಲು ಅವನ ಅಡಿದಾವರೆಯಲ್ಲಿ

ಶರಣಾಗತಿಮಾಡುವುದೊಂದೇ ಉತ್ತಮವಾದ ಉಪಾಯವೆಂದೂ, ಅದರ ಅನುಷ್ಠಾನದಲ್ಲಿ) **ವಿರೈತ್ತಿಲ್** = ಅಭಿಮುಖ್ಯವು, **ಪಿರಪ್ಪಿಕ್ಕೈಕ್ಕಾಕವುಂ** = ಉಂಟಾಗುವಂತೆ ಮಾಡಬೇಕೆಂದೂ, **ಇಪ್ಪದಂ** = 'ಕಾಷ್ಠಪಾಷಾಣಸನ್ನಿಭಂ' -ಎಂಬ ಈ ಪದವು, **ಪ್ರಯುಕ್ತಮಾಕಿರದು** = ಪ್ರಯೋಗಿಸಲ್ಪಟ್ಟಿದೆ. **ಆಕಿರದಾಕ್ಕೈಯಾಲೇ** = ಆದುದರಿಂದಲೇ, **ಇದು** = ಈ ಪದವು, **ಉಪಯುಕ್ತಮಾಯ್** = ಉಪಯುಕ್ತವಾಗಿ, **ಉಪಾಯಾದಿಗಳುಡೈಯ** = ಮುಮುಕ್ಷುಗಳು ದೇಹಸಾನಕಾಲಕ್ಕೆ ಮುನ್ನವೇ ಅನುಷ್ಠಿಸಿಯೇ ತೀರಬೇಕಾದ -'ಶರಣಾಗತಿ' -ಎಂಬ ಉಪಾಯ ಮತ್ತು ಅದರ ಅಂಗಗಳ, **ಸ್ತುತಿಯುಂ** = ವೈಶಿಷ್ಟ್ಯವನ್ನು ತೋರುವ, ಸ್ತೋತ್ರರೂಪವಾಗಿಯೂ, **ಆಕಿರದು** = ಇರುತ್ತದೆ.

**ಅನಾಲುಂ ಒರುದೃಷ್ಟಾನ್ತಮೇ ಅಮೈಯಾದೊ? -ಎನ್ರಿಲ್ ಸಾಧರ್ಮ್ಯತ್ತಿಲ್ ಅತಿಶಯಮ್ ತೋಟ್ರುಕೈಕ್ಕಾಕ ಪಲದೃಷ್ಟಾನ್ತಂ ಶೊಲ್ಲುಕ್ಕಡವದೆನ್ರು ಅಲಂಕಾರಿಕರ್ ಶೊನ್ನಾರ್‌ಕಳ್.**

**ಅನಾಲುಂ** = ಮೇಲೆ ಹೇಳಿದಂತೆ, 'ಕಾಷ್ಠಪಾಷಾಣಸನ್ನಿಮ್' -ಎನ್ನುವ ಪದವು ಪ್ರಯುಕ್ತವಾಗಿರುವುದು ಸಾರ್ಥಕವೇ ಆಗಿರುವುದೆಂದು ಹೇಳಿದರೂ, **ಒರುದೃಷ್ಟಾಂತಮೇ ಅಮೈಯಾದೋ?** = ಬೇರೊಂದು ದೃಷ್ಟಾಂತ (ಉದಾಹರಣ)ವೂ ತೋರುವುದಿಲ್ಲವಲ್ಲಾ ? **ಎನ್ರಿಲ್** = ಎಂದು ಪ್ರಶ್ನಿಸಿದರೆ, **ಸಾಧರ್ಮ್ಯತ್ತಿಲ್** = ಸಮಾನಧರ್ಮವುಳ್ಳ ವಿಷಯ ಅಥವಾ ವಸ್ತುಗಳಲ್ಲಿ, (ಒಂದರಲ್ಲಿ) **ಅತಿಶಯಮ್** = ವಿಶೇಷವಾದ ಅತಿಶಯವನ್ನು **ತೋಟ್ರುಕೈಕ್ಕಾಕ** = ತೋರಿಸಲೆಂದು, **ಪಲದೃಷ್ಟಾಂತಂ** = ಹಲವಾರು ಉದಾಹರಣಗಳು, **ಶೊಲ್ಲಕ್ಕಡವತು-ಎನ್ರು** = ಹೇಳಬೇಕೆಂದು, **ಅಲಂ-ಕಾರಿಕರ್** = (ಸಾಹಿತ್ಯ) ಅಲಂಕಾರ ಶಾಸ್ತ್ರಜ್ಞರು, **ಶೊನ್ನಾರ್‌ಕಳ್** = ಹೇಳಿದ್ದಾರೆ.

**ಇವನ್ ಚೈತನ್ಯಾಶ್ರಯಮಾನ ಅಚಮರ್ಥಮಾಯಿರುನ್ದಾನೇ-**

**ಯಾಕಿಲುಂ, ಅಪ್ಪೊದೈಯಿಲ್ ಅಜ್ಞಾನತ್ತೈ ನಿರೂಪಿತ್ತು ಪಾರ್‌ತ್ತಾಲ್ ಕಾಷ್ಠಪಾಷಾಂಗಳಿನುಡೈಯ ಅನ್ಯೋನ್ಯ ವೈಷಮ್ಯ-ತ್ತಳವುಂ ಪೋರುಮಿತ್ತನೈ ಅವತ್ತುಕ್ಕುಂ ಇವನುಕ್ಕುಂ ಉಳ್ಳ ವೈಷಮ್ಯಮೆನ್ರು ಕರುತ್ತಾಕವುಮಾಮ್.**

ಸ್ವರೂಪತಃ ಯಾವ ವಿಕಾರವನ್ನೂ ಹೊಂದದೆ ಜೀವಾತ್ಮನು ಚೇತನ್ಯ-ವುಳ್ಳವನಾಗಿದ್ದಾನೆ. ಆದರೆ ಕರ್ಮಗತವಾದ ದೇಹದಲ್ಲಿ ಬಂಧಿತನಾದಾಗ, ನಾನಾ ವಿಕಾರಗಳಿಂದ ಕೂಡಿದ ದೇಹಗತವಾದ ಧರ್ಮವನ್ನು ತನ್ನಲ್ಲಿದೆ-ಯೆಂದು ತಿಳಿದುಕೊಂಡು - ನಾನು ದಪ್ಪವಾಗಿದ್ದೇನೆ, ನಾನು ಕೃಶನಾಗಿ-ದ್ದೇನೆ, ನಾನು ಕುಂಟ, ನಾನು ಕುರುಡ, - ಇತ್ಯಾದಿಯಾಗಿ ತಿಳಿಯುತ್ತಾನೆ. ತತ್ವತ್ತಃ ನೋಡಿದರೆ, ಈ ವಾಕ್ಯಗಳಲ್ಲಿರುವ, ಅರಿವನ್ನು ಹೊಂದಿರುವ ಚೈತನ್ಯ ಅಥವಾ ಜ್ಞಾನಾಶ್ರಯವಾದ 'ನಾನು' ಎಂಬ ಪದದಿಂದ ಹೇಳಲ್ಪಡು-ವವನೇ ಜೀವಾತ್ಮನು. ಮೇಲೆ ಹೇಳಿದ - ದಪ್ಪನಾಗಿರುವಿಕೆ, ಕೃಶನಾಗಿರುವಿಕೆ, ಕುಂಟುತನ, ಕುರುಡತನ ಇತ್ಯಾದಿಗಳು ವಿಕಾರವನ್ನು ಹೊಂದುವ ದೇಹದ ಧರ್ಮವಾಗಿರುತ್ತದೆ ಆದರೆ, ಜೀವನು ತತ್ತ್ವವನ್ನರಿಯದೆ ದೇಹದ ಧರ್ಮ-ವನ್ನು ತನ್ನಲ್ಲಿಯೂ, ತನ್ನ ಚೈತನ್ಯ ಧರ್ಮವನ್ನು ದೇಹದಲ್ಲಿಯೂ ತಿಳಿಯು-ತ್ತಾನೆ - ಇದನ್ನೇ ಅಜ್ಞಾನವೆನ್ನುತ್ತಾರೆ. ಜೀವ ದೇಹವನ್ನು ಪ್ರವೇಶಿಸಿ, ದೇಹವನ್ನು ಬಿಡುವವರೆವಿಗೂ, ಜಡವಾದ ದೇಹದಲ್ಲಿಯೂ, ಚೈತನ್ಯಸ್ವರೂಪ-ನಾದ ಜೀವನ ಸಂಸರ್ಗದಿಂದ, ಚೈತನ್ಯವು ತೋರುತ್ತದೆ. ಜೀವನು ದೇಹವನ್ನು ಬಿಟ್ಟು ಹೋಗುವಾಗ, ಅವನ ಚೈತನ್ಯ ಶಕ್ತಿ ಬೇರೊಂದುಕಡೆ ಪ್ರಸರಿಸದೆ, ಅವನಲ್ಲಿಯೇ ಅಡಗಿಕೊಳ್ಳುವುದರಿಂದ, ದೇಹದಲ್ಲಿ ಸ್ವಭಾವತಃ ಇರುವ ಕಲ್ಲು ಕಟ್ಟಿಗೆಗಳಿಗೆ ಸಮಾನವಾದ ಜಡಸ್ವರೂಪವು ಮಾತ್ರವೇ ತೋರುತ್ತದೆ. ಜೀವನ ಚೈತನ್ಯಶಕ್ತಿಯು ದೇಹವೆಲ್ಲವನ್ನೂ ವ್ಯಾಪಿಸಿಕೊಂಡು ದೇಹವು ಚೈತನ್ಯಶಕ್ತಿಯಿಂದ ಕೆಲಸಮಾಡುತ್ತಿರುವಲ್ಲಿ ಮಾಡಿದ ಪುಣ್ಯ ಪಾಪರೂಪ ಕರ್ಮಗಳಿಂದುಂಟಾದ ಸಂಸ್ಕಾರವು ಮಾತ್ರವೇ ದೇಹಾವಸಾನ-ಕಾಲದಲ್ಲಿ ಜೀವನೊಡನೆ ಅಂಟಿಕೊಂಡಿರುತ್ತದೆ. ದೇಹ ಬಿದ್ದ ಬಳಿಕ ಅವನು

ಹಿಂದೆ ಮಾಡಿದ ಪುಣ್ಯ ಪಾಪಕರ್ಮಗಳಿಗನುಗುಣವಾದ ಫಲವನ್ನು ಪಡೆಯಲು ಯೋಗ್ಯವಾದ ದೇಹವನ್ನು ಮುಂದೆ ಸೇರುತ್ತಾನೆ. ಆಗಲೂ ಈ ಸಂಸ್ಕಾರ ಅಥವಾ ವಾಸನೆಯು ಅವನನ್ನು ಅಂಟಿಕೊಂಡೆ ಬರುತ್ತದೆ. ಕೇವಲ ಅಜ್ಞಾನ ದಲ್ಲಿಯೇ ಮುಳುಗಿದವನಿಗೆ ಅಂತ್ಯಕಾಲದಲ್ಲಿಯೂ ಅಜ್ಞಾನದಿಂದ ತುಂಬಿದ ಪ್ರಕೃತಿಯ ವಿಷಯಗಳಲ್ಲಿಯೇ ಮನಸ್ಸಿದ್ದು ಅದರ ಚಿಂತನೆಯೇ ಉಂಟಾಗು-ತ್ತದೆ. ಅದಕ್ಕೆ ಅವನು ಅದಕ್ಕನುಗುಣವಾದ ಅಜ್ಞಾನ ಭೂಯಿಷ್ಠವಾದ ಯೋನಿಗಳಲ್ಲಿ ಜನ್ಮವನ್ನು ಪಡೆಯುತ್ತಾನೆ. ಒಳ್ಳೆಯ ಭಾವನೆಯಾಗಲಿ, ಕೆಟ್ಟ ಭಾವನೆಯಾಗಲೀ ಯಾವುದೇ ವಿಧವಾದ ಭಾವನೆಯನ್ನು ದೇಹಾವಸಾನ ಕಾಲದಲ್ಲಿ ಹೊಂದಿದ್ದರೂ, ಆಯಾ ಭಾವನೆಗಳಿಗನುಗುಣವಾದ ದೇಹವನ್ನು ಮುಂದೆ ಹೊಂದುತ್ತಾನೆ. ಭಗವಂತನ ಕೃಪಾಕಟಾಕ್ಷದಿಂದ, ಭಕ್ತಿಯೋಗ-ವನ್ನನುಷ್ಠಿಸಿದವನು ಕ್ಷೀಣಕಲ್ಮಷನಾಗಿ ಅಂತ್ಯಕಾಲದಲ್ಲಿ ಭಗವಂತನ ಚಿಂತನೆ-ಯನ್ನೇ ಮಾಡುತ್ತಾ ದೇಹತ್ಯಾಗ ಮಾಡುವುದರಿಂದ, ದೇಹವಿಯೋಗವಾದ ಕೂಡಲೇ ಭಗವಂತನನ್ನೇ ಸೇರುತ್ತಾನೆ. ಶರಣಾಗತನು ಮಾತ್ರ ದೇಹವಿರುವಲ್ಲಿ ಒಮ್ಮೆ ಭಗವಂತನಲ್ಲಿ ಶರಣಾಗತಿ ಮಾಡಿ, ದೇಹಾವಸಾನ ಕಾಲದಲ್ಲಿ ತನ್ನನ್ನು ಪುಣ್ಯಪಾಪಕರ್ಮದ ಸಂಕೋಲೆಯಿಂದ ಬಿಡುಗಡೆ ಮಾಡಿ ಶ್ರೀವೈಕುಂಠ ಲೋಕಕ್ಕೊಯ್ದು ಅವನೊಡನೆಯೇ ಕೂಡಿಸಿಕೊಂಡು ರಕ್ಷಿಸಬೇಕೆಂದು ಪ್ರಾರ್ಥಿಸಿರುವುದರಿಂದ, ಶರಣಾಗತರನ್ನು ರಕ್ಷಿಸಲು ಕಂಕಣಬದ್ಧನಾದ ಭಗವಂತನು, ಆ ಶರಣಾಗತನ ದೇಹಾವಸಾನ ಕಾಲದಲ್ಲಿ, ಅವನು ಮಾಡಿದ ಪುಣ್ಯಪಾಪಕರ್ಮಗಳಿಗನುಗುಣವಾಗಿ, ಅವನಿಗೆ ಭಗವಂತನ ಚಿಂತನಾದಿಗಳು ಬಾರದೆ, ಪ್ರಾಕೃತಿಕವಾದ ತುಚ್ಛವಾದ ಚಿಂತನೆಗಳೇ ಬಂದರೂ, ಅದಕ್ಕೆ ತಕ್ಕ ತುಚ್ಛವಾದ ಯೋನಿಗಳಲ್ಲಿ ಜನನವೇ ಮೊದಲಾದುವುಗಳನ್ನು ತಪ್ಪಿಸಿ, ಅವನು ಹಿಂದೆ ಮಾಡಿರುವ ಶರಣಾಗತಿಯನ್ನು ಸ್ಮರಿಸಿಕೊಂಡು, ಆ ಶರಣಾಗತಿಗೆ ಅನುಗುಣವಾಗಿ ಅವನ ಮೇಲೆ ವಿಶೇಷವಾದ ಕೃಪೆಯನ್ನು ತೋರಿ, ಅವನಿಗೆ ತನ್ನಲ್ಲಿಯೇ ಆಸೆ ಉಂಟಾಗುವಂತೆ ಮಾಡಿ ಅವನನ್ನು ತನ್ನೊಡನೆ ವೈಕುಂಠ ಲೋಕಕ್ಕೆ ಕರೆದೊಯ್ದು, ಅಲ್ಲಿ ಪರಿಪೂರ್ಣವಾದ ಬ್ರಹ್ಮಾನಂದವನ್ನೇ ಅನುಗ್ರಹಿಸಿ ರಕ್ಷಿಸುತ್ತಾನೆ. ಇದು ಶರಣಾಗತನಿಗೆ ಮಾತ್ರವೇ ಅನ್ವಯಿಸುವ ವಿಶೇಷ ವಿಷಯ. ದೇಹಾವಸಾನ ಕಾಲದಲ್ಲಿ ಜೀವನು ಭಗವಂತನ ಸ್ಮರಣೆಯೇ

ಇಲ್ಲದಂತೆ ಕಾಷ್ಠಪಾಷಾಣ ಸನ್ನಿಭನಾಗಿದ್ದರೂ, ಭಗವಂತನು ಶರಣಾಗತನನ್ನು ಆ ಕಾಲದಲ್ಲಿ ರಕ್ಷಿಸಿಯೇ ತೀರುತ್ತಾನೆಂದು ತೋರುವುದಕ್ಕೆಂದೇ ವರಾಹ ಚರಮ ಶ್ಲೋಕದಲ್ಲಿ "ಕಾಷ್ಠಪಾಷಾಣ ಸನ್ನಿಭಂ"-ಎಂಬ ಪದವನ್ನು ಪ್ರಯೋಗಿಸಿದ್ದಾನೆ. ಇದನ್ನೇ ಆಚಾರ್ಯರು ಈ ಮುಂದಿನ ಗದ್ಯ ಖಂಡ ಗಳಲ್ಲಿ ವಿವರಿಸಿದ್ದಾರೆ.

ಇಪ್ಪಡಿಯಾನಾಲ್, "ತಥಾ ಪ್ರಲೀನ ಸ್ತಮಸಿ ಮೂಢಯೋನಿಷು ಜಾಯತೇ" ಎನ್ರುಂ 'ಯಂಯಂ ವಾಪಿಸ್ಮರನ್ ಭಾವಂ (ತ್ಯಜಂತ್ಯಂತೇ ಕಳೇಬರಂ । ತಂತಮೇವೈತಿ ಕೌಂತೇಯ)' -ಎನ್ರುಂ ಶೊಲ್ಲುಕ್ಕಿರ ಪ್ರಮಾಣಂಗಳ್ ಶೇರುಂಪಡಿ ಯೆನ್ನೆನ್ನಿಲ್ ಅವೈಸಾವಮಾನ್ಯ ವಿಷಯಂ ।

ಇಪ್ಪಡಿಯಾನಾಲ್=ಒಮ್ಮೆ ಭಗವಂತನನ್ನು ಸ್ಮರಿಸಿದವನು, ದೇಹಾ-ವಸಾನದ ಸಮಯದಲ್ಲಿ ಭಗವಂತನನ್ನು ಸ್ಮರಣೆ ಮಾಡದೆ ಕಲ್ಲು ಕಟ್ಟಿಗೆಗೆ ಸಮನಾಗಿ ಬಿದ್ದಿದ್ದರೂ, ಭಗವಂತನೇ ಆ ಹಿಂದೆ ತನ್ನನ್ನು ಸ್ಮರಿಸಿದ ಚೇತನ-ನನ್ನು ಆ ಸಮಯದಲ್ಲಿ ಸ್ಮರಣೆ ಮಾಡಿಕೊಂಡು ಕರೆದೊಯ್ಯುತ್ತಾನೆ. ಆದುದ ರಿಂದ ಶರಣಾಗತನಿಗೆ ಸ್ವಯತ್ನಪ್ರಾಪ್ತವಾದ ಅಂತ್ಯಕಾಲಸ್ಮೃತಿಯು ಇದ್ದೇ ಇರಬೇಕೆಂಬ ನಿಯಮವಿಲ್ಲ-ಎಂದು ಈ ರೀತಿ ಹೇಳಿದರೆ, ಭಗವಂತನ ಆಜ್ಞಾ ರೂಪವಾದ ಸ್ಮೃತಿಗಳಲ್ಲಿ ಹೇಳಿರುವ, "ತಥಾ=ಆ ರೀತಿಯಾಗಿ(ದೇಹಾವಸಾನ ಕಾಲದಲ್ಲಿ) ಭಗವಂತನ ಸ್ಮರಣೆಯೇ ಇಲ್ಲದೆ, ತಮಸಿ=ಅಜ್ಞಾನಾಂಧಕಾರ-ದಲ್ಲಿ, ಪ್ರಲೀನಃ = ಮುಳುಗಿದವನು, ಮೂಢಯೋನಿಷು = ಅಜ್ಞಾನ ಭೂಯಿಷ್ಠವಾದ ಯೋನಿಗಳಲ್ಲಿ, ಜಾಯತೇ=ಹುಟ್ಟುತ್ತಾನೆ"-ಎನ್ರುಂ= ಎಂದೂ, (ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳುವಾಗ) "ಕೌಂತೇಯ=ಎಲೈ ! ಕುಂತಿಯ ಪುತ್ರನಾದ ಅರ್ಜುನನೇ, ಯಂಯಂ= ಯಾವ ಯಾವ, ಭಾವಂ ಅಪಿ ಸ್ಮರನ್=ಭಾವನೆಗಳನ್ನು ಹೊಂದಿ, (ಅಂತೇ =ದೇಹಾವಸಾನಕಾಲದಲ್ಲಿ, ಕಳೇಬರಂ=ದೇಹವನ್ನು ತ್ಯಜಂತಿ=ಬಿಡು ತ್ತಾರೆಯೋ, ತಂತಂ ಏವ=ಆಯಾ ಭಾವನೆಗಳನ್ನೊಳಗೊಂಡ ದೇಹವನ್ನೇ, ಏತಿ=(ಮುಂದೆ ಹೋಗಿ ಸೇರುತ್ತಾರೆ)"-ಎನ್ರುಂ=ಎಂದೂ, ಶೊಲ್ಲುಕಿರ =ಹೇಳಿರುವ, ಪ್ರಮಾಣಂಗಳ್=ಪ್ರಮಾಣ ವಚನಗಳು, ಶೇರುಪಂಡಿ

ಎನ್ನ ?=ಕೊಡುವುದೆಂತು ? ಎನ್ನಿಲ್=ಎಂದು ಪ್ರಶ್ನಿಸಿದರೆ, ಅವ್ವೈ=ಆ ಪ್ರಮಾಣ ವಚನಗಳಲ್ಲಿ ಹೇಳಿರುವುದು, ಸಾಮಾನ್ಯ ವಿಷಯಂ=ಶರಣಾಗತ-ನಲ್ಲದ ಇತರ ಸಾಮಾನ್ಯ ಚೇತನರಿಗೆ ಅನ್ವಯಿಸುವ ವಿಷಯುವೆಂದು ತಿಳಿಯ ಬೇಕು.

ಇದು ವಿಶೇಷವಿಷಯಂ—"ನಷ್ಟ ಸ್ಮೃತಿರಪಿ ತ್ಯಜನ್ ದೇಹಂ" "ಎಯ್ ಪ್ಪೆನ್ನೈವಂದು ನಲಿಯುಂ ಪೋದು ಅಂಗೇದುಂ ನಾನುನ್ನೈ ನಿನೈಕ್ಕ ಮಾಟ್ಟೇ" (ಪೆರಿಯಾಳ್ವಾರ್ ತಿರುಮೊಳಿ : ೪-೧೦-೧) ಇತ್ಯಾದಿ ಕಳುಕ್ಕುಂ ಇದುವೇ ನಿರ್ವಾಹಂ.

ಇದು=ದೇಹಾವಸಾನಕಾಲದಲ್ಲಿ ಅಂತಿಮ ಸ್ಮೃತಿಯಿಲ್ಲದಿದ್ದರೂ ಭಗವಂತನು ಶರಣಾಗತನನ್ನು ಕರೆದೊಯ್ಯುತ್ತಾನೆಂಬುದು, ವಿಶೇಷ-ವಿಷಯಂ=ಶರಣಾಗತನಿಗೆ ಮಾತ್ರ ಅನ್ವಯಿಸುವ ವಿಶೇಶವಿಷಯವು, ಇದನ್ನೇ ಸ್ಮೃತಿಗಳಲ್ಲಿ ಹೇಳಿರುವ ನಷ್ಟಸ್ಮೃತಿರಪಿ=ಸ್ಮರಣೆಯನ್ನೇ ಕಳೆದು ಕೊಂಡವನಾದರೂ (ಶರಣಾಗತನು) ದೇಹಂ=ದೇಹವನ್ನು, ಪರಿತ್ಯಜನ್=ತ್ಯಾಗಮಾಡುವ ಸಮಯದಲ್ಲಿ (ಭಗವಂತನು ತಾನಾಗಿ ಬಂದು ಕರೆದೊಯ್ಯು-ತ್ತಾನೆ) ಮತ್ತು ಪೆರಿಯಾಳ್ವಾರ್ರವರೂ ಭಗವಂತನಲ್ಲಿ ವಿಜ್ಞಾಪಿಸುವಾಗ, ಎಯ್ ಪ್ಪು=ಮೃತ್ಯುವು, ವಂದು=ಬಂದು, ಎನ್ನೈ=ನನ್ನನ್ನು, ನಲಿ-ಯುಂಪೋದು=ಹಿಂಸಿಸುವ ಸಮಯದಲ್ಲಿ, ಅಂಗು=ಆಗ, ಏದುಂ=ಯಾವ ರೀತಿಯಲ್ಲಿಯೂ, ನಾನ್=ನಾನು, ಉನ್ನೈ=ನಿನ್ನನ್ನು, ನಿನೈಕ್ಕ-ಮಾಟ್ಟೇನ್=ಸ್ಮರಿಸಿಕೊಳ್ಳುವುದಿಲ್ಲ—ಇತ್ಯಾದಿಕಳುಕ್ಕುಂ=ಇದೇ ಮೊದ-ಲಾದ ಮಾತುಗಳಿಗೂ, ಇದುವೇ=ಶರಣಾಗತನಿಗೆ ಅಂತಿಮ ಸ್ಮೃತಿಯ ನಿರ್ಬಂಧವಿಲ್ಲ ಎಂದು ಮೇಲೆ ಹೇಳಿದ ವಿಷಯುವೇ, ನಿರ್ವಾಹಂ=ಸಮರ್ಥನೆ ಮಾಡುತ್ತದೆ.

"ಶರೀರಪಾತಸಮಯೇತು ಕೇವಲಂ ಮದೀಯಯೈವ ದಯಯಾ ಅತಿ ಪ್ರಬುದ್ಧಃ"—ಎನ್ರದು ಪ್ರಪನ್ನರ್ ತಂಗಳಿಲೇ ಶಿಲರ್ಕ್ಕೆ ಪಟ್ಟವೆನ್ರು ಶಿಲರ್ ನಿರ್ವಹಿಪ್ಪರ್ಕಳ್. ಅಂಗವನ್ರಿಕ್ಕೆ "ಕಾಷ್ಠಪಾಷಾಣಸನ್ನಿ-ಭಮ್" "ನಷ್ಟ ಸ್ಮೃತಿರಪಿ ಪರಿತ್ಯಜನ್"—ಇತ್ಯಾದಿಕಳುಕ್ಕು ಸ್ವ-

ಯತ್ನಸಾಧ್ಯ ಅಂತಿಮ ಪ್ರತ್ಯಯನಿವೃತ್ತಿಯಿಲೇ ತಾತ್ಪರ್ಯಮ್. ಮದೀಯಯೈವ ದಯಯಾ ಅತಿಪ್ರಬುದ್ಧಃ ಇತ್ಯಾದಿ ವಾಕ್ಯಮ್, ಸ್ವಯತ್ನ ಮನ್ರಿಕ್ಕೆ ಇರುಕ್ಕ ಭಗವತ್ಕೃಪಾಮಾತ್ರತ್ತಾಲೇ ಅಂತಿಮ ಪ್ರತ್ಯಯ ವಿಶೇಷಂ ಪ್ರಪನ್ನರಿಲಾರುಕ್ಕುಂ ವರುಕಿರಪಡಿಯ್ಯೆ ಕಾಟ್ಟು-ಕಿರದೆನ್ರು ಶಿಲರ್ ನಿರ್ವಹಿಪ್ಪಾರ್‌ಕಳ್.

(ಭಗವದ್ರಾಮಾನುಜರ ಶರಣಾಗತಿ ಗದ್ಯದಲ್ಲಿ ಭಗವಂತನು ಹೇಳಿರುವ) ಶರೀರಪಾತ ಸಮಯೇತು = ಶರಣಾಗತನ ದೇಹವು ಬಿದ್ದುಹೋಗುವ ಸಮಯದಲ್ಲಿ, ಕೇವಲಂ=ಕೇವಲ, ಮದೀಯಯಾ=ನನ್ನದೇ ಆದ, ದಯಯಾ ಏಹಿ=ಕರುಣೆಯಿಂದಲೇ, (ಶರಣಾಗತನಾದ ಚೇತನನು), ಅತಿ-ಪ್ರಬುದ್ಧಃ = ಬಹಳ ಎಚ್ಚರಿಕೆಯಿಂದ ಕೂಡಿದವನಾಗಿ, (ನನ್ನನ್ನೇ ಕಾಣುತ್ತಾ, ತನ್ನ ಪೂರ್ವಸಂಸ್ಕಾರದ ದೆಶೆಯಿಂದ ಕೆಳಮಟ್ಟಕ್ಕೆ ಜಾರದೆ, ಜೀರ್ಣವಾದ ವಸ್ತುವನ್ನು ತ್ಯಜಿಸುವಂತೆ, ಈ ಪ್ರಾಕೃತಿಕವಾದ ಸ್ಥೂಲ ಸೂಕ್ಷ್ಮ ದೇಹವನ್ನು ತ್ಯಜಿಸುತ್ತಾನೆ). ಎನ್ರದು=ಎಂದು ಹೇಳಿರುವುದಾ ದರೋ (ಪ್ರಪನ್ನರಾದ ಶರಣಾಗತರು), ತಂಗಳಿಲೇ=ತಮ್ಮಲ್ಲಿಯೇ, ಶಿಲರ್ಕ್ಕೆ ಪಟ್ಟವೆನ್ರು=ಕೆಲವರಿಗೆ ಮಾತ್ರ ಸಂಭವಿಸಬಹುದೆಂದು, ಶಿಲರ್=ಕೆಲವರು, ನಿರ್ವಹಿಪ್ಪರ್‌ಕಳ್=ನಿರ್ವಹಿಸುತ್ತಾರೆ. ಅಂಗನೆನ್ರಿಕ್ಕೆ=ಅದು ಹೇಗೆಂದರೆ, (ಮೇಲೆ ಹೇಳಿದೆ). 'ಕಾಷ್ಠಪಾಷಾಣ ಸನ್ನಿಭಮ್', 'ನಷ್ಟಸ್ಮೃತಿರಪಿ ಪರಿತ ಜನ್'. ಇತ್ಯಾದಿಕಳುಕ್ಕು=ಇದೇ ಮೊದಲಾದ ವಾಕ್ಯಗಳಿಗೆ, ಸ್ವಯತ್ನಸಾಧ್ಯ=ಜೀವನು (ಕೇವಲ) ತನ್ನ ಪ್ರಯತ್ನದಿಂದಲೇ ಸಾಧಿಸ ಲಾಗುವುದೆಂದು ಹೇಳುವ ಅಂತಿಮಪ್ರತ್ಯಯನಿವೃತ್ತಿಯಿಲೇ=ಅಂತ್ಯಕಾಲ ದಲ್ಲಿರಬೇಕಾದ ಭಗವಚ್ಚಿಂತನಾದಿಗಳು ಪ್ರಪನ್ನನಿಗೆ, ವಿಧಿಯಲ್ಲವೆಂದು ಹೇಳುವುದರಲ್ಲಿ, ತಾತ್ಪರ್ಯಮ್=ತಾತ್ಪರ್ಯವು.

'ಮದೀಯಯೈವದಯಯಾ ಅತಿಪ್ರಬುದ್ಧಃ'-ಇತ್ಯಾದಿ ವಾಕ್ಯಂ =ಮೇಲೆ ಹೇಳಿರುವ ಇದೇ ಮೊದಲಾದ ವಾಕ್ಯಗಳು, ಸ್ವಯತ್ನಮನ್ರಿಕ್ಕೆ= ತನ್ನ ಪ್ರಯತ್ನವಿಲ್ಲದಂತೆಯೇ, ಇರುಕ್ಕ=ಇರುವ, ಭಗವತ್ಕೃಪಾಮಾತ್ರ-ತ್ತಾಲೇ=ಭಗವಂತನ ದಯಾಗುಣಮಾತ್ರದಿಂದಲೇ, ಅಂತಿಮಪ್ರತ್ಯಯ-

ವಿಶೇಷಂ=ಅಂತ್ಯಕಾಲದಲ್ಲಿ ಸಂಭವಿಸಬಹುದಾದ ಭಗವಚ್ಚಿಂತನಾದಿ ವಿಶೇಷ ಗಳು, ಪ್ರಪನ್ನರೆಲ್ಲಾರುಕ್ಕುಂ=ಶರಣಾಗತರೆಲ್ಲರಿಗೂ, ವರುಕಿರಪಡಿಯೈ =ಬರುವ ಕ್ರಮವನ್ನು, ಕಾಟ್ಟುಕಿರದು=ತೋರುವುದು, ಎನ್ರು=ಎಂದು, ಶಿಲರ್=ಕೆಲವರು, ನಿರ್ವಹಿಪ್ಪಾರ್‌ಗಳ್=ಅಭಿಪ್ರಾಯಪಡುತ್ತಾರೆ. ಒಟ್ಟಿ ನಲ್ಲಿ ಹೇಳುವುದಾದರೆ ಅಂತ್ಯಕಾಲದಲ್ಲಿ ಕಲ್ಲುಕಟ್ಟಿಗೆಗಳಿಗೆ ಸಮಾನವಾಗಿ ಬಿದ್ದಿ- ರುವ ಶರಣಾಗತನಾಗಿರುವ ಚೇತನನನ್ನು ಭಗವಂತನು ತಾನಾಗಿಯೇ ಬಂದು ಶ್ರೀವೈಕುಂಠ ಲೋಕಕ್ಕೆ ಕರೆದೊಯ್ಯುತ್ತಾನೆ.

"ಯೋ ವೇತ್ತಿ ಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾ ಸ್ವತಃ"— ಎನ್ನುಂ ಪಡಿಯಾಯ್ ಇರುಕ್ಕಿರ ಈಶ್ವರನ್ ಕ್ಷೇತ್ರಜ್ಞರೈಪ್ಪೋಲೆ ಮರಪ್ಪದು ಒರು ಕಾಲಮುಂ, ನಿನೈಪ್ಪದುಂ ಒರುಕಾಲಮುಂ ಅನ್ರಿಕ್ಕೆ ಇರುಕ್ಕ ಇಪ್ಪೋದು, 'ಅಹಂ ಸ್ಮರಾಮಿ'—ಎನ್ಪಾನೇ?—ಎನ್ನಿಲ್, ಪ್ರಪನ್ನನುಕ್ಕು ಅಪ್ಪೋದು, ಸ್ವಯತ್ನತ್ತಾಲ್ ಸ್ಮರಣಮಿಲ್ಲೈಯಾ- ನಾಲುಂ, ಇಂದಸ್ಮರಣಂ ಮುದಲಾಯಾದಲ್ ಇದುಕ್ಕು ಮೇಲಾ- ಯಾದಲುಳ್ಳ ಫಲಮೆಲ್ಲಾಂ, ಭರ ಸ್ವೀಕಾರಂ ಪಣ್ಣಿ, ಸ್ವೀಕೃತ ನಿರ್ವಹಣ ಕ್ಷಮನುಮಾನ ತನ್ನಾಲೇ ಸಿದ್ಧಿಕ್ಕುಮೆನ್ರು ತೋಟ್ರುಕೈ- ಕ್ಕಾಗ ತನ್ನುಡೈಯ ಸಾನುಗ್ರಹಬುದ್ಧಿವಿಶೇಷತ್ತೈ ಸ್ಮರಣಶಬ್ದತ್ತಾಲೇ ಉಪಚರಿಕ್ಕಿರಾನ್.

"ಸದಾ=ಎಲ್ಲ ಕಾಲದಲ್ಲಿಯೂ, ಸ್ವತಃ=ತಾನಾಗಿಯೇ, ಯಃ= ಯಾರು, ಯುಗಪತ್=ಏಕಕಾಲದಲ್ಲಿ, ಸರ್ವಂ=ಎಲ್ಲವನ್ನೂ, ಪ್ರತ್ಯ- ಕ್ಷೇಣ=ಪ್ರತ್ಯಕ್ಷವಾಗಿಯೇ, ವೇತ್ತಿ=ತಿಳಿಯುತ್ತಾನೆಯೋ, (ಅವನೇ ಪರ ಬ್ರಹ್ಮನೆಂದು ತಿಳಿ)"-ಎನ್ನುಂ ಪಡಿಯಾಯ್=ಎಂದು ಹೇಳುವಂತೆ, ಇರು- ಕ್ಕಿರ=ಇರುವ, ಈಶ್ವರನ್=ಸರ್ವೇಶ್ವರನಾದರೋ, ಕ್ಷೇತ್ರಜ್ಞರೈಪ್ಪೋಲೇ =ಜೀವರುಗಳಂತೆ, ಮರಪ್ಪದು=ವಿಷಯಗಳನ್ನು ಮರೆಯುವುದು, ಒರು ಕಾಲಮುಂ=ಒಂದು ಕಾಲವು, ನಿನೈಪ್ಪದು=ಸ್ಮರಣಮಾಡಿಕೊಳ್ಳುವುದು, ಒರು ಕಾಲಮುಂ=ಒಂದು ಕಾಲವು, ಅನ್ರಿಕ್ಕೇ=ಎಂದಿಲ್ಲದೆ, ಇರುಕ್ಕ= ಇರುವಲ್ಲಿ, ಇಪ್ಪೋದು=ಈಗ, 'ಅಹಂ ಸ್ಮರಾಮಿ='ನಾನು ಸ್ಮರಣೆ

ಮಾಡಿಕೊಳ್ಳುಕ್ಕಿರೇನ್'—ಎನ್ಬಾನೇ=ಎಂದು ಏಕೆ ಹೇಳಿದ್ದಾನೆ?—ಎನ್ನಿಲ್ =ಎಂದು ಆಕ್ಷೇಪಿಸಿದರೆ, ಪ್ರಪನ್ನನುಕ್ಕು=ಶರಣಾಗತನಿಗೆ, ಅಪ್ಪೋದು =ಆ ದೇಹಾವಸಾನ ಸಮಯದಲ್ಲಿ, ಸ್ವಯತ್ನತ್ತಾಲ್=ತನ್ನ ಪ್ರಯತ್ನ ದಿಂದ, ಸ್ಮರಣಯಿಲ್ಲೈ ಯಾನಾಲುಂ=ಭಗವಂತನ ಸ್ಮರಣವು ವ್ಯರ್ಥವಾಗಿ ಬೇಕಿಲ್ಲದಿದ್ದರೂ, ಇಂದ ಸ್ಮರಣಂ=ಈ ಭಗವಂತನು ಶರಣಾಗತನನ್ನು ಅವನ ದೇಹಾವಸಾನ ಕಾಲದಲ್ಲಿ ಸ್ಮರಿಸಿಕೊಳ್ಳುವುದಾದರೋ, ಮುದಲಾ-ಯಾದಾಲ್=ಮೊಟ್ಟಮೊದಲಾದುದಾದರೂ, ಇದುಕ್ಕು=ಈ ಸ್ಮರಣಕ್ಕೆ, ಮೇಲಾಯಾದಲುಳ್ಳ=ಮೇಲೆ ಮೇಲೆ ಸಂಭವಿಸುವ, ಫಲಮೆಲ್ಲಾಂ= ಎಲ್ಲ ವಿಧವಾದ ಫಲವೂ, ಭರಸ್ವೀಕಾರಂ ಪಣ್ಣಿ=ಶರಣಾಗತನ ರಕ್ಷಾಭಾರ ವನ್ನು ಒಪ್ಪಿಕೊಂಡು, ಸ್ವೀಕೃತ ನಿರ್ವಹಣಕ್ಷಮನುಮಾನ=ಒಪ್ಪಿಕೊಂಡ ಕೆಲಸವನ್ನು ನಿರ್ವಹಿಸುವ ಸಾಮರ್ಥ್ಯವುಳ್ಳ, ತನ್ನಾಲೇ=ತನ್ನಿಂದಲೇ, ಸಿದ್ಧಿಕ್ಕುಮೆನ್ರು=ಸಿದ್ಧಿಸುವುದೆಂದು, ತೋಟ್ರುಕೈಕ್ಕಾಗ=ತೋರ್ಪಡಿ ಸುವ ಸಲುವಾಗಿ, ತನ್ನುಡೈಯ=ತನ್ನ, ಸಾನುಗ್ರಹಬುದ್ಧಿವಿಶೇಷತ್ತೈ= ಅನುಗ್ರಹಪೂರ್ವಕವಾದ ಬುದ್ಧಿ ವಿಶೇಷವನ್ನು, ಸ್ಮರಣಶಬ್ದತ್ತಾಲೇ= 'ಸ್ಮರಾಮಿ'-ಎಂಬ ಸ್ಮರಣ ಶಬ್ದದಿಂದಲೇ, ಉಪಚರಿಕ್ಕರಾನ್=ಔಪಚಾರಿಕ ವಾಗಿ ತಿಳಿಸುತ್ತಾನೆ.

ಇಂಗುತ್ತ ವರ್ತಮಾನವ್ಯಪದೇಶತ್ತಾಲೇ ಇವ್ವನುಗ್ರಹತ್ತುಕ್ಕು ಪಿನ್ಬು ಒರು ನಿಗ್ರಹಂ ವಾರಾದು—ಎನ್ನುಮಿಡಂ ತೋಟ್ರುಕಿರದು.

ಇಂಗುತ್ತ=ಇಲ್ಲಿ ಪ್ರಯೋಗಿಸಿರುವ, ವರ್ತಮಾನವ್ಯಪದೇಶತ್ತಾಲೆ ='ಸ್ಮರಾಮಿ'-ಎಂಬ ವರ್ತಮಾನಕಾಲಿಕ ಕ್ರಿಯಾಪದದಿಂದ, ಪಿನ್ಬು=ಶರ ಣಾಗತಿ ಮಾಡಿದ ನಂತರ ಬರುವ ಕಾಲದಲ್ಲಿ, ಒರು ನಿಗ್ರಹಂ=ಯಾವ ಒಂದು ವಿಧವಾದ ನಿಗ್ರಹವೂ, ವಾರಾದು=ಶರಣಾಗತನ ವಿಷಯದಲ್ಲಿ ಭಗ ವಂತನಿಗುಂಟಾಗುವುದಿಲ್ಲ, ಎನ್ನುಮಿಡಂ=ಎಂಬ ವಿಷಯವೂ, ತೋಟ್ರು-ಕಿರದು=ತಿಳಿದುಬರುತ್ತದೆ. ಅಂದರೆ, ಪ್ರಪತ್ತ್ಯುತ್ತರ ಕಾಲದಲ್ಲಿ ಚೇತನನು ಅಬುದ್ಧಿಪೂರ್ವಕ ಮಾಡಿದ ಪಾಪವು ಅವನಿಗೆ ಅಂಟುವುದಿಲ್ಲವೆಂದೂ, ಬುದ್ಧಿ ಪೂರ್ವಕವಾಗಿ ಮಾಡಿದ ಪಾಪಗಳಿಗೆ ಲಘುದಂಡನೆ ಕೊಟ್ಟು ಅವನನ್ನು ಪಾಪ

ದೂರನನ್ನಾಗಿಸಿ, ದೇಹಾವಸಾನ ಕಾಲದಲ್ಲಿ ಯಾವ ವಿಧವಾದ ತನ್ನ ನಿಗ್ರಹಕ್ಕೂ ಅವನು ಪಾತ್ರನಾಗದಂತೆ ಮಾಡಿ, ಅವನನ್ನು ರಕ್ಷಿಸುತ್ತಾನೆ ಎಂಬ ಅಂಶವನ್ನು 'ಸ್ಮರಾಮಿ'—ಎಂಬ ಪದದಿಂದ ತಿಳಿಸಿದ್ದಾನೆ.

ಇದಿಲುತ್ತಮನೇ ಅನ್ವೈಂದಿರುಕ್ಕ ಚರಮಶ್ಲೋಕತ್ತಿಪ್ಪೋಲೆ ಮಿಕುದಿಯಾನ 'ಅಹಂ'-ಎನ್ನಿರಪದತ್ತಾಲೆ, ಸ್ವಾತಂತ್ರ್ಯಮಡಿಯಾಕ ಸರ್ವಕ್ಷೇತ್ರಜ್ಞರ್ ತಿರತ್ತಿಲುಂ ವಿಪರೀತಕರ್ಮಾನುರೂಪಮಾನ ನಿಗ್ರಹ-ಪ್ರವೃತ್ತನಾಂ, ಲೀಲಾರಸತ್ತೈ ಅನುಭವಿತ್ತು ಪ್ಪೋಂದದಾಕ ಕಾರುಣ್ಯ-ಮಡಿಯಾಕ, ವ್ಯಾಜಶೇಷಾನುಗುಣಾನುಗ್ರಹಪ್ರವೃತ್ತನಾಂ ಆಶ್ರಿತ-ರಕ್ಷಣರಸತ್ತೈ ಅನುಭವಿಕ್ಕ, ನಿವೃತ್ತಪ್ಪೋದೇ ಮೋಕ್ಷಂ ಕೊಡುಕ್ಕವಲ-ಪಡಿಯೈಯುಂ ಅಪ್ಪೋದು ವಿಲಕ್ಕವಲ್ಲಾರಿಲ್ಲಾದಪಡಿಯೈಯುಂ, ತಾನ್ ಕಟ್ಟಿನ ಕಾಲಾದಿಕಳೈ ಯೊಳಿಯ, ತನಕ್ಕು ವೇರೊರು ಸಹಕಾರಿ ವೇಂಡಾದಪಡಿಯೈಯುಂ ತೋಟ್ಟುವಿಕ್ಕಿರಾನ್.

ಇದಿಲ್=ಈ 'ಸ್ಮರಾಮಿ' (ಸ್ಮರಿಸಿಕೊಳ್ಳುತ್ತೇನೆ) ಎಂಬ ಪದದಲ್ಲಿ, ಉತ್ತಮನೇ=ಉತ್ತಮ ಪುರುಷದಿಂದ ತಿಳಿದುಬರುವ 'ಅಹಂ' (ನಾನು)-ಎಂಬ ಪದದ ಅರ್ಥವೂ, ಅನ್ವೈನ್ದಿರುಕ್ಕ=ಕೂಡಿಕೊಂಡಿರುವಲ್ಲಿ, ಚರಮ-ಶ್ಲೋಕತ್ತಿಲ್ ಪ್ಪೋಲೆ='ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ।'—ಎಂಬ ಶ್ರೀಕೃಷ್ಣ ಚರಮಶ್ಲೋಕದಲ್ಲಿರುವಂತೆ, ಮಿಕುದಿಯಾನ=ಅಧಿಕವಾಗಿ ಮತ್ತೊಮ್ಮೆ ಹೇಳಿರುವ, 'ಅಹಂ' ಎನ್ನಿರಪದತ್ತಾಲೆ='ಅಹಂ' (ನಾನು) ಎನ್ನುವ ಪದದಿಂದ, ಸ್ವಾತಂತ್ರ್ಯಮಡಿಯಾಕ=ತನಗಿರುವ ಸ್ವಾತಂತ್ರ್ಯ ಶಕ್ತಿಯಿಂದ, ಸರ್ವಕ್ಷೇತ್ರಜ್ಞರ್ ತಿರತ್ತಿಲುಂ=ಎಲ್ಲ ಪ್ರಾಕೃತಿಕ ದೇಹದಿಂದ ಕೂಡಿದ ಜೀವರ ವಿಷಯದಲ್ಲಿಯೂ, ವಿಪರೀತಕರ್ಮಾನು-ರೂಪಮಾನ=ಆಯಾಯಾ ಜೀವರು ಮಾಡಿರುವ ವಿಪರೀತವಾದ ಕರ್ಮಗಳಿಗೆ ಅನುಗುಣವಾದ, ನಿಗ್ರಹಪ್ರವೃತ್ತನಾಂ=ತನ್ನ ನಿಗ್ರಹ ಶಕ್ತಿಯಿಂದ ಅವರಿಗೆ ನಾನಾ ತರಹದ ಜನ್ಮಗಳನ್ನು ಕೊಡುವವನಾಗಿ, ಲೀಲಾರಸತ್ತೈ=ಲೀಲಾರಸವನ್ನು, ಅನುಭವವಿತ್ತುಪ್ಪೋಂದದಾಗ=ಅನುಭವಿಸಿದುದರಿಂದ,

ಕಾರುಣ್ಯಮುಡಿಯೂಕ=ಆ ಚೇತನರ ವಿಷಯದಲ್ಲಿ ಉಂಟಾದ ದಯೆಯು ಕಾರಣದಿಂದ, ವ್ಯಾಜವಿಶೇಷಾನುಗುಣಂ=ತನ್ನನ್ನು ರಕ್ಷಿಸಬೇಕೆಂದು ಬೇಡಿ ಕೊಳ್ಳುವ 'ಶರಣಾಗತಿ'-ಎಂಬ 'ನೆಪ' ಅಥವಾ ವಿಶೇಷವಾದ ವ್ಯಾಜಕ್ಕೆ ಅನುಗುಣವಾಗಿ, ಅನುಗ್ರಹಪ್ರವೃತ್ತನಾಯ್=ಚೇತನರಿಗೆ ಅನುಗ್ರಹಿಸಲು ಉದ್ಯುಕ್ತನಾಗಿ, ಆಶ್ರಿತರಕ್ಷಣರಸತ್ತೈ=ತನ್ನನ್ನು ಆಶ್ರಯಿಸಿದ ಚೇತನ ರನ್ನು ರಕ್ಷಿಸುವುದರಿಂದುಂಟಾಗುವ ಆನಂದವನ್ನು, ಅನುಭವಿಕ್ಕ=ಅನುಭ ವಿಸಲು, ನಿನೈತ್ತಪ್ಪೋದೆ=ತಾನು ಸಂಕಲ್ಪಿಸಿದ ಸಮಯದಲ್ಲಿಯೇ, ಮೋಕ್ಷಂ ಕೊಡುಕ್ಕವಲ್ಲ ಪಡಿಯೈಯುಂ=ಮೋಕ್ಷವನ್ನನುಗ್ರಹಿಸುವ ಸಾಮರ್ಥ್ಯ-ವನ್ನು ತಾನು ಹೊಂದಿರುವಿಕೆಯನ್ನೂ, ಅಪ್ಪೋದು=ತಾನು ಚೇತನರಿಗೆ ಮೋಕ್ಷಕೊಡುವ ಸಮಯದಲ್ಲಿ ವಿಲಕ್ಕವಲ್ಲಾರ್=ಅದನ್ನು ತಡೆಯುವವರು, ಇಲ್ಲಾದಪಡಿಯೈಯುಂ=ಯಾರೂ ಇಲ್ಲದಿರುವಿಕೆಯನ್ನೂ, ತಾನ್ ಕಟ್ಟಿನ =ತಾನೇ ಸಂಕಲ್ಪಿಸಿರುವ, ಕಾಲಾದಿಕಳೈಒಳಿಯ=ಕಾಲವೇ ಮೊದಲಾ-ದುವುಗಳನ್ನು ಬಿಟ್ಟು, ವೇರೊರು=ಬೇರೊಂದು, ಸಹಕಾರಿವೇಂಡಾದಪಡಿ-ಯೈಯಂ=ಸಹಕಾರಿ ಕಾರಣವು ತನಗೆ ಬೇಕಿಲ್ಲವೆಂಬುದನ್ನೂ, ತೋಟ್ರು-ವಿಕ್ಕಿರಾನ್=ತೋರ್ಪಡಿಸುತ್ತಾನೆ.

'ಕಾಷ್ಠಪಾಷಾಣಸನ್ನಿಭಂ', 'ಅಹಂ ಸ್ಮರಾಮಿ'-ಎನ್ಗಿರ ಇರುಂ-ಡಾಲುಂ 'ಮಾಂಧ್ಯಾತಿ ಪುರುಷವ್ಯಾಘ್ರಃ ತತೋ ಮೇ ತದ್ಗತಂ ಮನಃ' -ಎನ್ಗಿರ ಪ್ರಕಾರತ್ತೈ ಕಳಿಕ್ಕಿರಾನ್.

'ಕಾಷ್ಠಪಾಷಾಣಸನ್ನಿಭಂ'-'ಅಹಂ ಸ್ಮರಾಮಿ'-ಎನ್ಗಿರ=ಎಂಬ ಇರಂಡಾಲಂ ಎರಡು ಪದಗಳಿಂದಲೂ, ಪುರುಷವ್ಯಾಘ್ರಃ=ಪುರುಷಶ್ರೇಷ್ಠನು, ಮಾಂ=ನನ್ನನ್ನು, ಧ್ಯಾತಿ=ಧ್ಯಾನಿಸುತ್ತಾನೆ. ಮೇ=ನನ್ನ, ಮನಃ= ಮನಸ್ಸು, ತದ್ಗತಂ=ಅವನಲ್ಲಿಗೆ ಹೋಗಿರುತ್ತದೆ. (ಅಂದರೆ ಅವನ ರಕ್ಷಾ ವಿಷಯವನ್ನೇ ಚಿಂತಿಸುತ್ತಿರುತ್ತದೆ)—ಎನ್ಗಿರ=ಎಂಬ, ಪ್ರಕಾರತ್ತೈ ಕಳಿಕ್ಕಿರಾನ್=ತನ್ನ ಸ್ಥಿತಿಯನ್ನು ತಿಳಿಸುತ್ತಾನೆ.

'ಮದ್ಭಕ್ತಂ'-'ಸ್ಮರಾಮಿ'-ಎನ್ಗಿರವಿತ್ತಾಲ್ ವಿಶ್ವಾನುಭವಂ ಪೆರು-

ಕೈಕ್ಕು ಒರು ನಿನ್ನೈವು ಪಣ್ಣಿನವನ್ನೈಪಟ್ರಿ ನಾಮುಂ ನಿತ್ಯಾನುಭವಂ ಕೊಡುಕ್ಕೈಕ್ಕು ಒರು ನಿನ್ನೈವು ಪಣ್ಣುವದೋಂ-ಎನ್ರುದಾಯ್‌ಟ್ರು.

'ಮದ್ಭಕ್ತಂ'-'ಸ್ಮರಾಮಿ'-ಎನ್ಗಿರ = ಎಂಬ, ಇತ್ತಾಲ್ = ಈ ಎರಡು ಪದಗಳಿಂದ, ನಿತ್ಯಾನುಭವಂ ಪೆರುಕೈಕ್ಕು=ಭಗವಂತನೊಡನೆ ನಿತ್ಯಾನುಭವವನ್ನು ಪಡೆಯಲು, ಒರು ನಿನ್ನೈವು ಪಣ್ಣಿನವನ್ನೈಪಟ್ರಿ=ಭಗವಂತನನ್ನು ಒಮ್ಮೆ ಸ್ಮರಿಸಿಕೊಂಡವನನ್ನು ಕುರಿತು, ನಾಮುಂ=ನಾವೂ, ನಿತ್ಯಾನುಭವಂ ಕೊಡುಕ್ಕೈಕ್ಕು=ನಿತ್ಯಾನುಭವವನ್ನು ಕೊಡಲು, ಒರು ನಿನ್ನೈವು ಪಣ್ಣುವದೋಂ=ಒಂದು ಸ್ಮರಣೆಯನ್ನು ಮಾಡಬೇಕೆಂದು, ಎನ್ರು-ದಾಯ್‌ಟ್ರು=ಹೇಳಿದಂತಾಯಿತು.

ಇಪ್ಪಡಿ 'ತಾಯ್ ನಿನ್ನೈತ್ತ ಕನ್ರೈಯೊಕ್ಕ ಯೆನ್ನೈಯುಂ ತನ್ನೈಯೇ ನಿನ್ನೈಕ್ಕ ಚೆಯ್ದು ತಾನೆನಕ್ಕಾಯ್ ನಿನ್ರೆಂದರುಳ್ ಚ್ಚೆಯ್ಯು-ಮಪ್ಪನ್' — ಎನ್ರುಂ ಪಡಿಯಾನ ತನ್ನಿನ್ನೈವು ಪರಮಪುರುಷಾರ್ಥ ಪರ್ಯಂತ ಮಾಕಿರ ಪಡಿಯೈ ಪಟ್ರಿ 'ನಯಾಮಿ ಪರಮಾಂ ಗತಿಂ'—ಎನ್ಗಿರಾನ್.

ಇಪ್ಪಡಿ=ಈ ರೀತಿಯಾಗಿ, (ತಿರುಮಂಗೈ ಆಳ್ವಾರವರು ತಮ್ಮ ಪೆರಿಯ ತಿರುಮೊಳಿಯಲ್ಲಿ [೭-೩-೨] ಭಗವಂತನು ಚೇತನೋದ್ಧಾರಮಾಡುವ ಕ್ರಮವನ್ನು ಸ್ತುತಿಸುವಲ್ಲಿ) "ತಾಯ್ ನಿನ್ನೈನ್ದ=ತನ್ನ ತಾಯಿಯಾದ ಹಸು-ವನ್ನು ಸ್ಮರಣೆ ಮಾಡಿಕೊಳ್ಳುವ, ಕನ್ರೇ ಒಕ್ಕೆ=ಕರುವಿನಂತೆ, ಎನ್ನೈಯುಂ =ದಾಸನಾದ ನನ್ನನ್ನೂ, ತನ್ನೈಯೇ=ನನಗೆ ಸ್ವಾಮಿಯಾದ ತನ್ನನ್ನೇ, ನಿನ್ನೈಕ್ಕಚ್ಚೆಯ್ದು=ಸ್ಮರಿಸುವಂತೆ ಮಾಡಿ, ತಾನ್ ಎನಕ್ಕು ಆಯ್ ನಿನ್ರೆಂದು=ನನಗೆ ಅವನನ್ನು ಸೇರಲು ಬೇಕಾಗಿರುವ ನಮ್ಮಗಳೆಲ್ಲವನ್ನೂ ತಾನೇ ಚಿಂತಿಸಿ (ದೇಹಾವಸಾನ ಕಾಲದಲ್ಲಿ ತಾನೇ ನಮ್ಮನ್ನು ಸ್ಮರಣೆ ಮಾಡಿ ಕೊಂಡು ಬಂದು ನಮ್ಮನ್ನು ಕರೆದೊಯ್ಯುವಲ್ಲಿ ನಮಗೆ ದರ್ಶನಾದಿಗಳನ್ನಿತ್ತು) ಅರುಳ್ ಶೆಯ್ಯುಂ=ಚೇತನರ ವಿಷಯದಲ್ಲಿ ದಯೆಯನ್ನು ತೋರುವ, ಅಪ್ಪನ್=ಸ್ವಾಮಿ", ಎನ್ರುಂ ಪಡಿಯಾನ=ಎಂದು ಹೇಳುವಂತಿರುವ, (ಭಗವಂತನು), ತನ್ನಿನ್ನೈವು=ತನ್ನ ಸ್ಮರಣೆಯಾದರೋ, ಪರಮಪುರು-

ಷಾರ್ಥವಾಕಿರ ಪಡಿಯೈಪಟ್ಟ=ಶ್ರೀವೈಕುಂಠ ಲೋಕವನ್ನು ಸೇರಿ ಭಗವಂತನೊಡನೆ ಕೂಡಿಕೊಂಡು ಪರಿಪೂರ್ಣ ಬ್ರಹ್ಮಾನಂದವನ್ನು ಅನುಭವಿಸುವಂತಹ, ಪರಮಪುರುಷಾರ್ಥವನ್ನು ಅನುಗ್ರಹಿಸುವ, ಪರ್ಯಂತವಾದುದೆಂಬುದನ್ನು ತಿಳಿಸಲೆಂದು, 'ನಯಾಮಿ ಪರಮಾಂ ಗತಿಂ'='ಪರಮಗತಿಗೆ ಒಯ್ಯುತ್ತೇನೆ', ಎನ್ಗಿರಾ̤ನ್=ಎಂದು ಹೇಳಿದ್ದಾನೆ.

'ನಯಾಮಿ' ಎನ್ಗಿರತ್ತುಕ್ಕು ಕೇತ್ತಿಲೇ ವಿಳುಂದ ಶಿರುಪಶುಕಳೈ ಎಡುಕ್ಕ ವಿಳುನ್ದ ಪಿತಾವೈ ಪ್ಪೋಲೇ, ಇವನುಡೈಯ ದೇಹತ್ತುಕ್ಕುಳ್ಳೇ, ಹಾರ್ದನಾಯ್ ನಿರ್ಕಿರ ನಾನ್ ತಾನೇ, ಅಪ್ರಾಕೃತ ಪರ್ಯಂಕಾರೋಹಣ ಪರ್ಯಂತಮಾಕ ನಡತ್ತುರ್ವ. ನಡುವುವರುಂ ಅರ್ಚಿರಾದಿಗಳುಂ ಇವನ್ನೈ ಎದಿರ್ಕೊಂಡು ಸತ್ಕರಿತ್ತು ತಾಂ ಪೆರುಕೈಕ್ಕು ನಾಮುಡೈತ್ತ ನಿಲೈಪ್ಪೇರೆನ್ರು ತಾತ್ಪರ್ಯಂ.

'ನಯಾಮಿ' ಎನ್ಗಿರತ್ತುಕ್ಕು='ನಯಾಮಿ' (ಒಯ್ಯುತ್ತೇನೆ) ಎಂದು ಹೇಳಿರುವುದಕ್ಕೆ, ಕೇತ್ತಿಲೇ=ಕೆಸರಿನಲ್ಲಿ, ವಿಳುಂದ=ಬಿದ್ದಿರುವ, ಶಿರುಪಶುಕಳೈ=ಚಿಕ್ಕ ಮಕ್ಕಳನ್ನು, ಎಡುಕ್ಕ=ಮೇಲೆತ್ತುವುದಕ್ಕಾಗಿ, ವಿಳುನ್ದ=ಆ ಕೆಸರಿನಲ್ಲಿಯೇ ಬಿದ್ದ, ಪಿತಾವೈಪ್ಪೋಲೇ=ತಂದೆಯಂತೆ, ಇವನುಡೈಯ=ಈ ಶರಣಾಗತನ, ದೇಹತ್ತುಕ್ಕುಳ್ಳೇ=ದೇಹದೊಳಗೆ, ಹಾರ್ದನಾಂ=ಹೃದಯಗುಹೆಯಲ್ಲಿ 'ಅಂತರ್ಯಾಮಿ' ಸ್ವರೂಪದಿಂದ, ನಿರ್ಕಿರ=ನಿಂತಿರುವ, ನಾನ್ ತಾನೇ=ನಾನೊಬ್ಬನೇ. ಅಪ್ರಾಕೃತ=ಪ್ರಾಕೃತವಲ್ಲದ ಶ್ರೀವೈಕುಂಠ ಲೋಕದಲ್ಲಿರುವ, ಪರ್ಯಂಕಾರೋಹಣಪರ್ಯಂತಮಾಕ=ನಾಗಪರ್ಯಂಕವನ್ನು ಹತ್ತುವವರೆವಿಗೂ, ನಡತ್ತುರ್ವ=ನಡೆಯಿಸುವವನು. ನಡುವು=ಮಧ್ಯದಲ್ಲಿ, ವರುಂ=ಬರುವ, ಅರ್ಚಿರಾದಿಗಳುಂ=ಅಗ್ನಿಯೇ ಮೊದಲಾದ ಅತಿವಾಹಿಕರೂ, ಇವನ್ನೈ=ಈ ಶರಣಾಗತನನ್ನು, ಎದಿರ್ಕೊಂಡು=ಎದುರುಗೊಂಡು, ಸತ್ಕರಿತ್ತು=ಸತ್ಕರಿಸಿ, ತಾಂ ಪೆರುಕೈಕ್ಕು=ತಾವು ಪಡೆಯುವ ಭಾಗ್ಯಕ್ಕೆ, ನಾಮುಡೈತ್ತ=ನಾವು ಪಡೆದ, ನಿಲೈಪ್ಪೇರ್=ಸ್ಥಿತಿಯೇ ಕಾರಣ, ಎನ್ರು=ಎಂದು, ತಾತ್ಪರ್ಯಂ =ಸಾರಾಂಶವು.

ಕೀಳ್ ಚ್ಚೊನ್ನ 'ಪ್ರಪತ್ತಿ' ಸಕಲಫಲ ಸಾಧನವಕ್ಕಾಂ ಇರುನ್ದದೇ ಯಾಕಿಲುಂ, ಅನನ್ಯ ಪ್ರಯೋಜನನಾನ ಇವನುಕ್ಕು ಪ್ರಯೋಜನಾಂತರಂಗಳೈ ಕೊಡುತ್ತಾಲ್, ಮಧುವಿದ್ಯಾದಿಗಳಿಲ್ ಪೋಲೇ, ಐಶ್ವರ್ಯಾತ್ಮಾನುಭವರೂಪ ಕ್ಷುದ್ರಫಲವ್ಯವಹಿತ ಮಾಕ ಮೋಕ್ಷಂ ಕೊಡುಪ್ಪದಲ್ ಶೆಯ್ಯಾ.

ಕೀಳ್ ಚ್ಚೊನ್ನ=ಈ ಹಿಂದೆಯೇ ಹೇಳಿರುವ, 'ಪ್ರಪತ್ತಿ'='ಶರಣಾಗತಿ'ಯಾದರೋ, ಅನನ್ಯಪ್ರಯೋಜನನಾನ ಇವನುಕ್ಕು=ಭಗವಂತನನ್ನುಳಿದು ಬೇರೆ ಯಾವ ಪ್ರಯೋಜನವನ್ನೂ ಅಪೇಕ್ಷಿಸದಿರುವ ಈ ಶರಣಾಗತನಿಗೆ, ಪ್ರಯೋಜನಾಂತರಂಗಳೈ=ಇತರ ಪ್ರಯೋಜನಗಳನ್ನು, ಕೊಡುತ್ತಾಲ್=ಕೊಟ್ಟರೇ, ಮಧುವಿದ್ಯಾಧಿಗಳಿಲ್ ಪೋಲೇ=ಮಧುವಿದ್ಯೆಯೇ ಮೊದಲಾದ ಕೆಲ ವಿದ್ಯಾ ಉಪಾಸನೆಗಳಲ್ಲಿ ಬರುವಂತೆ, ಐಶ್ವರ್ಯ=ಐಹಿಕೈಶ್ವರ್ಯ ಮತ್ತು ಆತ್ಮಾನುಭವರೂಪ=ಕೇವಲ ಆತ್ಮಾನುಭವರೂಪದ 'ಕೈವಲ್ಯ'ವನ್ನು ಅನುಭವಿಸುವಿಕೆ—ಮೊದಲಾದ, ಕ್ಷುದ್ರಫಲವ್ಯವಹಿತಮಾಕ=ಕ್ಷುದ್ರವಾದ ಫಲಗಳಿಂದ ಮಧ್ಯದಲ್ಲಿ ಕೆಲಕಾಲ ಬಿಟ್ಟು, ನಂತರ, ಮೋಕ್ಷಂ ಕೊಡುಪ್ಪದಲ್=ಮೋಕ್ಷ ಕೊಡುವುದನ್ನು, ಶೆಯ್ಯಾ=ಮಾಡುವುದಿಲ್ಲವು.

ಅವ್ಯವಹಿತಮಾಕ ಪರಮಪುರುಷಾರ್ಥತ್ತೈ ಅಡೈವಿಪ್ಪ ಎನ್ಗಿರ ವಿಶೇಷಂ ತೋಟ್ಟ 'ಪರಮಾಂ ಗತಿಂ' ಎನ್ಗಿರಾ. ಇಂಗು 'ಗತಿ'—ಎನ್ಗಿರದು 'ಪ್ರಾಪ್ಯತೇ'—ಎನ್ರಪಡಿ. ಪರಮೈಯಾನ ಗತಿ ಎನ್ಗಿರದು "ಮುಕ್ತಾನಾಂಪರಮಾ ಗತಿಃ"—ಎನ್ಗಿರ ಪಡಿಯೇ ಪರಮ ಪ್ರಾಪ್ಯನಾನ, ತನ್ನೈಯಾದಲ್ ತನ್ ವಿಷಯತ್ತಿಲ್ ಪರಿಪೂರ್ಣಾನುಭವತ್ತೈಯಾದಲ್ ಅವ್ವನುಭವ ಪರೀವಾಹಮಾನ ಕೈಂಕರ್ಯ ವಿಶೇಷತ್ತೈಯಾದಲ್ ಶೊಲ್ಲುಕಿರದು.

ಅವ್ಯವಹಿತಮಾಕ=ದೇಹಾವಸಾನವಾದ ಕೂಡಲೆ, ಒಂದು ಕ್ಷಣವೂ ಬಿಡದೆ ತಕ್ಷಣದಲ್ಲಿಯೇ, ಪರಮಪುರುಷಾರ್ಥತ್ತೈ=ಪರಮಪುರುಷಾರ್ಥವಾದ ಮೋಕ್ಷವನ್ನು (ಶ್ರೀವೈಕುಂಠವನ್ನು), ಅಡೈವಿಪ್ಪನ್=ಹೊಂದುವಂತೆ

ಮಾಡುತ್ತಾನೆ. ಎನ್ಗಿರ=ಎಂಬ, ವಿಶೇಷಂ ಕೋಟ್ಟೈ=ವಿಶೇಷವನ್ನು ತೋರಿಸಲು, 'ಪರಮಾಂಗತಿಂ'=ಉತ್ತಮವಾದ ಗತಿಯನ್ನು -ಎನ್ಗಿರಾನ್ =ಎಂದು ಹೇಳಿದ್ದಾನೆ. ಇಂಗು=ಇಲ್ಲಿ, 'ಗತಿ'-ಎನ್ಗಿರದು='ಗತಿ'-ಎಂಬ ಶಬ್ದವು, ಪ್ರಾಪ್ಯತೇ=ಹೊಂದುತ್ತಾನೆ.-ಎನ್ನಪಡಿ=ಎಂದು ಹೇಳಿದಂತೆ. "ಮುಕ್ತಾನಾಂ ಪರಮಾಗತಿಃ"—ಎಂದು ಹೇಳಿದಂತೆಯೇ, ಪರಮ-ಪ್ರಾಪ್ಯನಾನ=ಎಲ್ಲರಿಂದಲೂ ಹೊಂದಲೇಬೇಕಾದುದರಲ್ಲಿ ಶ್ರೇಷ್ಠನಾದ, ತನ್ನೈಯಾದಲ್=ತನ್ನನ್ನೇ ಆಗಲಿ, ತನ್ ವಿಷಯತ್ತಿಲ್=ತನ್ನ ವಿಷಯದಲ್ಲಿ, ಪರಿಪೂರ್ಣ ಅನುಭವತ್ತೈಯಾದಲ್=ಪರಿಪೂರ್ಣವಾದ ಅನುಭವವನ್ನು ಕೊಡುವುದಾಗಲಿ, ಅವ್ವನುಭವ=ಆ ಅನುಭವದ, ಪರಿವಾಹಮಾನ =ಪ್ರವಾಹರೂಪವಾದ, ಕೈಂಕರ್ಯ ವಿಶೇಷತ್ತೈಯಾದಲ್=ಶ್ರೀ ವೈಕುಂಠದಲ್ಲಿ ಮುಕ್ತನು ಮಾಡುವ ವಿಶೇಷವಾದ ಕೈಂಕರ್ಯವಾದರೋ, ಶೊಲ್ಲುಹಿರದು=ಹೇಳುತ್ತದೆ.

ಅಂದರೆ 'ನಯಾಮಿ ಪರಮಾಂಗತಿಂ' ಎಂಬಲ್ಲಿ, ಭಗವಂತನು ಶರಣಾಗತನಾದ ಚೇತನನನ್ನು ದೇಹವಿಯೋಗವಾದ ಬಳಿಕ ಕರ್ಮಬಂಧದಿಂದ ಬಿಡಿಸಿ ಶ್ರೀವೈಕುಂಠಲೋಕಕ್ಕೆ ಒಯ್ದು ಅಲ್ಲಿ ತನ್ನನ್ನೇ ಅವನಿಗೆ ಕೊಟ್ಟು ಮುಂದೆ ನಿರಂತರವಾಗಿ ತನಗೆ ಅವನು ಮಾಡುವ ಕೈಂಕರ್ಯ ವಿಶೇಷಗಳೆಲ್ಲವನ್ನೂ ಸೇರಿಸಿ ಹೇಳಿದ್ದಾನೆ.

ಇವತ್ತಿಲ್ ಒನ್ರೈಚ್ಚೊನ್ನಾಲುಂ ಮತ್ತುಳ್ಳವೈಯುಮ್ ಶೊಲ್ಲಿ-ತ್ತಾಯ್ ವಿಡಂ, ಇದಿಲ್ 'ನಯಾಮಿ'-ಎನ್ಗಿರವಿತ್ತಾಲೇ ತನ್ನುಡೈಯ ಪ್ರಾಪ್ಯತ್ವಮುಂ ಶೊಲ್ಲಿತ್ತಾಲ್ಸೈ ಉಚಿತತಮುಂ. ಪರಮೈಯಾನಗತಿ-ಎನ್ರು ಅರ್ಚಿರಾದಿಗತಿಯಾದಲ್, ಪರಮಪದತ್ತೈಯಾದಲ್ ಶೊಲ್ಲುವಾರ್ಕ್ಕು, ಮುಡಿವಿಲ್ ಅವನುಡೈಯ ಪ್ರಾಪ್ತಿಯಿಲೇ ತಾತ್ಪರ್ಯಂ. ಇಪ್ಪಡಿ ಇರಂಡು ಶ್ಲೋಕತ್ತಾಲುಂ ಇಚ್ಚೇತನನ್ ಮುಮುಕ್ಷುವಾಯುಂ ಮುಕ್ತನಾಯುಂ ಇರಂಡು ವಿಭೂತಿಯಿಲುಂ ಪೆರುಂ ಪೇರು ಶೊಲ್ಲಿ-ತ್ತಾಯ್‌ಟ್ರು.

ಇವತ್ತಿಲ್=ಈ ಮೇಲೆ ಹೇಳಿದ, ಜೀವನು ಪಡೆಯುವ ವಿಷಯ-

ಗಳಲ್ಲಿ, ಒನ್ರೈಚ್ಚೊನ್ನಾಲುಂ = ಯಾವುದಾದರೊಂದನ್ನು ಹೇಳಿದರೂ, ಮತ್ತುಳ್ಳವೈಯುಂ = ಉಳಿದುದೆಲ್ಲವನ್ನೂ, ಶೊಲ್ಲಿತ್ತಾಯ್ ವಿಡುಂ = ಹೇಳಿದಂತೆಯೇ ಆಗುತ್ತದೆ. ಇದಿಲ್ = ಈ ಪದಗಳಲ್ಲಿ, 'ನಯಾಮಿ ಎನ್ಗಿರ-ವಿತ್ತಾಲೆ = 'ಒಯ್ಯುತ್ತೇನೆ'-ಎಂಬ ಈ ಪದದಿಂದ, ತನ್ನುಡೈಯ = ಭಗವಂತನು ತನ್ನ, ಜೀವನು ಪಡೆಯಬೇಕೆಂದಿರುವ ಪರಮಪುರುಷಾರ್ಥವನ್ನು ಹೊಂದಿಸುವವನಾಗಿರುವಿಕೆಯನ್ನೂ, 'ಪರಮಾಂಗತಿಂ' ಎನ್ಗಿರವಿತ್ತಾಲ್ = 'ಪರಮಾಂಗತಿಂ'-ಎಂಬ ಪದದಿಂದ ಜೀವನು ಹೊಂದಬೇಕಾದ ವಸ್ತು ವಿಶೇಷವಾದ ಪರಮಗತಿಯನ್ನು-ಎಂಬುದರಿಂದ, ತನ್ನುಡೈಯ ಪ್ರಾಪ್ಯತ್ವಮುಂ = ತನ್ನ, ಜೀವನು ಪಡೆಯಬೇಕೆಂದಿರುವ ವಸ್ತುವಿಗಿರುವಿಕೆಯನ್ನೂ, ಶೊಲ್ಲಿ-ತ್ತಾಲ್ಲೈ = ಹೇಳಿರುವಿಕೆಯು, ಉಚಿತತಮುಂ = ಬಹಳ ಉಚಿತವಾಗಿಯೇ ಇರುತ್ತದೆ. 'ಪರಮ್ಮೈಯಾನ-ಗತಿ' ಎನ್ರು = 'ಶ್ರೇಷ್ಠವಾದ ಮಾರ್ಗ'— ಎಂದು, ಅರ್ಚಿರಾದಿಗತಿ ಯಾದಲ್ = ಅಗ್ನಿಯೇ ಮೊದಲಾದ ಆತಿ-ವಾಹಿಕರು ಕರೆದೊಯ್ಯುವ ಮಾರ್ಗ (ಮತ್ತೆ ಸಂಸಾರಕ್ಕೆ ಬರದ ಹಾದಿ), ಅಥವಾ, ಪರಮಪದತ್ತೈಯಾದಲ್ = ಶ್ರೀವೈಕುಂಠಲೋಕವನ್ನಾದರೂ, ಶೊಲ್ಲುವಾರ್ಕು = ಹೇಳುವವರಿಗೆ, ಮುಡಿವಿಲ್ = ಕೊನೆಯಲ್ಲಿ, ಅವನ ಪ್ರಾಪ್ತಿಯಿಲೇ ತಾತ್ಪರ್ಯಂ = ಆ ಭಗವಂತನನ್ನು ಸೇರುವಿಕೆಯಲ್ಲಿ ತಾತ್ಪರ್ಯವು. ಇಪ್ಪಡಿ = ಈ ರೀತಿಯಾಗಿ, ಇರಂಡು ಶ್ಲೋಕತ್ತಾಲುಂ ವರಾಹನ ಎರಡು ಶ್ಲೋಕಗಳಿಂದಲೂ, ಇಚ್ಚೇತನನ್ = ಈ ಚೇತನನು, ಮುಮುಕ್ಷುವಾಯುಂ = ಈ ದೇಹದಿಂದ ಕೂಡಿ ಮೋಕ್ಷವನ್ನು ಪಡೆಯಬೇಕೆಂಬ ಆಸೆಯಿಂದಿರುವಲ್ಲಿಯೂ, ಮುಕ್ತನಾಯುಂ = ಕರ್ಮಬಂಧವನ್ನು ಬಿಡಿಸಿಕೊಂಡು ಮುಕ್ತನಾಗಿರುವಲ್ಲಿಯೂ, ಇರಂಡುವಿಭೂತಿಯಿಲುಂ = ಭಗವಂತನ ಲೀಲಾವಿಭೂತಿ ಮತ್ತು ನಿತ್ಯವಿಭೂತಿ ಎರಡರಲ್ಲಿಯೂ, ಪೆರುಂ = ಹೊಂದುವ, ಪೇರು = ಹಿರಿಮೆಯು, ಶೊಲ್ಲಿತ್ತಾಯ್‌ಟ್ರು = ಹೇಳಿದಂತಾಯಿತು.

'ನಯಾಮಿ'-ಎನ್ಗಿರವಿದಿಲ್, ಪರಸ್ಮೈಪದತ್ತಾಲೇ, ಸ್ವತಃ ಸರ್ವ-ಶೇಷಿಯಾನ ತನ್ನುಡೈಯ ಆಶ್ರಿತಪ್ರಯೋಜನ ಪ್ರಾಧಾನ್ಯಾಭಿಸಂಧಿಯೈ ಕೋಟ್ರುವಿಕ್ಕಿರಾನ್.

ಮಾಡುವ ಕ್ರಿಯೆಯ ಫಲವು ಮತ್ತೊಬ್ಬರಿಗೆ ಬರುವಲ್ಲಿ ಮಾತ್ರ ಕ್ರಿಯಾಪದವು 'ಪರಸ್ಮೈ' (ಬೇರೊಬ್ಬರಿಗೆ–ಎಂಬ ಅರ್ಥ ತೋರುವ) ಪದದಲ್ಲಿ ಪ್ರಯೋಗಿಸಬೇಕು. ಕ್ರಿಯಾಫಲವು ತನಗೆ ಬರುವ ಹಾಗಿದ್ದರೆ ಕ್ರಿಯಾಪದವನ್ನು 'ಆತ್ಮನೆ' (ತನಗೇ-ಎಂಬ ಅರ್ಥ ತೋರುವ) ಪದದಲ್ಲಿ ಪ್ರಯೋಗಿಸಬೇಕು. "ಕ್ರಿಯಾಫಲಸ್ಯ ಅನ್ಯಗಾಮಿತ್ವೇ ಪರಸ್ಮೈಪದಂ ಬ್ರೂಯಾತ್, ಆತ್ಮಗಾಮಿತ್ವೇ ಆತ್ಮನೇ ಪದಂ ಬ್ರೂಯಾತ್". ವರಾಹಚರಮಶ್ಲೋಕದಲ್ಲಿ 'ನಯಾಮಿ' (ಒಯ್ಯುತ್ತೇನೆ)—ಎಂಬ ಪದವನ್ನು ಪರಸ್ಮೈಪದಿಯಲ್ಲಿ ಪ್ರಯೋಗಿಸಿದ್ದಾನೆ. ಈ ಪರಸ್ಮೈಪದ ಪ್ರಯೋಗದಿಂದ, ತಾನು ಸ್ವತಃ (ಸರ್ವಶೇಷಿಯಾಗಿ) ಸರ್ವರಿಗೂ ರಕ್ಷಕನಾಗಿದ್ದರೂ, ತನ್ನನ್ನು ಆಶ್ರಯಿಸಿ ಶರಣು ಎಂದು ಬೇಡಿದವರಿಗೆ ಬೇಕಾದ ಪ್ರಯೋಜನವನ್ನುಂಟುಮಾಡುವ ವಿಷಯದಲ್ಲಿ ತನಗಿರುವ ಪ್ರಾಧಾನ್ಯತೆಯನ್ನು ತೋರುವ ತನ್ನ ಅಭಿಸಂಧಿಯನ್ನು ಪ್ರಕಾಶಪಡಿಸುತ್ತಾನೆ.

ಅಚಿತ್ತಿನುಡೈಯವುಂ ಅಚಿತ್‌ಪ್ರಾಯರುಡೈಯವುಂ ವ್ಯಾಪಾರಂ ಸ್ವಪ್ರಯೋಜನ ಪರಪ್ರಯೋಜನಂಗಳ್ ಇರುಂಡೈಯುಂ ಉದ್ದೇಶಿ-ಯಾದೇ ಪರಮ ಪ್ರಯೋಜನಾರ್ಥಮಾಯಿರುಕ್ಕುಂ.

ಜ್ಞಾನಶೂನ್ಯವಾದ, ಚೈತನ್ಯವಿಲ್ಲದಿರುವ ಜಡ ಪ್ರಕೃತಿಯ ವಿಷಯ-ದಲ್ಲಿಯೂ ಸ್ವಸ್ವರೂಪ ಜ್ಞಾನವಿಲ್ಲದೆ, ಅಚಿತ್ತಿನಂತೆಯೇ ವರ್ತಿಸುವ ಬದ್ಧ-ಚೇತನರ ವಿಷಯದಲ್ಲಿಯೂ ಭಗವಂತನು ನಡೆಯಿಸುವ ವ್ಯಾಪಾರಗಳು, ತನಗಾಗಲಿ ಇತರರಿಗಾಗಲಿ—ಇಬ್ಬರಿಗೂ ಯಾವ ಒಂದು ಪ್ರಯೋಜನದ ಉದ್ದೇಶ್ಯವೂ ಇಲ್ಲದಿರುವುದರಿಂದ, ಅದು ಕೇವಲ ಪ್ರಯೋಜನಾರ್ಥವಾಗಿ ಇರುತ್ತದೆ.

ಜ್ಞಾತಾವಾನವವಸ್ಥೆಯಿಲ್ ಪ್ರಯೋಜನಾನ್ತರ ಪರ್ರ ಪರಮ ಪ್ರಯೋಜನಾರ್ಥಮಾಕ ಪ್ರವೃತ್ತಿಕ್ಕುಂ ಪೋದು, ಸ್ವಪ್ರಯೋಜನ ಉದ್ದೇಶ್ಯಮಾಕಕ್ಕೊಂಡು ನಡಕ್ಕುಂ.

ಚೇತನನು ಜ್ಞಾನವನ್ನು ಹೊಂದಿರುವ ದೆಶೆಯಲ್ಲಿ ಬೇರೊಂದು ಪ್ರಯೋಜನವನ್ನು ಅಪೇಕ್ಷಿಸಿ, ಪರಮ ಪ್ರಯೋಜನಾರ್ಥವಾಗಿ ಕೆಲಸಗಳಲ್ಲಿ

ಕೊಡಗುವಲ್ಲಿ ತನಗೆ ಪ್ರಯೋಜನವಾಗಬೇಕೆಂಬ ಉದ್ದೇಶ್ಯದಿಂದಲೇ ಕೆಲಸಗಳು ನಡೆಯುತ್ತವೆ.

ಅನನ್ಯಪ್ರಯೋಜನನಾನ ಜ್ಞಾತಾ ಸ್ವಪ್ರಯೋಜನತ್ತಿಲುಂ ಪರ-ಪ್ರಯೋಜನೋದ್ದೇಶೇನ ಪ್ರವೃತ್ತಿಕ್ಕುಂ.

ಭಗವಂತನಿಗೆ ಪ್ರೀತಿಯುನ್ನುಂಟುಮಾಡುವುದೊಂದು ಬಿಟ್ಟು, ಇನ್ನಾವ ಪ್ರಯೋಜನವನ್ನೂ ಅಪೇಕ್ಷಿಸದ ಜ್ಞಾನಿಯಾದ ಚೇತನನು, ತನಗೆ ಪ್ರಯೋ-ಜನವಾಗುವ ಕೆಲಸದಲ್ಲಿಯೂ ಭಗವಂತನಿಗೆ ('ಪ್ರೀತಿ'-ಎಂಬ) ಪ್ರಯೋ-ಜನವನ್ನೇ ಉದ್ದೇಶಿಸಿ ಕೆಲಸಗಳಲ್ಲಿ ತೊಡಗುತ್ತಾನೆ.

ನಿರುಪಾಧಿಕಸರ್ವಶೇಷಿಯಾನ ಈಶ್ವರನ್ "ಸ್ವಮುದ್ದಿಶ್ಯ"—ಎನ್ಗಿರಪಡಿಯೇ, ಪರಪ್ರಯೋಜನತ್ತಿಲುಂ, ಸ್ವಪ್ರಯೋಜನಾರ್ಥ ಮಾಕ ಪ್ರವರ್ತಿಕ್ಕಾಲುಂ, ಇವನುಡೈಯ ಸ್ವಾಶ್ರಿತಪಾರತಂತ್ರ್ಯ ಪ್ರಕಾರತ್ತೈಚ್ಚೊಲ್ಲಪ್ಪಾರ್ಕ್ಕಾಲ್, "ವರದ ಸಕಲಮೇತತ್ ಸಂಶ್ರಿ-ತಾರ್ಥಂ ಚಕರ್ಥ"—ಎನ್ಗಿರಪಡಿಯೇ, ಸ್ವಪ್ರಯೋಜನತ್ತಿಲುಂ ಪರ-ಪ್ರಯೋಜನಾರ್ಥಮಾಕ ಪ್ರವೃತ್ತಿಕ್ಕು ಮೆನ್ನಲಾಂ.

ಯಾವುದೋ ಒಂದು ಕಾಲ ದೇಶಗಳಲ್ಲಿ ಮಾತ್ರ—ಎಂದು ಹೇಳಲಾಗದಂತೆ ಎಲ್ಲ ಕಾಲಗಳಲ್ಲಿಯೂ ಎಲ್ಲ ದೇಶಗಳಲ್ಲಿಯೂ ಎಲ್ಲ ಚೇತನಾಚೇತನ ವರ್ಗಕ್ಕೂ ರಕ್ಷಕನಾಗಿ—'ನಿರುಪಾಧಿಕಸರ್ವಶೇಷಿ'—ಎಂದು ಕರೆಯಲ್ಪಡುವ ಈಶ್ವರನು, ಯಾವ ಒಂದು ಕೆಲಸವನ್ನು ಮಾಡಿದರೂ, ತನ್ನ ಸರ್ವಶೇಷಿತ್ವವನ್ನುಳಿಸಿ-ಕೊಳ್ಳಲು ತನ್ನ ಸಂತೋಷಾರ್ಥವಾಗಿ 'ಸ್ವಮುದ್ದಿಶ್ಯ'—ತನ್ನ ಉದ್ದಿಶ್ಯ-ದಿಂದಲೇ ತೊಡಗುವುದರಿಂದ, ಇತರರಿಗೆ ಪ್ರಯೋಜನವಾಗುವ ಕೆಲಸಗಳ-ಲ್ಲಿಯೂ ಸ್ವಪ್ರಯೋಜನಾರ್ಥವಾಗಿಯೇ ಪ್ರವರ್ತಿಸಿದರೂ, ಭಗವಂತನ—ತನ್ನನು ಆಶ್ರಯಿಸಿದ ಭಕ್ತರಿಗೆ ತಾನು ಅಧೀನನಾಗಿ ಅವರ ಇಷ್ಟಾರ್ಥಗಳನ್ನು ತಾನು ಪೂರೈಸುವ ಕ್ರಮವನ್ನು (ಸ್ವಾಶ್ರಿತಪಾರತಂತ್ರ್ಯ ಪ್ರಕಾರವನ್ನು) ಹೇಳತೊಡಗಿದರೆ, ಕೂರತ್ತಾಳ್ವಾನ್‌ರವರು ವರದರಾಜಸ್ತವದಲ್ಲಿ ಹೇಳಿರುವಂತೆ—"ಎಲೈ ವರದನೇ ಸೃಷ್ಟಿ ಸ್ಥಿತಿ ಲಯಾದಿಗಳೆಲ್ಲವನ್ನೂ ಮಾಡುವುದು—ನಿನ್ನನ್ನಾಶ್ರಯಿಸಿದ ಚೇತನನಿಗೋಸ್ಕರವೇ ಅಲ್ಲವೇ!"—ಎಂಬಂತೆ, ಭಗ-

ವಂತನು ಸ್ವಪ್ರಯೋಜನದಲ್ಲಿಯೂ ಪರಪ್ರಯೋಜನವನ್ನೂ ಹೊಂದಿರುತ್ತಾ-ನೆಂದೇ ಹೇಳಬಹುದು.

ಇವ್ವರ್ಥಂಗಳ್ಳೈ 'ಕಾಷ್ಠಪಾಷಾಣಸನ್ನಿಭಂ, ಸ್ಮರ್ತಾ, ಮದ್ಭಕ್ತಂ, ಅಹಂ ಸ್ಮರಾಮಿ, ನಯಾಮಿ'— ಇತ್ಯಾದಿಗಳಿಲೇ ಅನುಸಂಧಿಪ್ಪದು.

ಈ ಮೇಲೆ ಹೇಳಿದ ಭಗವಂತನ ಪರಪ್ರಯೋಜಕವಾದ ಆಶ್ರಿತ ರಕ್ಷಣ ಮಾಡುವ ಗುಣವನ್ನು, ಚರಮಶ್ಲೋಕದಲ್ಲಿರುವ "ಕಾಷ್ಠಪಾಷಾಣಸನ್ನಿಭಂ, ಸ್ಮರ್ತಾ, ಮದ್ಭಕ್ತಂ, ಅಹಂ ಸ್ಮರಾಮಿ, ನಯಾಮಿ"— ಇತ್ಯಾದಿ ಪದಗಳಲ್ಲಿ ಅನುಸಂಧಾನ ಮಾಡುವುದು.

ಇಡಂ ಪೆತ್ತಾರೆಲ್ಲಾಂ ಎನ್ನುಡಲಾಯ್ ನಿರ್ಕ
ಇಡರ್ ಪಿರಪ್ಪೊನ್ನಿವೈಯಿಲ್ಲಾವೆನ್ನೈಯನ್ಪಾಲ್,
ಅಡಂ ಪತ್ತಾವುವನೆನ್ರು ನಿನ್ನೈಂದಾರ್ ಯಾರ್ವ
ಅವನಾವಿ ಶರಿಯುಂ ಪೋದರಿವುಮಾರಿ,
ಉಡಂಬಿಲ್ ತಾನುಪಲಂ ಪೋಲ್ ಕಿಡಕ್ಕನಾನೇ,
ಉಯ್ಯುಂ ವಕೈ ನಿನ್ನೈನ್ದು ಉಯರ್‌ನ್ದ ಗತಿಯಾಲ್ ಎನ್‌ತನ್
ಇಡಂ ಪೆತ್ತೆನ್ನುಡನ್ ವಾಳ್ವ ಎಡುಪ್ಪನೆನ್ನ,
ಎಂಬಿರುವರ್ಾ ಅರುಳ್ ಪೆತ್ತು ಮರುಳ್ ಶೆಕ್ಕೋಮೇ ॥

ಇಡಂ-ಪೆತ್ತಾರ್-ಎಲ್ಲಾಂ = (ಈ ಪ್ರಕೃತಿಯಲ್ಲಿ ಜಾಗವನ್ನು) ಶರೀರವನ್ನು ಪಡೆದ ಎಲ್ಲ ಚೇತನರೂ, ಎನ್-ಉಡಲಾಯ್-ನಿರ್ಕ = ನನಗೆ ಶರೀರವಾಗಿರಲು, ಇಡರ್ = ವಿಪತ್ತೂ, ಪಿರಪ್ಪು = ಜನನವೂ, ಇವೈ = ಇವು, ಒನ್ರುಂ = ಯಾವುದೊಂದೂ, ಇಲ್ಲಾ = ಇಲ್ಲದ, ಎನ್ನೈ = ನನ್ನನ್ನು, ಅನ್ಪಾಲ್ = ಭಕ್ತಿಯಿಂದ, ಅರ್ವ = ಆ ಸರ್ವೇಶ್ವರನು, ಅಡಂ = ಕೇಡಿಗೆ, ಪತ್ತಾಂ = ಅವಲಂಬನವಾಗುವನು, ಎನ್ರು = ಎಂದು ಮನದಲ್ಲಿ ಅರಿತು, ಯಾರ್ವ = ಯಾವನೊಬ್ಬನು, ನಿನ್ನೈಂದಾರ್ = ಆ ಭಗವಂತನನ್ನು ಸ್ಮರಿಸಿ-ದನೋ, ಅರ್ವ = ಅವನ, ಆವಿ = ಪ್ರಾಣವು (ಜೀವವು), ಶರಿಯುಂ ಪೋದು = (ದೇಹವನ್ನೂ) ಬಿಟ್ಟು ಹೋಗುವಾಗ, ಅರಿವುಮಾರಿ = ಜ್ಞಾನವು ತಪ್ಪಿಹೋಗಿ, ಉಡಂಬಿಲ್ = ದೇಹದಲ್ಲಿ, ತಾನ್ = ಆ

ಜೀವಾತ್ಮನು, ಉಪಲಂಪೋಲ್=ಕಲ್ಲಿನಂತೆ, ಕಿಡಕ್ಕ=ಇರಲು, ನಾನೇ =ಸರ್ವರಕ್ಷಕನಾದ ನಾನೇ, ಉಯ್ಯುಂವಹ್ಮೈ=ಅವನು ಉಜ್ಜೀವಿಸುವ ರೀತಿಯನ್ನು, ನಿನ್ನೈಂದು=ನೆನೆದು, ಉಯರ್ನ್ದ = ಉತ್ಕೃಷ್ಟವಾದ, ಗತಿಯಾಲ್=(ಅರ್ಚಿರಾದಿ) ಮಾರ್ಗದಿಂದ, ಏರ್ತ್ತಇಡಂ=ಯಾವ ನನ್ನ ಸ್ಥಾನವುಂಟೋ ಆ ಶ್ರೀವೈಕುಂಠ ಲೋಕಕ್ಕೆ ಕರೆದೊಯ್ದು, ಪರಮಪದವನ್ನು, ಪೆತ್ತು=ಹೊಂದಿ, ಎನ್ನೊಡ್ಡೆ=ನನ್ನೊಡನೆ, ವಾಳ=ಬಾಳುವಂತೆ, ಎಡು-ಪ್ಪೆ=ಉದ್ಧರಿಸುವೆನು. ಎನ್ರು=ಎಂದು ಹೇಳಿದ, ಎಂಬೆರುಮಾ=ಪರಮಾತ್ಮನಾದ ವರಾಹನ, ಅರುಳ್‌ಪೆತ್ತು=ದಯೆಯನ್ನು ಸಂಪಾದಿಸಿ, ಮರುಳ್=ಅಜ್ಞಾನವನ್ನು, ಶೆತ್ತೋಂ=ನೀಗಿದವು.

ಇರುಂಡುರೈಯಾದ ನಮ್ಮೀನಮುರೈತ್ತವುರೈಯಿರಂಡಿ
ತಿರಂಡ ಪೊರುಳ್‌ಕಳ್ ತೆಳಿನ್ದಡಿಶೂಡಿ ನನ್ತಿಣ್ಣರುಳಾಲ್,
ಶುರುಣ್ಡನಂ ಜ್ಞಾನಚ್ಚುಡರೊಳಿ ಶುತ್ತುಂ ಪರಪ್ಪದ ಮುೞ್,
ಪುರಣ್ಡದುನುಂ ವಿನೈಪೋಮಿಡಂ ಪಾರ್ತಿನಿಪ್ಪೊಮಳವೇ ||

(ಒಂದು ಸಲ ಹೇಳಿದ ಬಳಿಕ ಅದಕ್ಕೆ ವಿರುದ್ಧವಾಗಿ ಮತ್ತೆ) ಇರಂಡು =ಎರಡು ನುಡಿಯನ್ನು, ಉರೈಯಾದ=ಹೇಳಿದ, ನಂ=ನಮ್ಮ ಸ್ವಾಮಿ-ಯಾದ, ಏನಂ=ಶ್ರೀವರಾಹರೂಪಿಯಾದ ನಾರಾಯಣನು, ಉರೈತ್ತ= ಉಪದೇಶಿಸಿದ, ಉರೈ-ಇರಂಡಿ=ಎರಡು ವಾಕ್ಯಗಳ (ರಹಸ್ಯಶಿಖಾಮಣಿಯ ಎರಡು ಶ್ಲೋಕಗಳ), ತಿರಂಡ=ಸಾರಾಂಶವಾದ, ಪೊರುಳ್‌ಹಳ್=ಅರ್ಥ-ಗಳನ್ನು, ತೆಳಿಂದ್=ಮನದಟ್ಟಾಗುವಂತೆ ಚೆನ್ನಾಗಿ ತಿಳಿದುಕೊಂಡು, ಅಡಿ= ಭಗವಂತನ ಅಡಿಗಳನ್ನು, ಶೂಡಿನಂ=ತಲೆಯ ಮೇಲೆ ಧರಿಸಿದೆವು (ಅಂದರೆ, ಪರಮಾತ್ಮನ ಚರಣಕಮಲವನ್ನಾಶ್ರಯಿಸಿದವರಾದೆವು). ತಿಣ್=ದೃಢ-ವಾದ, ಇರುಳಾಲ್=ಅಜ್ಞಾನಾಂಧಕಾರದಿಂದ, ಶುರುಂಡ=ಮುದುಡಿ-ಕೊಂಡ (ಸಂಕುಚಿತವಾದ), ನಂ=ನಮ್ಮ, ಜ್ಞಾನಚ್ಚುಡರ್=ಜ್ಞಾನ-ವೆಂಬ ತೇಜಸ್ಸಿನ, ಒಳಿ=ಬೆಳಕು, ಶುತ್ತುಂ=ಸುತ್ತಲೂ ಸಂಪೂರ್ಣವಾಗಿ, ಪರಪ್ಪದಮುೞ=ಹರಡುವುದಕ್ಕೆ ಮೊದಲು, ನಂ=ನಮ್ಮ, ವಿನೈ= ಪುಣ್ಯಪಾಪರೂಪವಾದ ಕರ್ಮಗಳು, ಪುರಂಡದ್=(ಬಿಟ್ಟು) ಹೊರಳಿ-

ಕೊಂಡು ಹೊರಟುಹೋದುವು. ಇನಿ=ಇನ್ನು ಮುಂದೆ, ಪೋಂ-ಇಡಂ= ಅವು ಹೋಗುವ ಸ್ಥಳವನ್ನು, ಪಾರ್ತು=ನೋಡಿಕೊಂಡು, ಪೋಂ-ಅಳವೇ ಹೋಗುವುದೊಂದೇ ಉಳಿದಿರುವುದು.

ಮಲ್ಲೈಯುಂ ಕುಲ್ಲೈಯುಂ ಎನ್ರೆಣ್ಣಿಯುಂ ವ‍ ಪೆರುಂ
ಪುಣ್ ತಿರಂಗಿ,
ತಲ್ಲೈಯುಂ ವಳುತ್ತಪಿ‍ ತಾನೇ ಅಳಿಯ ವಿಶ್ಶೈಕಿನ್ರಿಲೀರ್,
ಅಲ್ಲೈಯುಂ ಕಡಲ್‌ಕೊಂಡ ವೈಯಮಳಿತ್ತವ‍ ಮೆಯ್ಯರುಳೇ,
ನಿಲ್ಲೈಯೆನ್ರುನಾಡಿ ನಿಲ್ಲೈನಿನ್ನ ಪೊಯ್‌ಮಶಿ ನೀಕ್ಕುಮಿನೇ ॥

ಮಲ್ಲೈಯುಂ = ಪರ್ವತಗಳೂ, ಕುಲ್ಲೈಯುಂ = ರೂಪಾಂತರ ಹೊಂದುವುವು (ನಾಶವಾಗುವುವು), ಎನ್ರು=ಎಂದು, ಎಣ್ಣಿಯುಂ=ತಿಳಿದಿದ್ದರೂ, ವ‍=ದೃಢವಾದ, ಪೆರುಂ=ದೊಡ್ಡದಾದ, ಪುಣ್=(ಗಾಯ ಹೊಂದಲರ್ಹವಾದ) ಶರೀರವು, ತಿರಂಗಿ=ನೆರಿಗಟ್ಟಿಕೊಂಡು (ಮುಪ್ಪು ಬಂದು), ತಲ್ಲೈ=ತಲೆಯ ಕೂದಲು, ವೆಳುತ್ತಪಿನ್ನುಂ=ಬಿಳುಪಾದಮೇಲೂ, ತಾನೇ=ತಾನಾಗಿಯೇ, ಅಳಿಯ=ನಶಿಸಿ ಹೋಗುವುದೆಂದಿದ್ದರೂ, ಇಶ್ಶೈಕಿನ್ರಿಲೀರ್=ಉಪಾಯವನ್ನು ಆಶ್ರಯಿಸುವಂತೆ ಅಂಗೀಕರಿಸದೆ ಇರುವವರಾದಿರಿ (ಅನ್ಯಾಧೀನರಾಗಿ ಶರೀರಕ್ಕೆ ನಾಶವುಂಟಾದರೆ, ಆ ದುಃಖವನ್ನು ಅನುಭವಿಸುವುದೇ ಹೊರತು, ನಮ್ಮನ್ನು ಮುಪ್ಪು ಅಪ್ಪಿತಲ್ಲಾ, ಈ ದುಃಖಕರವಾದ ಶರೀರವನ್ನು ಬಿಟ್ಟು, ಪರಮಪದವನ್ನು ಪಡೆಯುವ ಉಪಾಯವನ್ನು ಅರಿಯೋಣ ಎಂಬ ಇಚ್ಛೆಯೂ ಸಹ ಇನ್ನೂ ನಿಮಗೆ ಬರಲಿಲ್ಲ. ಅದಕ್ಕೆ ನೀವೇನು ಮಾಡಬೇಕೆಂಬುದನ್ನು ಹೇಳುವೆನು ತಿಳಿಯಿರಿ). ಅಲ್ಲೈಯುಂ= ದೊಡ್ಡ ದೊಡ್ಡ ಅಲೆಗಳಿಂದ ಕೂಡಿದ, ಕಡಲ್ = (ಪ್ರಳಯಕಾಲದ) ಸಮುದ್ರದಿಂದ ಕೂಡಿದ, ಕೊಂಡ=ನುಂಗಲ್ಪಟ್ಟ (ಪ್ರಳಯಕಾಲದಲ್ಲಿ ನೀರಿನಲ್ಲಿ ಮುಳುಗಿದ), ವೈಯ್ಯಂ=ಭೂಮಿಯನ್ನು [ಅಲ್ಲೈಯುಂ=ಮತ್ತೆ ಮತ್ತೆ ಅಲೆದಾಡುತ್ತಿರುವ, ಪಡಲ್=(ಭವ) ಸಂಸಾರ ಸಾಗರದಲ್ಲಿ, ಕೊಂಡ =ಮಗ್ನರಾಗಿರುವ, ವೈಯ್ಯಂ=ಜಗದ ಜನರನ್ನು], ಅಳಿತ್ತವ‍=ರಕ್ಷಿಸಿದ ಶ್ರೀವರಾಹಮೂರ್ತಿಯ, ಮೆಯ್=ಸತ್ಯವಾದ, ಅರುಳೇ=ದಯೆಯೇ

(ಕೃಪೆಯಿಟ್ಟು ಉಪದೇಶಿಸಿದ ಸುಲಭೋಪಾಯವಾದ ಶರಣಾಗತಿಯೇ), ನಿಲೈ-ಎನ್ರು=ಸ್ಥಿರವಾದ ಉಪಾಯವೆಂದು, ನಾಡಿ=ವಿಮರ್ಶಿಸಿ ತಿಳಿದು, ನಿಲೈ-ನಿನ್ರ=ಇದುವರೆಗೆ ಸ್ಥಿರವಾಗಿ ನಿಂತಿದ್ದ, ಪೊಯ್-ಮತಿ= ಶರೀರಾತ್ಮಭ್ರಮಾದಿಗಳಾದ ಮಿಥ್ಯಾಜ್ಞಾನವನ್ನು, ನೀಕ್ಕುಮಿನ್ = ನೀಗಿ ಕೊಳ್ಳಿ. [ಇದುವರೆಗೆ ಇಂಥ ಅಜ್ಞಾನವಿದ್ದುದು ಹೋಗಲಿ. ಇನ್ನಾದರೂ ಸದಾಚಾರ್ಯರ ಮೂಲಕ ತತ್ತ್ವಜ್ಞಾನ ಸಂಪಾದಿಸಿ ಸದ್ಗತಿ ಪಡೆಯಲು ಯತ್ನಿಸಿ ಸಫಲರಾಗಿ—ಎಂದು ಆಚಾರ್ಯರು ತಮ್ಮ ಸಂದೇಶವನ್ನು ನಮಗೆ ಈ ಪದ್ಯದ ಮೂಲಕ ಕೊಟ್ಟಿದ್ದಾರೆ].

ಸ್ವಸ್ಥಂ ಚಿತ್ತಂ ಸುಖಮತಿವಪುಃ ಧಾತುಸಾಮ್ಯಂ ಚ ಕೃತ್ವಾ
ಸ್ವಾತ್ಮಾನಂ ಚ ಸ್ಮೃತಿಪದಮಜಂ ವಿಶ್ವರೂಪಂ ವಿತನ್ವನ್ ।
ಕಾಲೇ ಪ್ರಾಪ್ತೇ ಕರಣವಿಲಯಾತ್ ಕಾಷ್ಠಪಾಷಾಣಕಲ್ಪಾನ್
ನಾಥಃ ಪೋತ್ರೀ ನಯತು ಕೃಪಯಾ ನಾಥಿತಃ ಸಂಪದಂ ನಃ ॥

ನಃ=ನಮ್ಮ, ಚಿತ್ತಂ = ಮನಸ್ಸನ್ನು, ಸ್ವಸ್ಥಂ = ತನ್ನಲ್ಲಿಯೇ ಏಕಾಗ್ರತೆಯಿಂದ ನಿಲ್ಲುವಂತೆಯೂ, ವಪುಃ=ದೇಹವು, ಸುಖಂ=ಸೌಖ್ಯ-ದಿಂದಿರುವಂತೆಯೂ, ಚ=ಮತ್ತು, ಧಾತುಸಾಮ್ಯಂ=ನಮ್ಮ ಸಪ್ತಧಾತು-ಗಳೂ ಯಾವ ವಿಧವಾದ ವಿಕಾರಕ್ಕೂ ಒಳಗಾಗದೆ ಸಮಸ್ಥಿತಿಯಲ್ಲಿರು-ವಂತೆಯೂ, ಕೃತ್ವಾ=ಮಾಡಿ, ಅಜಂ=ಕರ್ಮಬಂಧವಾಗಿ ಯಾವ ಒಂದು ಜನ್ಮವನ್ನೂ ಪಡೆಯದಿರುವ, ವಿಶ್ವರೂಪಂ=ಪ್ರಪಂಚದಲ್ಲಿನ ಚೇತನಾ-ಚೇತನಗಳೆಲ್ಲದರಲ್ಲಿಯೂ ಅಂತರ್ಯಾಮಿಯಾಗಿದ್ದು, ವಿಶ್ವವನ್ನೇ ತನ್ನ ದೇಹವನ್ನಾಗಿ ಹೊಂದಿ 'ವಿಶ್ವರೂಪ'ನೆಂದೆನಿಸಿಕೊಂಡಿರುವ, ಸ್ವಾತ್ಮಾನಂ= ತನ್ನನ್ನು, ನಃ=ನಮ್ಮ, ಸ್ಮೃತಿಪದಂ=ಸ್ಮರಣೆಗೆ ವಿಷಯವಾಗುವಂತೆ, ವಿತನ್ವನ್=ಮಾಡಿಕೊಂಡು, ನಾಥಿತಃ=(ನಮ್ಮಿಂದ, ನಮ್ಮನ್ನು ರಕ್ಷಿಸ-ಬೇಕೆಂದು) ಪ್ರಾರ್ಥಿಸಲ್ಪಟ್ಟವನಾದ, ನಃ=ನಮ್ಮ, ನಾಥಃ=ಸ್ವಾಮಿ-ಯಾದ, ಪೋತ್ರೀ=ವರಾಹಸ್ವಾಮಿಯು, ಕಾಲೇಪ್ರಾಪ್ತೇ=ನಮ್ಮ ದೇಹಾವಸಾನ ಕಾಲವು ಸಂಭವಿಸಲು, ಕರಣವಿಲಯಾತ್=ಇಂದ್ರಿಯಗಳೆ-ಲ್ಲವೂ (ಸೂಕ್ಷ್ಮದೇಹದಲ್ಲಿನ ತಮ್ಮ ತಮ್ಮ ಇಂದ್ರಿಯಗಳಲ್ಲಿ ಲಯ

ಹೊಂದಿರುವುದರಿಂದ) ಶಕ್ತಿಗುಂದಿರುವುದರಿಂದ, ಕಾಷ್ಠಪಾಷಾಣಕಲ್ಪಾನ್= ಕಟ್ಟಿಗೆ ಕಲ್ಲುಗಳಿಗೆ ಸಮನಾಗಿ ಬಿದ್ದಿರುವ, ನಃ=ನಮ್ಮನ್ನು, ಕೃಪಯಾ= ತನ್ನ ದಯೆಯಿಂದಲೇ, ಸಂಪದಂ=ಶ್ರೇಷ್ಠವಾದ ಪರಮಪದಕ್ಕೆ, ನಯತು =ಒಯ್ಯಲಿ.

ಇಲ್ಲಿಗೆ ಶ್ರೀಮದ್ವೇದಾಂತದೇಶಿಕರಿಂದ ರಚಿಸಲ್ಪಟ್ಟಿರುವ
ಶ್ರೀವರಾಹಚರಮಶ್ಲೋಕಗಳ ವ್ಯಾಖ್ಯಾನರೂಪವಾದ 'ರಹಸ್ಯಶಿಖಾಮಣಿ'
ಎಂಬ ಗ್ರಂಥದ ಕನ್ನಡ ವಿವರಣೆಯು ಮುಕ್ತಾಯವಾಗಿದೆ.

ಕವಿತಾರ್ಕಿಕ ಸಿಂಹಾಯ ಕಲ್ಯಾಣಗುಣಶಾಲಿನೇ ।
ಶ್ರೀಮತೇ ವೇಂಕಟೇಶಾಯ ವೇದಾಂತಗುರವೇ ನಮಃ

॥ ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥

## ಇದೇ ಲೇಖಕರ ಕನ್ನಡ ಪ್ರತಿಪದಾರ್ಥ ಮತ್ತು ವಿವರಗಳೊಡನೆ ಮುದ್ರಿತವಾಗಿರುವ ಇತರ ಕೃತಿಗಳು :

೧. ಭಗವದ್ದಿವ್ಯಮಂಗಳ ವಿಗ್ರಹಧ್ಯಾನ ಮತ್ತು ಮಂಗಳಾಶಾಸನ.

೨. ಗೋದಾಚತುಶ್ಶ್ಲೋಕೀ.

೩. ಆಚಾರ್ಯೋಪಾಸನಮ್.
[ಕುಮಾರ ನಯಿನಾರಾಚಾರ್ಯರಿಂದ ಅನುಗ್ರಹಿತವಾದ ವೇದಾಂತ ದೇಶಿಕರ ವಿಷಯಕವಾದ ಸ್ತೋತ್ರಗಳು.]

೪. ಪರತ್ವಾದಿ ಪಂಚಕಸ್ತುತಿಃ ಮತ್ತು ಪರಮಾರ್ಥಸ್ತುತಿಃ.

೫. ಗೋದಾಸೂಕ್ತಸರ್ವಸ್ವಮ್.
[ಗೋದಾದೇವಿಯ ಕೃತಿಯಾದ ನಾಚ್ಚಿಯಾರ್ ತಿರುಮೊಳಿಯ ಸಂಕ್ಷಿಪ್ತರೂಪ.]

೬. ಗೋದಾಸ್ತುತಿಃ.

೭. ಅವತಾರ ರಹಸ್ಯಮ್.